# ಮಹಾಭಾರತ

ಡಾ. ವಿಜಯಾ ಸುಬ್ಬರಾಜ್



MAHABHARATHA - Articles

Written by
**Dr. Vijaya Subbaraj**
No. 51, Hamsi, Ist 'A' Cross
35th Main
Banagiri nagara
Banashankari 3rd Stage
Bangalore - 560 085
Mobile : 99869 28876

Published by
**Akshara Mandira**
No. 277/3, 5th Cross
Vidhana Soudha Extn.,
Laggere
Bangalore - 560 058



First Impression : 2015
Price : ₹ 150/-
Pages : iv + 188 = 192
Paper Used : 80 GSM Maplitho
Book Size : 1/8th Demmy

Printed by
**Shakthi Printers & Publishers**
Bengaluru- 560 058

## ಮೊದಲ ಮಾತು

ರಾಮಾಯಣ ಮತ್ತು ಮಹಾಭಾರತಗಳು ನಮ್ಮ ಭಾರತೀಯ ಸಂಸ್ಕೃತಿಯ ಅವಿಚ್ಛಿನ್ನ ಭಾಗವಾಗಿವೆ. ರಾಮಯಣವು ತನ್ನ ನಡೆತೆ, ವ್ಯಕ್ತಿತ್ವಗಳಿಂದ ದೇವರ ಎತ್ತರಕ್ಕೆ ಏರಿದ ಒಬ್ಬ ಸದ್ಗುಣಿಯಾದ ಆದರ್ಶ ಮಾನವನ ಕಥೆಯನ್ನು ನಿರೂಪಿಸುತ್ತದೆ. ಇದರ ನಂತರ ರಚಿತವಾದ ಮಹಾಭಾರತಕ್ಕೆ ಐದು ಸಾವಿರ ವರ್ಷಗಳ ಇತಿಹಾಸವಿದೆ. ಇಲ್ಲಿ ಒಬ್ಬ ವ್ಯಕ್ತಿಯನ್ನಲ್ಲ, ಹತ್ತು ಹಲವು ವಿಭಿನ್ನ ಸ್ವಭಾವಗಳ, ಶಕ್ತಿ, ಸಾಮರ್ಥ್ಯಗಳನ್ನು ಹೊಂದಿದ ಧೀರನಾಯುಕರ ಮತ್ತು ಸಂಕೀರ್ಣ ಸಂದರ್ಭ, ಸನ್ನಿವೇಶಗಳನ್ನು ಬದುಕಿನ ಹಲವಾರು ಮುಖಗಳನ್ನು, ಮೌಲ್ಯಗಳ ಸಂಘರ್ಷವನ್ನು ಚಿತ್ರಿಸಲಾಗಿದೆ. ಸಂಕ್ಷೇಪವಾಗಿ ಹೇಳುವುದಾದರೆ ಇದು ಮನುಷ್ಯನ ವಿಸ್ತೃತವಾದ ಭಾವ, ಸ್ವಭಾವಗಳ ಜಗತ್ತನ್ನು ನಮ್ಮ ಮುಂದೆ ಅನಾವರಣಗೊಳಿಸತ್ತದೆ.

ಮಹಾಭಾರತ ಸಮಕಾಲೀನವಾಗಿ ರಾಮಾಯಣಕ್ಕಿಂತ ಪ್ರಸ್ತುತವೆನಿಸುತ್ತದೆ. ಹಲವಾರು ಸೃಜನಶೀಲ ಮನಸ್ಸುಗಳಿಗೆ ಅದ್ಭುತ ಪ್ರೇರಣೆಯಾಗಿದೆ; ಆಕರವಾಗಿದೆ. ಅದ್ದರಿಂದಲೇ ಇಲ್ಲಿನ ಸಂದರ್ಭ, ಸನ್ನಿವೇಶ, ಪಾತ್ರಗಳನ್ನು ನೂತನ ದೃಷ್ಟಿಯಿಂದ ಮತ್ತೆ ಮತ್ತೆ ವ್ಯಾಖ್ಯಾನಿಸಿ ಬರೆಯಲಾಗಿದೆ.

ಇಂತಹ ಅದ್ಭುತವಾದ ಮಹಾಕಾವ್ಯವನ್ನು, ಕಥೆಯಾಗಿಸಿ ಮಕ್ಕಳಿಗೆ ಬರೆಯುವುದು ನಿಜಕ್ಕೂ ಒಂದು ಸವಾಲಾಗಿದೆ. ನೂರಾರು ಘಟನೆಗಳು, ಪಾತ್ರಗಳು ಎಲ್ಲವನ್ನು ಒಟ್ಟಿಗೆ ಒಂದೆಡೆ ತಂದು ಸಮರ್ಪಕವಾದ, ಸರಳವಾದ ರೀತಿಯಲ್ಲಿ ಬರೆಯುವುದು ಬಹುದೊಡ್ಡ ಸಾಹಸವೇ ಎನಿಸುತ್ತವೆ. ಆದರೂ ಮಕ್ಕಳಿಗೆ ನಮ್ಮ ಸಂಸ್ಕೃತಿಯು ಮತ್ತು ಕಾವ್ಯ ಪರಂಪರೆಯನ್ನು ಪರಿಚಯಿಸಬೇಕೆಂಬ ಉದ್ದೇಶದ ಜೊತೆಗೆ ನನ್ನ ಈ ಕೃತಿಯ ರಚನೆಗೆ ಒತ್ತಾಯ ಮಾಡಿದ ಪ್ರಕಾಶಕರಾದ ಅಕ್ಷರ ಮಂದಿರದವರಿಗಾಗಿ ನಾನು ಈ ಕೃತಿಯನ್ನು ಬರೆಯುವ ಸಾಹಸಕ್ಕೆ ಮುಂದಾಗಿದ್ದೇನೆ. ಅಲ್ಲದೆ ನಮ್ಮ ಕಿರಿಯ ಗೆಳೆಯರು ತಮ್ಮ ತಾಯಿ, ಅಜ್ಜಿಯರಿಂದ ಕೇಳಿರಬಹುದಾದ ಏಕಲವ್ಯ, ಅರ್ಜುನ, ಅಭಿಮನ್ಯು, ಭೀಮ ಮತ್ತು ಇತರರ ಕತೆಗಳನ್ನು ಮತ್ತೋಮ್ಮೆ ನೆನಪಿಸಿಕೊಳ್ಳಲಿ ಎಂಬ ಆಶಯವೂ ಇದರ ಹಿಂದಿದೆ.

ಮಹಾಭಾರತದ ಇಡೀ ಕತೆಯನ್ನು ಆದಷ್ಟೂ ಸರಳವಾಗಿ ಕೊಡಬೇಕೆಂಬ ಕಾರಣಕ್ಕಾಗಿ, ಆಧ್ಯಾತ್ಮಿಕ ಮತ್ತು ತಾತ್ವಿಕ ಚರ್ಚೆಗಳನ್ನೂ, ಅನವಶ್ಯಕ ಪಾತ್ರಗಳನ್ನು, ಅತಿಯಾದ ವಿವರಗಳನ್ನು ಹೊರತು ಪಡಿಸಿದ್ದೇನೆ.

ಈ ಕೃತಿಯನ್ನು ಪ್ರಕಟಿಸುತ್ತಿರುವ ಅಕ್ಷರ ಮಂದಿರದ ಗೆಳೆಯರಿಗೆ ಮತ್ತು ಅಂದವಾಗಿ ಮುದ್ರಿಸಿದ ಮುದ್ರಕರಿಗೆ, ಮುಖಪುಟ ರಚಿಸಿಕೊಟ್ಟ ಕಲಾವಿದರಿಗೆ ಅಭಾರಿಯಾಗಿದ್ದೇನೆ.

**–ಡಾ. ವಿಜಯಾ ಸುಬ್ಬರಾಜ್**

# ಮಹಾಭಾರತ ಪ್ರವೇಶಕ್ಕೆ ಮೊದಲು

ರಾಮಾಯಣದಂತೆ ಮಹಾಭಾರತವೂ ನಮ್ಮ ಭಾರತೀಯ ಸಾಂಸ್ಕೃತಿಕ ಪರಂಪರೆಯ ಒಂದು ಮಹತ್ವದ ಭಾಗ; ಅದು ನಮ್ಮ ಪವಿತ್ರ ಗ್ರಂಥ; ಸಾಹಿತ್ಯಕವಾಗಿ ಒಂದು ಮಹಾಕಾವ್ಯ. ಅಧ್ಯಾತ್ಮಿಕ ಚಿಂತನೆಗೆ ಮತ್ತು ಬದುಕನ್ನು ಎದುರಿಸಲು ಬೇಕಾದ ಸತ್ವ, ಸಾಮರ್ಥ್ಯಗಳನ್ನು ರೂಢಿಸಿಕೊಳ್ಳಲು ಸ್ಫೂರ್ತಿ ಪ್ರಚೋದಕವಾಗಿ ಅನಿವಾರ್ಯವಾಗಿರುವ ಮಹತ್ವದ ಕೃತಿ. ಇದರ ಭಾಗವಾಗಿರುವ ಭಗವತ್‌ಗೀತೆಯಂತೂ ಜೀವನದರ್ಶನ, ಕರ್ತವ್ಯ, ಭಕ್ತಿ, ಜ್ಞಾನ, ವೈರಾಗ್ಯ ಆತ್ಮ - ಇತ್ಯಾದಿ ಮಹತ್ವದ ವಿಚಾರಗಳ ಬಗ್ಗೆ ವಿಸ್ತಾರವಾದ ಅರಿವನ್ನು ಮೂಡಿಸುತ್ತದೆ.



ಐದು ಸಾವಿರ ವರ್ಷಗಳ ಹಿಂದೆ ವ್ಯಾಸ ಮಹರ್ಷಿಗಳು ಬರೆದ 'ಮಹಾಭಾರತ' ಕಾವ್ಯಕ್ಕೆ ಮೊದಲಿಗೆ 'ಜಯ' ಎಂಬ ಹೆಸರಿತ್ತು. ಅಲ್ಲದೆ ಅದು ಬಹಳ ಸಂಕ್ಷೇಪವಾಗಿಯೂ ಇತ್ತು. ಆದರೆ ಕ್ರಮೇಣ ಕಾಲದಿಂದ ಕಾಲಕ್ಕೆ ಹೆಚ್ಚು ಹೆಚ್ಚು ಶ್ಲೋಕಗಳು ಸೇರುತ್ತಾ ಹೋಗಿ ಲಕ್ಷಕ್ಕಿಂತಲೂ ಹೆಚ್ಚು ಸಂಖ್ಯೆಯ ಶ್ಲೋಕಗಳನ್ನು ಒಳಗೊಂಡು ಬೃಹತ್ತಾಗಿ ಬೆಳೆದಿದೆ. ಕನಸಿನಲ್ಲಿ ಕಾಣಿಸಿಕೊಂಡು ಬ್ರಹ್ಮನು ಈ ಕಾವ್ಯವನ್ನು ಬರೆಯಲು ಕೋರಿದನೆಂದೂ ಅದನ್ನು ಬರೆಯಲು ಲಿಪಿಕಾರನಿಗಾಗಿ ಹುಡುಕಾಟ ನಡೆಸಿದಾಗ ವಿನಾಯಕ ತಾನು ಬರೆಯಲು ಮುಂದಾದನೆಂದೂ, ಅಭಿಪ್ರಾಯವು ಪ್ರಚಲಿತವಾಗಿದೆ.

ಹೀಗೆ ವ್ಯಾಸರಿಂದ ಹೇಳಲ್ಪಟ್ಟು ಗಣೇಶನಿಂದ ಬರೆಯಲ್ಪಟ್ಟ ಮಹಾಭಾರತ ಮಹಾಕಾವ್ಯದ ಕಥಾ ವಿಸ್ತಾರ, ಪಾತ್ರ ಸಂಖ್ಯೆ, ಸನ್ನಿವೇಶ, ಘಟನೆಗಳು ಅಪಾರವಾಗಿದ್ದು, ವೈವಿಧ್ಯಮಯವಾಗಿದ್ದು, ಜನಪ್ರಿಯವಾಗಿದೆ. ಜಗತ್ತಿನಲ್ಲಿಯೇ ಮಹತ್ವದ್ದಾಗಿದೆ.

ಮುಖ್ಯವಾಗಿ ಇದರಲ್ಲಿ ಕೌರವ ಪಾಂಡವರೆಂಬ ದಾಯಾದಿಗಳ ನಡುವೆ ನಡೆದ ಯುದ್ಧ ಅಥವಾ ಹೋರಾಟವೇ ಮುಖ್ಯ ಕಥೆಯಾದರೂ ಸಾಂಕೇತಿಕವಾಗಿ ಧರ್ಮ – ಅಧರ್ಮಗಳ ಸಂಘರ್ಷ ಕಡೆಗೆ ಧರ್ಮಕ್ಕೆ ಜಯ ಎಂಬುದನ್ನು ತಿಳಿಸುತ್ತದೆ. ಭರತವಂಶಕ್ಕೆ ಸೇರಿದ ಕೌರವ – ಪಾಂಡವ ದಾಯಾದಿ ಸೋದರರ ನಡುವಿನ ಹಗೆತನ, ಅಸೂಯೆ, ದ್ವೇಷ, ಸ್ವಾರ್ಥ, ಕ್ರೌರ್ಯ, ಹಿಂಸೆ, ವಂಚನೆ, ದ್ರೋಹ ಇತ್ಯಾದಿಗಳ ಜೊತೆಗೆ ಸತ್ಯ, ಪ್ರೀತಿ, ಧರ್ಮ, ನಿಸ್ವಾರ್ಥತೆ, ತ್ಯಾಗ, ಭಕ್ತಿ ಮತ್ತು ಇತರೆ ಮೌಲ್ಯಗಳ ಚಿತ್ರಣವನ್ನೂ ಈ ಕಾವ್ಯ ಕಟ್ಟಿಕೊಡುತ್ತದೆ. ದುರ್ಯೋಧನ, ಶಕುನಿ, ದುಶ್ಯಾಸನ ಮೊದಲಾದವರು ದುಷ್ಟತನವನ್ನು ದೌರ್ಜನ್ಯವನ್ನು ಪ್ರತಿನಿಧಿಸಿದರೆ, ಧರ್ಮರಾಯ ಕರ್ಣ ಮತ್ತಿತರರು ಸತ್ಯ, ಸ್ನೇಹ, ತ್ಯಾಗ ಧರ್ಮ ಮೊದಲಾದವುಗಳನ್ನು ಪ್ರತಿನಿಧಿಸುತ್ತಾರೆ. ಇವುಗಳ ಜೊತೆ ಜೊತೆಗೇ ಶೌರ್ಯ, ಸಾಹಸ, ಪರಾಕ್ರಮಗಳ ರೋಮಾಂಚಕಾರಿ ಚಿತ್ರಣವೂ ಕಂಡು ಬರುತ್ತದೆ.

ಎಲ್ಲಕ್ಕಿಂತ ಹೆಚ್ಚಾಗಿ, ದುರ್ಯೋಧನ, ಶಕುನಿಯರ ಕುತಂತ್ರ, ದುಷ್ಟತನಗಳ ಪರಿಣಾಮವಾಗಿ ಸಂಭವಿಸಿದ ಕುರುಕ್ಷೇತ್ರ ಯುದ್ಧದಲ್ಲಿ, ಕೌರವರ ಸೋಲು, ವಂಶ ನಾಶ, ಪಾಂಡವರ ವಿಜಯ (ಗೆಲುವು) ಒಂದು ಮಹತ್ವದ ಸಂದೇಶವನ್ನು ನಮ್ಮ ಮುಂದಿಡುತ್ತದೆ. 'ಸತ್ಯ, ನ್ಯಾಯ, ಧರ್ಮಗಳಿಗೆ ಎಂದೂ ಸಾವಿಲ್ಲ; ಸೋಲಿಲ್ಲ' ಎಂಬುದನ್ನು ಸಾರಿ ಘೋಷಿಸುತ್ತದೆ. ಆದ್ದರಿಂಲೇ ಇದು ಒಂದು ನೈತಿಕ ಕಾವ್ಯವೂ ಆಗಿದೆ; ಮಾನವ ಚರಿತ್ರೆಯ ಕಾವ್ಯವೂ ಆಗಿದೆ.



## ಶಂತನು – ಗಂಗೆಯರ ಭೇಟಿ

ಒಮ್ಮೆ, ವೀರನೂ ಶೂರನೂ ಸತ್ಯವಂತನೂ ಆದ ಶಂತನು ಮಹಾರಾಜ, ಗಂಗಾನದೀ ತೀರದಲ್ಲಿ ವಿಹರಿಸುತ್ತಿದ್ದಾಗ, ದೂರದಲ್ಲಿ ಸುಂದರಳಾದ ಯುವತಿಯೊಬ್ಬಳು ನಿಂತಿರುವುದು ಕಣ್ಣಿಗೆ ಬೀಳುತ್ತದೆ. ಅಪ್ರತಿಮ ಸುಂದರಿಯಾಗಿದ್ದ ಆಕೆಯನ್ನು ನೋಡಿ ಅವನಿಗೆ ಆಶ್ಚರ್ಯವಾಗುತ್ತದೆ. ಅವಳಿಂದ ಕಣ್ಣು ಹೊರಳಿಸಲು ಸಾಧ್ಯವೇ ಆಗುವುದಿಲ್ಲ. ನೋಡ ನೋಡುತ್ತಲೇ ಅವಳಲ್ಲಿ ಅನುರಕ್ತನಾಗುತಾನೆ. ಒಂದು ಕ್ಷಣವೂ ಕಣ್ಣನ್ನು ಅವಳಿಂದ ಸರಿಸಲಿಲ್ಲ. ನಿಧಾನವಾಗಿ ಅವಳನನ್ನು ಸಮೀಪಿಸುತ್ತಾ ಕೇಳಿದ, ಎಲೆ ಹೆಣ್ಣೆ, ಅನುಪಮ ಸುಂದರಿಯಾದ ನೀನು ಯಾರು? ಇಲ್ಲೇಕೆ ಒಬ್ಬಳೇ ನಿಂತಿರುವೆ? ದಯವಿಟ್ಟು ನೀನ್ಯಾರೆಂಬುದನ್ನು ತಿಳಿಸು?"



ಗಂಗೆ ಒಂದೆರಡು ಕ್ಷಣ ಮೌನವಾಗಿದ್ದಳು. ನಂತರ, "ಎಲೈ ಪುರುಷನೆ! ನಿನ್ನನ್ನು ನೋಡಿದರೆ ರಾಜನಂತೆ ಕಾಣುತ್ತಿರುವೆ. ಆದರೆ ನನ್ನ ಬಗ್ಗೆ ತಿಳಿದುಕೊಳ್ಳುವ ಕುತೂಹಲವೇಕೆ ನಿನಗೆ? ನೀನು ಒಬ್ಬ ಅಪರಿಚಿತ. ಆದ್ದರಿಂದ ನಿನ್ನೊಡನೆ ನನಗೇಕೆ ಮಾತು?" ಎಂದಳು.

"ಎಲೆ ಸುಂದರಿಯೆ! ನಾನು ನಿನ್ನನ್ನು ಮೋಹಿಸಿದ್ದೇನೆ. ನಿನ್ನನ್ನು ನೋಡಿದ ಕ್ಷಣವೇ ನನ್ನ ಮನಸ್ಸನ್ನು ನಿನಗೆ ಕೊಟ್ಟು ಬಿಟ್ಟೆ! ನನ್ನನ್ನು ಶಂತನು ಎಂದು ಕರೆಯುತ್ತಾರೆ. ನಾನು ಹಸ್ತಿನಾಪುರದ ಅರಸ. ನೀನು ಒಪ್ಪುವುದಾದರೆ ನಾನು ನಿನ್ನನ್ನು ವರಿಸುತ್ತೇನೆ. ನೀನು ಬೇಡಿದ್ದೆಲ್ಲವನ್ನೂ ರಾಜ್ಯ ಸಂಪತ್ತು, ಕಡೆಗೆ ನನ್ನ ಪ್ರಾಣವನ್ನೂ ಕೊಡಲು ಸಿದ್ಧನಿದ್ದೇನೆ. ದಯವಿಟ್ಟು ಕನಿಕರಿಸಿ ಒಪ್ಪಿಗೆ ನೀಡು" ಎಂದು ಬೇಡಿಕೊಂಡ.

ಶಂತನುವಿನ ಪ್ರಾರ್ಥನೆಗೆ ಗಂಗೆ ಕರಗಿದಂತೆ ಕಾಣಿಸಿದಳು. "ದೊರೆಯೇ ನಿನ್ನನ್ನು ಮದುವೆಯಾಗಲು ನನ್ನ ಅಭ್ಯಂತರವಿಲ್ಲ. ಆದರೆ ಅದಕ್ಕೆ ನನ್ನ ಕೆಲವು ಷರತ್ತುಗಳಿವೆ. ನಿನ್ನ ಹೆಂಡತಿಯಾಗಿದ್ದರೂ, ನಾನು ಏನೇ ಮಾಡಿದರೂ ನೀನು ಪ್ರಶ್ನಿಸಬಾರದು, ಅದು ಒಳ್ಳೆಯದೇ ಇರಲಿ, ಕೆಟ್ಟದ್ದೇ ಇರಲಿ. ನನ್ನ ಮನಸ್ಸಿಗೆ ಹಿಡಿಸದ ಯಾವ ಕೆಲಸವನ್ನೂ ನೀನು ಮಾಡಬಾರದು. ಯಾವಾಗ ನೀನು ನನ್ನ ಷರತ್ತುಗಳನ್ನು ಸ್ಪಷ್ಟಪಡಿಸಿದಳು.

ಗಂಗೆಯ ಪ್ರೀತಿಯಲ್ಲಿ ಮುಳುಗಿ ಹೋಗಿದ್ದ ರಾಜ ಒಂದು ಕ್ಷಣವೂ ಆಲೋಚಿಸದೆ ಅವಳ ಎಲ್ಲ ಷರತ್ತುಗಳನ್ನು ಒಪ್ಪಿಕೊಂಡ. ಅವರಿಬ್ಬರೂ ನಂತರ ವಿವಾಹವಾಗಿ ಸಂತೋಷದಿಂದ ಕೆಲವು ಕಾಲ ಬಾಳಿದರು.

ಗಂಗೆಗೆ ಒಂದು ಮಗುವಾಯಿತು. ರಾಜನಿಗೆ ಸಂತೋಷವಾಯಿತು. ಆದರೆ ಗಂಗೆ ಕೂಡಲೇ ಆ ಮಗುವನ್ನು ಗಂಗೆಯಲ್ಲಿ ತೇಲಿಬಿಟ್ಟಳು. ನಿರ್ದಾಕ್ಷಿಣ್ಯವಾಗಿ ಕೆಲಸ ಮುಗಿಸಿ ಅರಮನೆಗೆ ಮರಳಿದ ಗಂಗೆಯನ್ನು ಕಂಡು ರಾಜ ದುಃಖಿಸಿದ; ಆಶ್ಚರ್ಯವನ್ನೂ ಪಟ್ಟ. ಅವಳನ್ನು ತಡೆದು ಅವಳು ಮಾಡಿದ ಕೆಲಸದ ಬಗ್ಗೆ ಪ್ರಶ್ನಿಸಬೇಕೆಂದುಕೊಂಡ. ಆದರೆ ಅವನಿಗೆ ಅವಳ ಷರತ್ತುಗಳು ನೆನಪಾಗಿ ಸುಮ್ಮನಾದ.

ಗಂಗೆ ಇದೇ ರೀತಿಯಲ್ಲಿ ಉಳಿದ ಆರು ಮಕ್ಕಳನ್ನೂ ನದಿಯಲ್ಲಿ ತೇಲಿಬಿಟ್ಟು ಬಂದಳು. ಎಂಟನೆಯ ಮಗು ಹುಟ್ಟಿದಾಗ, ಶಂತನುವಿಗೆ

ಇನ್ನು ತಡೆದುಕೊಳ್ಳುವುದು ಸಾಧ್ಯವಾಗಲಿಲ್ಲ. ಇಷ್ಟು ದಿನದ ಸಹನೆ ಮುರಿದು ಹೋಗಿತ್ತು. ಅವನಿಗೆ ಅವಳು ಬಹು ಕ್ರೂರಿಯಾಗಿ ತನ್ನ ಮಕ್ಕಳು ಜೊತೆ ನಡೆದುಕೊಳ್ಳುತ್ತಿದ್ದಾಳೆನಿಸಿತು. ಈ ಬಾರಿ ಹೇಗಾದರೂ ಇದನ್ನು ನಿಲ್ಲಿಸಬೇಕೆನಿಸಿ, ಷರತ್ತುಗಳ ಮಾತನ್ನು ಮರೆತು, ಅವಳನ್ನು ತಡೆದು, "ಎಲೇ ಹೆಣ್ಣೇ ನಿನ್ನ ಸ್ವಂತ ಮಕ್ಕಳನ್ನೇ ಇಷ್ಟೊಂದು ಕ್ರೂರವಾಗಿ ಕೊಲ್ಲುತ್ತಿರುವೆಯೇಕೆ? ಅವು ನಿನಗೇನು ಅನ್ಯಾಯ ಮಾಡಿವೆ? ಅಲ್ಲದೆ ಹುಟ್ಟಿದ ಗಂಡು ಮಕ್ಕಳನ್ನೆಲ್ಲ ಇದೇ ರೀತಿ ಕೊಲ್ಲುತ್ತಿದ್ದರೆ ನನ್ನ ವಂಶದ, ನನ್ನ ರಾಜ್ಯದ ಉತ್ತರಾಧಿಕಾರಿಗೆ ಏನು ಮಾಡಲಿ?" ಎಂದು ದುಃಖದಿಂದ ನುಡಿದ.

ಗಂಗೆ ತಾನು ಶಂತನುವನ್ನು ಷರತ್ತು ಮುರಿದದ್ದಕ್ಕಾಗಿ ಬಿಟ್ಟು ಹೋಗುವೆನೆಂದಳು. ಆದರೆಹೋಗುವುದಕ್ಕೆ ಮೊದಲು ಅವನಿಂದ ವಚನ ಪಡೆಯಲು ಅಪೇಕ್ಷಿಸಿದಳು. ಈ ಕಡೆಯ ಮಗುವನ್ನು ಇಲ್ಲಿಯೇ ಬಿಟ್ಟು ಹೋಗುವುದಾಗಿಯೂ, ಅದನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆಂದು ಮಾತುಕೊಡಬೇಕೆಂದಳು.

ಶಂತನು ವಿಧಿಯಿಲ್ಲದೆ ಅವಳು ತನ್ನನ್ನು ಬಿಟ್ಟು ಹೋಗಲು ಒಪ್ಪಿಗೆ ಕೊಡಬೇಕಾಯಿತು. ಆದರೆ ಅವಳು ಹೋಗುವುದಕ್ಕೆ ಮೊದಲು ಅವಳು ಹಾಗೆ ಮಾಡಲು ಕಾರಣವೇನೆಂದು ತಿಳಿದುಕೊಳ್ಳಬೇಕೆನಿಸಿ ಕೇಳಿದ, "ರಾಣಿಯೇ, ನೀನು ಹೋಗಲೇಬೇಕೆಂದು ನಿರ್ಧರಿಸಿರುವೆ. ನಿನಗೆ ನಾನು ಅಡ್ಡಿ ಬರಲಾರೆ. ಆದರೆ ಹೋಗುವುದಕ್ಕೆ ಮೊದಲು ನೀನೇಕೆ ಹೀಗೆ ನಡೆದುಕೊಂಡೆ ಎಂಬುದನ್ನು ತಿಳಿಸಿ ಹೋಗು."

"ದೊರೆಯೇ ನಾನು ಗಂಗಾದೇವಿ. ನಮ್ಮಿಬ್ಬರಿಗೆ ಹುಟ್ಟಿದ ಮಕ್ಕಳು ಬೇರೆ ಯಾರೂ ಅಲ್ಲ, ಅವರು ಅಷ್ಟ ವಸುಗಳು. ಹಿಂದಿನ ಜನ್ಮದಲ್ಲಿ ಅವರು ಪಾಪವೆಸಗಿದ್ದರಿಂದ ಈ ಜನ್ಮದಲ್ಲಿ ನನ್ನ ಮಕ್ಕಳಾಗಿ ಹುಟ್ಟಿ ಸಾವನ್ನು ಅಪ್ಪುವುದು ಅನಿವರ್ಯವಾಗಿತ್ತು. ಒಮ್ಮೆ ಇವರು ವಸಿಷ್ಠರ ಆಶ್ರಮದಲ್ಲಿದ್ದ 'ನಂದಿನಿ' ಎಂಬ ಹಸುವನ್ನು ಕದ್ದು ವಸಿಷ್ಠರ ಕೋಪ – ಶಾಪಕ್ಕೆ ಗುರಿಯಾದರು. ಅವರು ಮಾಡಿದ ತಪ್ಪಿಗಾಗಿ ಭೂಮಿಯಲ್ಲಿ ಜನಿಸುವ ಶಿಕ್ಷೆಯನ್ನು ವಿಧಿಸಿದರು. ಆಗ ವಸುಗಳಿಗೆ ತಾವು ಮಾಡಿದ

ತಪ್ಪು ಅರ್ಥವಾಯಿತು. ಕ್ಷಮಿಸುವಂತೆ ವಸಿಷ್ಠರನ್ನು ಬೇಡಿಕೊಂಡರು. ಭೂಮಿಯಲ್ಲಿ ಹುಟ್ಟಿ ಪಡೆವ ಮನುಷ್ಯದೇಹಗಳಿಂದ ತಮ್ಮನ್ನು ಆದಷ್ಟು ಬೇಗ ಮುಕ್ತಗೊಳಿಸುವಂತೆ ಪ್ರಾರ್ಥಿಸಿದರು. ವಸಿಷ್ಠರ ಮನಸ್ಸು ಕರಗಿ ಹೇಳಿದರು, "ಎಲೈ ವಸುಗಳೇ ಶಾಪವಂತು ಕೊಟ್ಟಾಯಿತು. ನೀವು ಅನುಭವಿಸಲೇಬೇಕು. ಆದರೆ ಅದಕ್ಕೆ ಒಂದು ಪರಿಹಾರವನ್ನೂ ಹೇಳುತ್ತೇನೆ. ನೀವು ಹುಟ್ಟುತ್ತಿದ್ದಂತೆಯೇ ನಿಮ್ಮ ಮನುಷ್ಯದೇಹಗಳನ್ನು ತೊರೆಯಬಹುದು" ಎಂದರು. ವಸುಗಳು ವಸಿಷ್ಠರ ಮಾತುಗಳಿಂದ ಸಮಾಧಾನ ಪಡೆದು, ನನ್ನ ಬಳಿಗೆ ಬಂದರು. ಯೋಗ್ಯವಾದ ಪುರುಷರನ್ನು ಮಾದುವೆಯಾಗಿ, ತಮಗೆ ನನ್ನ ಗರ್ಭದಲ್ಲಿ ಅವಕಾಶ ನೀಡಬೇಕೆಂದು ಬೇಡಿಕೊಂಡರು. ನಾನು ಕರುಣೆಯಿಂದ ಒಪ್ಪಿ ನನ್ನ ಗರ್ಭದಲ್ಲಿ ಅವರನ್ನು ಧರಿಸಲು ನಿನ್ನನ್ನು ಮದುವೆಯಾದೆ. ಮನುಷ್ಯ ಜನ್ಮದಿಂದ ಬಿಡುಗಡೆ ಮಾಡಲೆಂದೇ ಕೂಡಲೇ ಅವರನ್ನು ಕೊಲ್ಲುತ್ತಿದ್ದೆ, ಅಷ್ಟೇ. ಏನಾದರಾಗಲೀ ನನ್ನ ಷರತ್ತಿನಂತೆ ನಾನು ನಿನ್ನನ್ನು ತೊರೆದು ಹೋಗುತ್ತಿದ್ದೇನೆ. ಆದರೆ ದೊರೆಯೇ, ಹೋಗುವಾಗ ಈ ಮಗುವನ್ನೂ ನನ್ನ ಜೊತೆಯಲ್ಲಿ ಕೊಂಡುಯ್ಯಲು ಬಿಡು. ಈ ಪುಟ್ಟ ಕಂದನನ್ನು ನೋಡಿಕೊಳ್ಳುವುದು ನಿನಗೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಇದನ್ನು ನನ್ನೊಡನೆ ತೆಗೆದುಕೊಂಡು ಹೋಗಿ ಸ್ವಲ್ಪ ದೊಡ್ಡವನಾದ ಮೇಲೆ ನಿನ್ನ ಬಳಿ ತಂದು ಬಿಡುತ್ತೇನೆ" ಎಂದು ಹೇಳಿ ಆ ಮಗುವನ್ನು ಎತ್ತಿಕೊಂಡು ಒಂದು ಕ್ಷಣವೂ ಅಲ್ಲಿ ನಿಲ್ಲದೆ ಹೊರಟೇ ಬಿಟ್ಟಳು.

ಅವಳಿಂದ ದೂರವಾಗುವುದು ಅವನಿಗೆ ಕಷ್ಟವೆನಿಸಿತು. ಆದರೂ ಅವಳನ್ನು ತಡೆಯುವುದಕ್ಕೆ ದಾರಿಯೇ ಇಲ್ಲವಾಗಿತ್ತು. ಮಡದಿಯ ಅಗಲಿಕೆಯಿಂದ, ಮಕ್ಕಳ ಸಾವಿನಿಂದ ಮನಸ್ಸಿಗೆ ತೀರಾ ನೋವಾಗತ್ತು. ಅವನಿಗೆ ರಾಜ್ಯಭಾರದಲ್ಲಿ, ಸುಖಭೋಗಗಳಲ್ಲಿ ಆಸಕ್ತಿಯೇ ಇಲ್ಲವಾಯಿತು. ಸದಾ ತತ್ವಚಿಂತನೆ, ಅಧ್ಯಾತ್ಮಗಳಲ್ಲಿ ನಿರತನಾಗಿ ಒಬ್ಬ ಋಷಿಯಂತೆ ಇರತೊಡಗಿದ



## ದೇವವ್ರತ ಭೀಷ್ಮನಾದ

ಕೆಲವು ವರ್ಷಗಳ ನಂತರ ಗಂಗೆ, ಕಾಂತಿ, ವರ್ಚಸ್ಸುಗಳಿಂದ ಕೂಡಿದ ಬಾಲಕನೊಬ್ಬನನ್ನು ಶಂತನುವಿನ ಬಳಿಗೆ ಕರೆತಂದಳು. "ದೊರೆಯೇ, ಇಗೋ ನಿನ್ನ ಸಂಪತ್ತು; ನಿನ್ನ ಮಗ. ಇವನಿಗೆ ದೇವವ್ರತನೆಂದು ಹೆಸರಿರಿಸಿದ್ದೇನೆ. ಇವನನ್ನು ಮೀರಿಸುವಂತಹವರೇ ಇಲ್ಲದಂತೆ ಇವನಿಗೆ ಶಸ್ತ್ರಾಸ್ತ್ರ ವಿದ್ಯೆಗಳನ್ನು ಕಲಿಸಿದ್ದೇನೆ. ಪರಶುರಾಮನೊಬ್ಬನಲ್ಲದೆ ಬೇರೆ ಯಾರೂ ಇವನಿಗೆ ಸಾಟಿಯಿಲ್ಲ. ವೇದ, ವೇದಾಂತಶಾಸ್ತ್ರ, ಪುರಾಣಗಳಲ್ಲದೆ ರಾಜನೀತಿ ಶಾಸ್ತ್ರದಲ್ಲೂ ಪಾಂಡಿತ್ಯ ಪಡೆದಿದ್ದಾನೆ. ತೆಗೆದುಕೊ. ನಿನ್ನ ಮಗುವನ್ನು ನಿನಗೆ ಒಪ್ಪಿಸುತ್ತಿದ್ದೇನೆ" ಎಂದು ಹೇಳಿದಳು.

ಗಂಗೆ ಶಂತನುವಿನಿಂದ ಕೃತಜ್ಞತೆ ಸ್ವೀಕರಿಸಿ ಅಲ್ಲಿಂದ ಹೊರಟುಬಿಟ್ಟಳು. ರಾಜನಿಗೆ ಸಂತೋಷವಾಯಿತು. ತನ್ನ ಮಗನ ವಿದ್ಯೆ, ಬುದ್ಧಿ, ನಡತೆಗಳ ಬಗ್ಗೆ ಹೆಮ್ಮೆ ಎನಿಸಿತು. ದೇವವ್ರತ ಯುವಕನಾಗಿ ಬೆಳೆದ. ಶಂತನು ಅವನನ್ನು ಯುವರಾಜನಾಗಿ, ತನ್ನ ಉತ್ತರಾಧಿಕಾರಿಯಾಗಿ ಘೋಷಿಸಿದ.

ಐದಾರು ವರ್ಷಗಳು ಕಳೆದವು. ಶಂತನು ಒಂಟಿತನದ ಅನುಭವದಲ್ಲಿ ಬದುಕುತ್ತಿದ್ದ. ಒಂದು ದಿನ ಎಂದಿನಂತೆ ಯಮುನಾ ನದೀ ತೀರದಲ್ಲಿ ಓಡಾಡುತ್ತಿದ್ದ. ಅಷ್ಟರಲ್ಲಿ ಅವನಿಗ ಎಲ್ಲಿಂದಲೋ ಬಂದ ಒಂದು ಬಗೆಯ ಸುಗಂಧದ ಅನುಭವವಾಯಿತು. ಗಂಧಯುಕ್ತ ಗಾಳಿ ಬೀಸಿ ಬಂದ ದಿಕ್ಕಿನತ್ತ ಅಚ್ಚರಿಯಿಂದ ನೋಡಿದ. ಏನೂ ಕಾಣಲಿಲ್ಲ. ಮತ್ತೊಮ್ಮೆ ಸುತ್ತಲೂ ಕಣ್ಣಾಡಿಸಿ ಸೂಕ್ಷ್ಮವಾಗಿ ಗಮನಿಸಿದಾಗ ಹೆಣ್ಣೊಬ್ಬಳು ನಿಂತಿರುವುದನ್ನು ಕಂಡ. ಬಳಿಗೆ ನಡೆದು ನೋಡಿದಾಗ, ಅದ್ಭುತ ಸೌಂದರ್ಯದಿಂದ ಕೂಡಿದ ಯುವತಿಯ ದೇಹದಿಂದ ಸುಗಂಧ ಹೊರಸೂಸುತ್ತಿದೆ! ಒಂದು ಕ್ಷಣ ಅರ್ಥವಾಗದೆ ನಿಂತುಬಿಟ್ಟ.

ಆ ಯುವತಿಯನ್ನು ನೋಡಿದ ಕ್ಷಣವೇ, ತನ್ನೆಲ್ಲ ಇಂದ್ರಿಯಗಳ ಮೇಲಿನ ಹತೋಟಿಯನ್ನು ಕಳೆದುಕೊಂಡು. ಅವಳ ಬಗ್ಗೆ ಆಸೆಯಾಯಿತು. ಒಂದಿಷ್ಟೂ ಸಂಕೋಚಕ್ಕೆ ಒಳಗಾಗದೆ ಅವಳನು, ತನ್ನನ್ನು ಮದುವರೆಯಾಗೆಂದು ಯಾಚಿಸಿದ. ಆದರೆ ಆ ಯುವತಿ, ಈ ವಿಚಾರದಲ್ಲಿ ತಾನೂ ಏನನ್ನೂ ಹೇಳಲು ಆಗದೆಂದೂ, ತನ್ನ ತಂದೆಯವರನ್ನು ಕಂಡು ಮಾತನಾಡಬೇಕೆಂದು ಸೂಚಿಸಿದಳು. ಕೂಡಲೇ ಶಂತನು ಅವಳ ತಂದೆಯ ಬಳಿಗೆ ಹೋದ. ಆತ ಬೆಸ್ತರ ಮುಖಂಡನಾಗಿದ್ದ ಆತನ ಮಗಳನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಪ್ರಾರ್ಥಿಸಿದ.

ಬೆಸ್ತನಾಗಿದ್ದ ಆತ ಶಂತನುವಿಗೆ, "ಎಲೈ ದೊರೆಯೇ! ನನ್ನ ಮಗಳನ್ನು ವರಿಸಲು ಬಯಸಿದುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಒಂದಲ್ಲ ಒಂದು ದಿನ ಅವಳನ್ನು ಯಾರಿಗಾದರೂ ಯೋಗ್ಯನಾದವನಿಗೆ ಮದುವೆ ಮಾಡಿಕೊಡಲೇಬೇಕು. ಅದರಲ್ಲಿ ಯಾರಿಗಾದರೂ ಯೋಗ್ಯನಾದವನಿಗೆ ಮದುವೆ ಮಾಡಿಕೊಡಲೇಬೇಕು. ಅದರಲ್ಲಿ ಅನುವಾನವೇ ಇಲ್ಲ. ಆದರೆ ನನ್ನದೊಂದು ಷರತ್ತಿದೆ. ಅವಳಿಗೆ ನಿನ್ನಿಂದ ಹುಟ್ಟುವ ಮಗನಿಗೇ ರಾಜ್ಯವನ್ನು ಕೊಡಬೇಕು. ಅವನೇ ನಿನ್ನ ಉತ್ತಾರಾಧಿಕಾರಿಯಾಗಬೇಕು" ಎಂದು ವಿವರಿಸಿ ತಿಳಿಸಿದನು.

ಈ ಮಾತುಗಳನ್ನು ಕೇಳಿದ ಶಂತನು ಸಂದಿಗ್ಧದಲ್ಲಿ ಸಿಲುಕಿದ. ದೇವವ್ರತನನ್ನು ಈಗಲಾಗಲೇ ಯುವರಾಜನೆಂದು, ಉತ್ತರಾಧಿಕಾರಿಯೆಂದು ನಿರ್ಧರಿಸಲಾಗಿದೆ; ಘೋಷಿಸಲಾಗಿದೆ. ಅಂತಹುದರಲ್ಲಿ ಈ ಷರರತ್ತಿಗೆ ಹೇಗೆ ಒಪ್ಪಲು ಸಾಧ್ಯ ಎಂದು ಯೋಚಿಸಿದ.

ನಿರಾಶನಾಗಿ ತನ್ನ ಅರಮನೆಗೆ ಹಿಂತಿರುಗಿದ. ಯಾರೊಂದಿಗೂ ಮಾತುಕತೆಯಿಲ್ಲದೆ ಏಕಾಂತದಲ್ಲಿ ಇರತೊಡಗಿದ. ಅನ್ನಾಹಾರಗಳನ್ನು ಬಿಟ್ಟ, ರಾಜ್ಯಭಾರದಲ್ಲಿ ಆಸಕ್ತಿಯನ್ನು ಕಳೆದುಕೊಂಡು ಸವೆಯುತ್ತಿರುವಂತೆ ಕಾಣಿಸಿದ.

ಯುವಕನಾಗಿದ್ದ ದೇವವ್ರತ ತಂದೆಯ ಸ್ಥಿತಿಯನ್ನು ಗಮನಿಸಿದ. ಒಂದು ದಿನ ಕೇಳಿಯೇ ಬಿಟ್ಟ. "ತಂದೆಯೇ ಯಾಕೆ ಹೀಗೆ ಸಂತೋಷ

ವನ್ನು ಕಳೆದುಕೊಂಡು ಯಾವುದೋ ದುಃಖದಲ್ಲಿ ಮುಳುಗಿರುವಂತೆ ಕಾಣುತ್ತಿದ್ದೀರಿ ನಿಮ್ಮ ಚಿಂತೆಯೇನು? ಅದಕ್ಕೆ ಕಾರಣವೇನು? ದಯವಿಟ್ಟು ತಿಳಿಸಿದರೆ, ನಿಮ್ಮ ಆ ದುಃಖವನ್ನು ದೂರ ಮಾಡಲು ನಿಮಗೆ ಸಹಾಯ ಮಾಡುತ್ತೇವೆ; ನಿಮ್ಮ ಸಮಸ್ಯೆಯನ್ನು ಪರಿಹರಿಸುತ್ತೇವೆ."

ಶಂತನುವಿಗೆ ನಾಚಿಕೆ ಬಿಟ್ಟು ಎಲ್ಲವನ್ನೂ ನೇರವಾಗಿ ಹೇಳುವುದು ಸಾಧ್ಯವಾಗಿರಲಿಲ್ಲ. ಅದಕ್ಕಾಗಿ ಪರೋಕ್ಷವಾಗಿ, ಇನ್ನೊಂದು ರೀತಿಯಲ್ಲಿ ತನ್ನ ಮನದ ಬಯಕೆಯನ್ನು ಹೇಳಿದ, "ಮಗು ನೀನು ಊಹಿಸಿದ್ದು ಸರಿಯಾಗಿದೆ. ನಾನು ನಿಜವಾಗಿಯೂ ಚಿಂತಿತನಾಗಿದ್ದೇನೆ. ಯಾಕೆಂದರೆ ನನಗೆ ಇರುವುದು ಒಬ್ಬನೇ ಮಗ. ಆ ಮಗನು ಸಕಲಶಾಸ್ತ್ರ ಪಾರಂಗತ. ಶೌರ್ಯ, ಸಾಹಸ, ಪರಾಕ್ರಮಗಳಲ್ಲಿ ಯಾರಿಗೂ ಕಡಿಮೆ ಇಲ್ಲ. ಆ ಇರುವ ಒಬ್ಬ ಮಗ ನೂರು ಮಕ್ಕಳಿಗೆ ಸಾಟಿ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಧರ್ಮಶಾಸ್ತ್ರಗಳಲ್ಲಿ 'ಒಬ್ಬ ಮಗನಿದ್ದರೆ, ಮಕ್ಕಳೇ (ಗಂಡು ಮಕ್ಕಳು) ಇಲ್ಲದಂತೆ' ಎಂದು ಹೇಳಿದೆ. ಅಲ್ಲದೆ ವಂಶಾಭಿವೃದ್ಧಿಗೆ ಒಬ್ಬ ಮಗನು ಸಾಲುವುದಿಲ್ಲ. ಆದ್ದರಿಂದಲೇ ನನಗೆ ಚಿಂತೆಯಾಗಿದೆ. ಹಾಗೆಂದು ನಾನು ಎರಡನೇ ಹೆಂಡತಿಯನ್ನು ತರಲಾರೆ" ಎಂದು ಹೇಳಿ ಮೌನ ತಳೆದ.

ದೇವವ್ರತ ಬುದ್ಧಿವಂತ. ತಂದೆಯ ವಿಷಯದಲ್ಲಿ ಏನೋ ಇರಬೇಕೆಂದು ಅನುಮಾನಿಸಿದ. ಅದನ್ನೆಲ್ಲ ಹೇಳಲು ತಂದೆ ಸಂಕೋಚಪಡುತ್ತಿರಬೇಕೆಂದು ಊಹಿಸಿದ. ಆದ್ದರಿಂದ ತಂದೆಯ ಸಾರಥಿಯನ್ನು ಕರೆದು ವಿಚಾರಿಸಿ, ನಡೆದ ಕತೆಯನ್ನೆಲ್ಲ ಕೇಳಿ ತಿಳಿದುಕೊಂಡ.

ಮರು ದಿನ ಬೆಸ್ತರ ಮುಖ್ಯಸ್ತನ ಬಳಿಗೆ ಹೋದ. ಎಲ್ಲ ವಿಷಯವನ್ನೂ ಅವನೊಡನೆ ಮಾತಾಡಿ ತಿಳಿದುಕೊಂಡ. ಮುಖ್ಯಸ್ಥ ತಾನು ಹೇಳಿದ ಷರತ್ತುಗಳ ಬಗ್ಗೆ ತಿಳಿಸಿದ. ಅದಕ್ಕೆ ಒಪ್ಪುವುದಾದರೆ ತನ್ನ ಮಗಳನ್ನು ಮಹಾರಾಜನಿಗೆ ಮದುವೆ ಮಾಡಿಸಲು ತನ್ನ ಅಭ್ಯಂತರವಿಲ್ಲವೆಂದು. ಅದನ್ನು ಕೇಳಿದ ದೇವವ್ರತನಿಗೆ ಕೆಡುಕೆನಿಸಲಿಲ್ಲ. ಅವನಿಗೆ ಅವನ ತಂದೆಯ ಸುಖ, ಸಂತೊಷ ಮುಖ್ಯ. ಆದ್ದರಿಂದ ತಕ್ಷಣವೇ ಆ ಷರತ್ತುಗಳೆಲ್ಲಕ್ಕೂ ಒಪ್ಪಿದ್ದೇ ಅಲ್ಲದೆ, ಮುಂದೆ ಅಣ್ಣ ತಮ್ಮಂದಿರ ನಡುವೆ ಉಂಟಾಗಬಹುದಾದ

ಸಂಘರ್ಷವನ್ನು ತಪ್ಪಿಸಲು ತಾನು ಮದುವೆಯನ್ನೇ ಆಗುವುದಿಲ್ಲವೆಂದೂ ಭೀಷ್ಮ ಪ್ರತಿಜ್ಞೆ ಮಾಡಿ ಭೀಷ್ಮನೆಂದು ಹೆಸರುವಾಸಿಯಾದ.

ಬೆಸ್ತನಾಯಕನ ಮನೆಯಿಂದ ಹಿಂತಿರುಗಿ ತಂದೆಯ ವಿವಾಹಕ್ಕೆ ಸಿದ್ಧತೆಗಳನ್ನು ಮಾಡಿದ.

ಶಂತನು ದಂಪತಿಗಳು ಕೆಲಕಾಲ ಸುಖವಾಗಿದ್ದರು. ಭೀಷ್ಮನ ಮಲತಾಯಿಯಾದ ಸತ್ಯವತಿ ಇಬ್ಬರು ಗಂಡು ಮಕ್ಕಳಿಗೆ ಜನ್ಮವಿತ್ತಳು. ಚಿತ್ರಾಂಗದ, ವಿಚಿತ್ರವೀರ್ಯ ಎಂದು ಅವರಿಗೆ ನಾಮಕರಣ ಮಾಡಿದರು. ಮದುವೆಯಾಗದೆ ಹಾಗೆಯೇ ಉಳಿದಿದ್ದ ಭೀಷ್ಮ ತನ್ನಿಬ್ಬರು ತಮ್ಮಂದಿರನ್ನು ತನ್ನ ಸ್ವಂತ ಮಕ್ಕಳಂತೆಯೇ ನೋಡಿಕೊಂಡ.

ಶಂತನು, ಅಷ್ಟರಲ್ಲಿಯೇ ಮುಪ್ಪಿನ ಕಾರಣದಿಂದ ಸಾವನ್ನಪ್ಪಿದ. ಸಂಪ್ರದಾಯಾನುಸಾರವಾಗಿ ಹಿರಿಯ ಮಗ ಚಿತ್ರಾಂಗದನಿಗೆ ರಾಜ್ಯಾಭಿಷೇಕ ನಡೆಯಬೇಕಿತ್ತು. ಆದರೆ ಅವನು ಯುದ್ಧದಲ್ಲಿ ಸಾವನ್ನಪ್ಪಿದ. ವಿಚಿತ್ರವೀರ್ಯ ಕಾಶಿರಾಜನ ಮಕ್ಕಳಾದ ಅಂಬಿಕಾ, ಅಂಬಾಲಿಕೆಯರನ್ನು ಮದುವೆಯಾದ. ಆದರೆ ಅವನಿಗೆ ಅವರಿಂದ ಮಕ್ಕಳಾಗಲಿಲ್ಲ. ಅಲ್ಲದೆ ಅವನೂ ಕೂಡಾ ತಂದೆಯಾಗುವುದಕ್ಕೆ ಮೊದಲೇ ಯುದ್ಧದಲ್ಲಿ ಮಡಿದ.

ಹಸ್ತಿನಾಪುರಕ್ಕೆ ಈಗ ಉತ್ತರಾಧಿಕಾರಿ ಯಾರೂ ಇರಲಿಲ್ಲ. ಶಂತನು ವಂಶ ಅಲ್ಲಿಗೇ ಮುಗಿಯುವಂತೆ ಕಾಣಿಸಿತು. ಅದಕ್ಕಾಗಿ ಸತ್ಯವತಿ ಹೇಗಾದರೂ ವಂಶವನ್ನು ಮುಂದುವರಿಸಲೇಬೇಂದು ನಿಶ್ಚಯಿಸಿ ಪರಾಶರರನ್ನು ಕರೆಸಿ ಅವರ ಅನುಗ್ರಹದಿಂದ ಅಂಬಿಕೆ, ಅಂಬಾಲಿಕೆಯರಿಗೆ ಮಕ್ಕಳಾಗುವಂತೆ ಮಾಡಿದಳು. ಇಬ್ಬರು ರಾಣಿಯರೂ ಧೃತರಾಷ್ಟ್ರ ಮತ್ತು ಪಾಂಡು ಎಂದು ಒಬ್ಬೊಬ್ಬ ಮಗನಿಗೆ ಜನ್ಮ ನೀಡಿದರು.

ಆ ಇಬ್ಬರು ಮಕ್ಕಳಲ್ಲಿ ಒಬ್ಬನಾದ ಧೃತರಾಷ್ಟ್ರ ಹುಟ್ಟು ಕುರುಡೆಂದು ತಿಳಿದು ಬರಲು ಅಂಬಿಕೆಯನ್ನು ಎರಡನೇ ಬಾರಿ ಪರಾಶರರ ಅನುಗ್ರಹಕ್ಕೆ ಒಳಗಾಗಿಸಲು ಪ್ರಯತ್ನಿಸಿದಳು. ಆದರೆ ಅಂಬಿಕೆ ಒರಟು ಗಡ್ಡದ ಪರಾಶರರ ಬಳಿಗೆ ಹೋಗಲು ಹೇಸಿ, ತನ್ನ ದಾಸಿಯನ್ನು ಕಳಿಸಿಕೊಟ್ಟಳು. ಭಕ್ತಿ, ಶ್ರದ್ಧೆ, ವಿನಯಗಳಿಂದ ಪರಾಶರರ ಬಳಿ ಬಂದ ದಾಸಿಗೆ ವಿದುರನಂತಹ ಪ್ರಾಜ್ಞನು ಜನಿಸಿದ.

ಹಿರಿಯನಾದ ಧೃತರಾಷ್ಟ್ರ ಹುಟ್ಟು ಕುರಡನಾದ ಕಾರಣ ಕಿರಿಯನಾದ ಪಾಂಡುವಿಗೆ ರಾಜ್ಯಾಭಿಷೇಕ ಮಾಡಿದರು. ಪಾಂಡು ಹಸ್ತಿನಾಪುರದ ಅರಸನಾಗಿ ರಾಜ್ಯಭಾರ ಮಾಡಿದ. ಭೀಷ್ಮ ತನ್ನ ತಮ್ಮಂದಿರ ಮಕ್ಕಳನ್ನು ಚೆನ್ನಾಗಿ ನೋಡಿಕೊಂಡ. ರಾಜ್ಯಭಾರ ಮಾಡುವಲ್ಲಿ ಸಹಕರಿಸಿದ. ವಿದುರ, ವಿದ್ವಾಂಸನೂ ಪ್ರಾಜ್ಞನೂ ರಾಜನೀತಿ ವಿಶಾರದನೂ ಮೌಲ್ಯಗಳಲ್ಲಿ ನಂಬಿಕೆ ಇಟ್ಟವನೂ ಆದುದರಿಂದ ಅವನನ್ನು ಪ್ರಧಾನಮಂತ್ರಿಯನ್ನಾಗಿ ನೇಮಿಸಲಾಯಿತು.



## ಪಾಂಡು ಮತ್ತು ಧೃತರಾಷ್ಟ್ರರ ವಿವಾಹ

ಧೃತರಾಷ್ಟ್ರ ಮತ್ತು ಪಾಂಡು ಪ್ರಾಪ್ತವಯಸ್ಕರಾಗಲು ಭೀಷ್ಮ ಅವರ ವಿವಾಹದ ಬಗ್ಗೆ ಚಿಂತಿಸಿದ.

ಕುಂತಿಭೋಜನ ಮಗಳಾದ ಕುಂತಿಯನ್ನು ಪಾಂಡುವಿಗೆ ಮತ್ತು ಗಾಂಧಾರ ರಾಜನ ಮಗಳಾದ ಗಾಂಧಾರಿಯನ್ನು ಧೃತರಾಷ್ಟ್ರನಿಗೂ ಕೊಟ್ಟು ವಿವಾಹವನ್ನು ನೆರವೇರಿಸಿದರು.

ಕುಂತಿ 'ಕುಂತಿಭೋಜ'ನ ಸ್ವಂತ ಮಗಳಾಗಿರಲಿಲ್ಲ. ಕೃಷ್ಣನ ಅಜ್ಜನಾದ ಶೂರಸೇನನ ಮಗಳು. ಶೂರಸೇನನ ಬಂಧು ಕುಂತಿಭೋಜ. ಈತನಿಗೆ ಮಕ್ಕಳಿರಲಿಲ್ಲವಾದ ಕಾರಣ, ಮಾತಿಗೆ ಬಂದು ತನಗೆ ಹುಟ್ಟುವ ಮೊದಲ ಮಗುವನ್ನು ಭೋಜನಿಗೆ ಕೊಡುವುದಾಗಿ ಮಾತುಕೊಟ್ಟಿದ್ದ. ಆದ್ದರಿಂದ ತನ್ನ ಮಾತಿನಂತೆ ತನಗೆ ಹುಟ್ಟಿದ ಮಗಳನ್ನು ಕುಂತಿಭೋಜನಿಗೆ ದತ್ತುಕೊಟ್ಟುಬಿಟ್ಟ.

ದತ್ತುವಾಗಿ ಪಡೆದ ಮಗಳು ಕುಂತಿಯನ್ನು ಬಹಳ ಅಕ್ಕರೆಯಿಂದ ಸಾಕಿ ಸಲಹಿದ. ಕುಂತಿ ಅನುಪಮ ಸುಂದರಿಯಾಗಿದ್ದು, ಒಳ್ಳೆಯ ನಡತೆಯುಳ್ಳವಳಾಗಿದ್ದಳು. ಗುರುಹಿರಿಯರಲ್ಲಿ ಭಕ್ತಿ, ವಿನಯಗಳನ್ನು ಇರಿಸಿಕೊಂಡಿದ್ದಳು.

ಸದ್ಗುಣಿಯೂ, ಸುಂದರಿಯೂ ಆಗಿದ್ದ ಕುಂತಿ ಕ್ರಮೇಣ ಸುಂದರ ಯುವತಿಯಾಗಿ ಬೆಳೆದಳು. ಕುಂತಿಯನ್ನು ಎಲ್ಲರೂ ತುಂಬ ಪ್ರೀತಿಯಿಂದ ಮೆಚ್ಚಿಕೊಳ್ಳುತ್ತಿದ್ದರು.

ಒಂದು ದಿನ ದೂರ್ವಾಸ ಮಹರ್ಷಿಗಳು ಕುಂತಿಭೋಜನನ್ನು ಕಂಡು ಆಶೀರ್ವದಿಸಲೆಂದು ಬಂದರು. ಬಂದವರು ಅತಿಥಿಯಾಗಿ ಅಲ್ಲಿಯೇ ಉಳಿದುಕೊಂಡರು. ಮಹರ್ಷಿಗಳನ್ನು ನೋಡಿಕೊಳ್ಳಲು, ಅವರ ಸೇವೆ

ಮಾಡಲು ಕುಂತಿಗೆ ಜವಾಬ್ದಾರಿಯನ್ನು ಒಪ್ಪಿಸಿದ. ಕುಂತಿಯೂ ತಂದೆಯ ಮಾತಿನಂತೆ ಭಕ್ತಿ, ಶ್ರದ್ಧೆಗಳಿಂದ ದೂರ್ವಾಸರ ಸೇವೆಯನ್ನು ಮಾಡಿ ಅವರ ಪ್ರೀತಿ, ಮೆಚ್ಚುಗೆ ಅನುಗ್ರಹಗಳಿಗೆ ಪಾತ್ರಳಾದಳು. ದೂರ್ವಸರು ಕುಂತಿಯನ್ನು ಬಳಿಗೆ ಕರೆದು ಮಂತ್ರೋಪದೇಶ ಮಾಡಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. "ಮಗಳೇ ಈ ಮಂತ್ರಗಳನ್ನು ನಿನಗೆ ವರವಾಗಿ ಕೊಡುತ್ತಿದ್ದೇನೆ. ಒಂದೊಂದು ಮಂತ್ರಕ್ಕೂ ಒಬ್ಬೊಬ್ಬ ಅಧಿದೇವತೆ, ಯಾರನ್ನು ಸರಿಸಿ ಈ ಮಂತ್ರೋಚ್ಚಾರ ಮಾಡುತ್ತೀಯೋ ಆ ದೇವತೆ ಬಂದು ನಿನಗೆ ಸಂತಾನವನ್ನು ಅನುಗ್ರಹಿಸುತ್ತಾನೆ" ಎಂದು ಹೇಳಿ ಆಶೀರ್ವದಿಸಿದರು. ಈ ವರದಿಂದ ಕುಂತಿಗೆ ತುಂಬ ಸಂತೋಷವಾಯಿತು.

ಒಂದು ದಿನ, ಕುತೂಹಲದಿಂದ, ತನಗೆ ನೀಡಿರುವ ಮಂತ್ರ ಪರೀಕ್ಷೆಯನ್ನು ಮಾಡಲು ಸಿದ್ಧಳಾದಳು. ಹೊಳೆ ಹೊಳೆಯುವ ಸೂರ್ಯನನ್ನು ಮನಕ್ಕೆ ತಂದುಕೊಂಡು, ಅವನಂತಹ ಕಾಂತಿಯುಕ್ತ ಸಂತಾನವನ್ನು ಬಯಸಿ ಮಂತ್ರವನನು ಹೇಳಿಕೊಂಡಳು. ಕೂಡಲೇ ಸೂರ್ಯನು ಪ್ರತ್ಯಕ್ಷನಾಗಿ ತನ್ನಂತೆ ಪ್ರಕಾಶಮಾನವಾದ ಮಗುವನ್ನಿತ್ತು ಆಶೀರ್ವದಿಸಿ, ಅದೃಶ್ಯನಾದ. ಮಂತ್ರಶಕ್ತಿಯ ಸತ್ಯ ಕಣ್ಣ ಮುಂದಿತ್ತು. ಆದರೆ ಈಗ ಕುಂತಿ ಭಯದಿಂದ ಕಂಪಿಸಿದಳು. ಅವಿವಾಹಿತಳಾದ ತಾನು, ಈ ಮಗುವನ್ನು ಇರಿಸಿಕೊಂಡು ಸಾಕುವುದು ಹೇಗೆ? ಈ ರಹಸ್ಯವನ್ನು ಹೇಗಾದರೂ ಮಾಡಿ ಮರೆಮಾಚಬೇಕೆಂದುಕೊಂಡಳು ಅದಕ್ಕಾಗಿ ಆ ಮಗುವನ್ನು ಅಮೂಲ್ಯ ವಸ್ತ್ರಗಳಿಂದ ಸುತ್ತಿ ಒಂದು ಪೆಟ್ಟಿಗೆಯಲ್ಲಿಟ್ಟು, ಗುಟ್ಟಾಗಿ ತೆಗೆದುಕೊಂಡು ಹೋಗಿ ನದಿಯಲ್ಲಿ ತೇಲಿಬಿಟ್ಟು ಹಿಂತಿರುಗಿದಳು. ಅವಳಿಗೆ ಈಗ ನಿರಾಳವೆನಿಸಿತಾದರೂ ಆ ಪುಟ್ಟ ಮಗುವಿಗೆ ಕೊಟ್ಟ ಶಿಕ್ಷೆಗೆ ಮರುಗಿದಳು.

ನಂತರ ಕುಂತಿ ತೇಲಿಬಿಟ್ಟ ಪೆಟ್ಟಿಗೆಯನ್ನು ಸೂತನೊಬ್ಬನು ನೋಡಿ ಅಚ್ಚರಿಯಿಂದ ಅದನ್ನು ತೆಗೆದುಕೊಂಡು ಮುಚ್ಚಳ ತೆರೆದು ನೋಡಲು ಮತ್ತಷ್ಟು ಬೆರಗಾದ. ಕವಚ ಕುಂಡಲಗಳಿಂದ ಕೂಡಿದ ತೇಜೋಮಯವಾದ ಮಗು!! ಅವನ ಸಂತೋಷ, ಸಂಭ್ರಮಗಳಿಗೆ ಎಣೆಯಿಲ್ಲವಾಯಿತು.

ಮಕ್ಕಳಿಲ್ಲದ ತಮಗೆ ದೇವರುಕೊಟ್ಟ ವರವೆಂದು ಭಾವಿಸಿ ಮಗುವನ್ನು ತಂದು ಮಡದಿಯ ಕೈಯ್ಯಲ್ಲಿರಿಸಿದ. ಅವಳಿಗೂ ಅವನಷ್ಟೇ ಅಲ್ಲ, ಅದಕ್ಕಿಂತ ಹೆಚ್ಚು ಸಂತೋಷವೆನಿಸಿತು.

ಕುಂತಿಯ ವಿವಾಹ ಸಮಯಕ್ಕೆ ಈ ರಹಸ್ಯವೆಲ್ಲ ಮರೆತು ಹೋಗಿತ್ತು. ಆದ್ದರಿಂದ ವಿವಾಹಕ್ಕೆ ಯಾವುದೇ ಸಮಸ್ಯೆ ಅಡ್ಡಿ ಬಂದಿರಲಿಲ್ಲ.

ಪಾಂಡು ಕುಂತಿಯ ಜೊತೆಗೆ ಮದ್ರಾಧಿಪತಿಯ ಮಗಳಾದ ಮಾದ್ರಿಯನ್ನೂ ವಿವಾಹವಾದ. ಮಾದ್ರಿಯೂ ಅದ್ಭುತ ಸೌಂದರ್ಯವತಿ ಯಾಗಿದ್ದಳು. ಇಬ್ಬರು ಹೆಂಡತಿಯರೊಂದಿಗೆ ಪಾಂಡುರಾಜ ಸುಖವಾಗಿ ಬಾಳಿದ; ಬಹಳ ದಕ್ಷತೆಯಿಂದ ರಾಜ್ಯವಾಳಿದ.

ಒಮ್ಮೆ ಪಾಂಡು ಮೃಗಯಾ ವಿಹಾರಿಯಾಗಿ ಕಾಡಿನಲ್ಲಿ ಅಡ್ಡಾಡುತ್ತಿದ್ದ; ಯಾವುದಾದರೂ ಬೇಟೆ ಸಿಗುವುದೇನೋ ಎಂದು ಕಾಯುತ್ತಿದ್ದ. ಬೇಟೆಯಾಡುವ ಭರದಲ್ಲಿ ಮೃಗಗಳ (ಜಿಂಕೆಗಳ) ಜೋಡಿಯೊಂದನ್ನು ಕಂಡು ಬಾಣ ಹೊಡೆದ. ಮೃಗ ಮಿಥುನಗಳು ಕಾಮ ಕ್ರೀಡೆಯಲ್ಲಿತೊಡಗಿದ್ದವು. ಅವುಗಳು ಪಾಂಡುವಿನ ಬಾಣದಿಂದ ತೀವ್ರವಾಗಿ ಗಾಯಗೊಂಡು ಸಾವಿನ ಸ್ಥಿತಿಯನ್ನು ತಲುಪಿದವು. ಮೃಗಗಳು ಈಗ ಮೃಗಗಳಾಗಿರಲ್ಲಿಲ್ಲ. ಅವು ಋಷಿ ದಂಪತಿಗಳಾಗಿದ್ದವು. ಕಿಂದಮನೆಂಬ ಋಷಿ ತನ್ನ ಮಡದಿಯೊಡನೆ ಜಿಂಕೆಗಳ ರೂಪ ಧರಿಸಿ ಕ್ರೀಡಿಸುತ್ತಿದ್ದ. ಪಾಂಡುವು ಮಾಡಿದ ಕೆಲಸದಿಂದ ಸಾಯುವಂತಾದಾಗ, ಕೋಪ, ರೋಷಗಳಿಂದ ಪಾಂಡುವಿನತ್ತ ತಿರುಗಿ, “ಎಲೈ ದೊರೆಯೇ, ಏನೂ ಅಪರಾಧ ಮಾಡದ ನಮ್ಮನ್ನು, ನಾವು ರತಿಸುಖಾಸಕ್ತನಾಗಿರುವ ಕ್ಷಣದಲ್ಲಿ ನಿನಗೆ ಸಾವು ಬರಲಿ” ಎಂದು ಶಾಪ ನುಡಿದು ಸಾವನ್ನಪ್ಪಿದ. ಪಾಂಡುವಿಗೆ ಭಯವಾಯಿತು; ಪಶ್ಚಾತ್ತಾಪವಾಯಿತು.

ತನ್ನ ಶಾಪದ ನೆನಪು ಅವನನ್ನು ಪದೇ ಪದೇ ಕಾಡಿತ್ತು. ಆ ಶಾಪದಿಂದ ಪರಿಹಾರ ಸಾಧ್ಯವಿರಲಿಲ್ಲ. ಆದ್ದರಿಂದ ರಾಜ್ಯ, ರಾಜ ಸುಖ ಭೋಗಗಳನ್ನೆಲ್ಲ ತ್ಯಜಿಸಿ ಕಾಡಿಗೆ ಹೊರಟ ತಪಸ್ಸಿನಲ್ಲಿ ನಿರತನಾದ. ಧೃತರಾಷ್ಟ್ರನೇ ರಾಜ್ಯದ ಜವಾಬ್ದಾರಿಯನ್ನು ಹೊತ್ತ. ಕುಂತಿ, ಮಾದ್ರಿಯರೂ

ಪಾಂಡುವಿನ ಜೊತೆಗೇ ಕಾಡಿಗೆ ಹೊರಟರು. ಎಲ್ಲರೂ ತಪಸ್ವಿಗಳಂತೆ ಬಾಳಿದರು. ಆದರೆ ವಂಶೋದ್ಧಾರಕ್ಕೆ ಮಕ್ಕಳು ಬೇಕೆನಿಸಿ, ಪಾಂಡು ಕುಂತಿಗೆ, ಅವಳಿಗಿದ್ದ ಮಂತ್ರಶಕ್ತಿಯ ಫಲವಾಗಿ ಮಕ್ಕಳನ್ನು ಪಡೆಯಲು ಆದೇಶಿಸಿದ. ಕುಂತಿಯೂ ಪಂಡುವಿನ ಮಾತಿನಂತೆ ಯಮ, ಇಂದ್ರ, ವಾಯು ದೇವತೆಗಳನ್ನು ಆಹ್ವಾನಿಸಿ ಮಕ್ಕಳನ್ನು ಪಡೆದಳು. ಅಶ್ವಿನಿಕುಮಾರರನ್ನು ಆಹ್ವಾನಿಸಿ ಮಾದ್ರಿಯಿಂದ ಇಬ್ಬರ ಮಕ್ಕಳಾಗುವಂತೆ ನೋಡಿಕೊಂಡಳು. ಈ ಮಕ್ಕಳಿಗೆ ಕ್ರಮವಾಗಿ ಯುಧಿಷ್ಠಿರ, ಅರ್ಜುನ, ಭೀಮ, ನಕುಲ, ಸಹದೇವರೆಂದು ನಾಮಕರಣ ಮಾಡಿದರು. ಮಕ್ಕಳೊಂದಿಗೆ ಕೆಲಕಾಲ ಪಾಂಡು, ಕುಂತಿ, ಮಾದ್ರಿಯರು ಸಂತೋಷದಿಂದ ಬದುಕಿದರು.

ಒಮ್ಮೆ ವಸಂತಾಗಮನವಾಯಿತು. ಪ್ರಕೃತಿಯಲ್ಲಿನ ಪ್ರತಿಯೊಂದು ವಸ್ತುವೂ ಚೆಲುವಿನಿಂದ ಕಂಗೊಳಿಸಿತು.ಬಣ್ಣಬಣ್ಣದ ಅರಳಿದ ಹೂಗಳ ಆನಂದೋಲ್ಲಾಸ; ತಂಪಾಗಿ ಬೀಸಿ ಗಂಧಗಾಳಿಯ ಮಾದಕತೆ; ಮಧುರ ಮಂಜುಳ ನಾದದಿಂದ ಝುಳುಝುಳು ಹರಿವ ಹೊಳೆಗಳು; ಮಾವು ಮಲ್ಲಿಗೆಯ ಕಂಪು; ಮದವೇರಿಸುತ್ತಿದ್ದ ಕೋಗಿಲೆಯ ಇಂಪು ಈ ವಸಂತದ ಮೋಹಕತೆ ಯಾರನ್ನು ಬಿಡದೆ ಸೆಳೆಯುತ್ತಿತ್ತು.

ಮಾದ್ರಿ ಚೆಲುವನ್ನು ನಿಸರ್ಗದಲ್ಲಿ ನೋಡಿ ಆನಂದಿಸಲು ಬಂದಳು. ತಾನೂ ವಿಶೇಷವಾದ ರೀತಿಯಲ್ಲಿ ಪುಷ್ಪಾಭರಣಗಳಿಂದ ಅಲಂಕರಿಸಿ ಕೊಂಡು ಅಡ್ಡಾಡಿದಳು.

ಪಾಂಡು ದೂರದಲ್ಲೆಲ್ಲೋ ಇದ್ದವನು ಆಕಸ್ಮಿಕವಾಗಿ ಮಾದ್ರಿಗೆ ಎದುರಾದ. ಅವಳ ಈ ಸೌಂದರ್ಯಕ್ಕೆ ಸ್ತಂಭಿಸಿ ಹೋದ. ಎಂದೂ ಕಾಣದ ಚೆಲುವನ್ನು ಇಂದು ಅವಳಲ್ಲಿ ಗುರುತಿಸಿದ. ಅಲ್ಲಿಯವರೆಗೂ ನಿಯಂತ್ರಿಸಿ ಇರಿಸಿಕೊಂಡಿದ್ದ ಇಂದ್ರಿಯಗಳು ಹತೋಟಿಯಿಂದ ಹೊರಗೆ ಬರಲು ಚಡಪಡಿಸಿದವು. ಆ ಕ್ಷಣಕ್ಕೆ ಪಾಂಡು ಹಿಂದಿನ ತನ್ನ ಶಾಪ, ಸಂಯಮ ಎಲ್ಲವನ್ನೂ ಮರೆತು, ಮಾದ್ರಿಯನ್ನು ಬರಸೆಳೆದು ಬಿಗಿದು ಅಪ್ಪಿಕೊಂಡ. ಮಾದ್ರಿ ಚಿಟ್ಟನೆ ಚೀರಿದಳು; ಬಿಡಿಸಿಕೊಳ್ಳಲು ಪ್ರಯತ್ನಿಸಿದಳು.

ಅವನಿಗೆ ಅವನ ಶಾಪವನ್ನು ನೆನಪಿಸಿದಳು. ಆದರೂ ಪಾಂಡು ಬಿಡದೆ ಅವಳನ್ನು ಅಪ್ಪಿಕೊಂಡ. ಕ್ಷಣಾರ್ಧದಲ್ಲಿ ಕುಸಿದು ಕೆಳಗೆ ಉರುಳಿದ. ಶಾಪ ತನ್ನ ಪರಿಣಾಮವನ್ನು ತೋರಿಸಿತ್ತು. ಕುಂತಿ, ಮಾದ್ರಿಯರಿಗೆ ದಿಕ್ಕೇ ತೋಚದಾಯಿತು. ಮಾದ್ರಿ ತನ್ನ ಮಕ್ಕಳನ್ನು ಕುಂತಿಗೆ ಒಪ್ಪಿಸಿ ಪಾಂಡುವಿನೊಂದಿಗೆ ಸಹಗಮನಕ್ಕೆ ಸಿದ್ಧಳಾದಳು.

ಪಾಂಡುವಿನ ಸಾವಿನ ಸುದ್ದಿ ಹಸ್ತಿನಾಪುರವನ್ನು ತಲುಪಿತು. ಹಸ್ತಿನಾಪುರದಿಂದ ರಾಜ ಕುಟುಂಬದವರು ಪ್ರಜೆಗಳು, ದುಃಖದ ಕಡಲಿನಲ್ಲಿ ಮುಳುಗಿದರು.

ಧೃತರಾಷ್ಟ್ರ ಕಣ್ಣಿಲ್ಲದಿದ್ದರೂ ರಾಜ್ಯಭಾರವನ್ನು ವಹಿಸಿಕೊಂಡ. ಅವನಿಗೆ ನೂರು ಜನ ಮಕ್ಕಳು. ಕೌರವರೆಂದು ಅವರನ್ನು ಕರೆದರು. ಒಬ್ಬಳೇ ಒಬ್ಬಳು ಮಗಳು ದುಶ್ಶಲೆ.

ಪಾಂಡುವಿನ ಮರಣಾನಂತರ ಪಾಂಡವ ಸೋದರರು ಮತ್ತು ಕುಂತಿ ಅರಮನೆಗೆ ಬಂದು ಇರತೊಡಗಿದರು. ಆದರೆ ಕೌರವರಿಗೆ ಅವರನ್ನು ಕಂಡರೆ ಆಗುತ್ತಿರಲಿಲ್ಲ. ಜೊತೆಗೆ ಶಕುನಿಯ ದುರ್ಬೋಧೆಯಿಂದ ಮತ್ತಷ್ಟು ದ್ವೇಷ, ಅಸೂಯೆ ಬೆಳೆಸಿಕೊಂಡಿದ್ದರು. ಕಾಲು ಕೆರೆದು ಸಣ್ಣ ಪುಟ್ಟ ವಿಷಯಗಳಿಗೆಲ್ಲ ಜಗಳ ತೆಗೆಯುತ್ತಿದ್ದರು.

ಮಕ್ಕಳಾಗಿರುವಾಗಿನಿಂದಲೂ, ಆಟ ಪಾಠಗಳ ಸಮಯದಲ್ಲೂ ಬಲಾಬಲ ಪ್ರದರ್ಶನ ನಡೆಯುತ್ತಿತ್ತು. ಪಾಂಡವರು ಆಟ ಪಾಠಗಳಲ್ಲೂ ಸಾಹಸದಲ್ಲೂ ಮುಂದಿದ್ದರು. ದುರ್ಯೋಧನನ ಅಸೂಯೆಗೆ ಇದೂ ಒಂದು ಕಾರಣವಾಗಿತ್ತು. ಅವರನ್ನು ಹೇಗಾದರೂ ಸೋಲಿಸಬೇಕೆಂದು ಅವಕಾಶಕ್ಕಾಗಿ ಎದುರು ನೋಡುತ್ತಿದ್ದರು. ಆಧರೆ ದುರಾದೃಷ್ಟ! ಅವನಿಗೆ ಅವಕಾಶವೆ ದೊರೆಯುತ್ತಿರಲಿಲ್ಲ.

ಪಾಂಡವರನ್ನು ಯಾವ ರೀತಿಯಲ್ಲೂ ಸೋಲಿಸಲು ಆಗದಿದ್ದಾಗ, ಕೊಲೆಯ ಯೋಚನೆಗೆ ಹೊರಟ. ಭೀಮನಿಗೆ ಊಟ, ತಿಂಡಿಯೆಂದರೆ ಬಲು ಪ್ರಾಣ. ಅವನೊಬ್ಬ ಹೊಟ್ಟೆಬಾಕನಾಗಿದ್ದ. ಭೀಮನ ಈ ದೌರ್ಬಲ್ಯವನ್ನು ಬಳಸಿಕೊಳ್ಳಲು ಯೋಚಿಸಿದ. ಒಂದು ದಿನ ಅವನು

ಲಡ್ಡುಗೆಗಳನ್ನು ಮಾಡಿಸಿದ. ಪಾಂಡವರನ್ನೂ ತಮ್ಮೊಡನೆ ಊಟಕ್ಕೆ ಬರುವಂತೆ ಆಹ್ವಾನಿಸಿದ. ಭೀಮನಿಗೆಂದೇ ಪ್ರತ್ಯೇಕವಾಗಿ ಎರಡು ಲಡ್ಡುಗೆಗಳನ್ನು ವಿಷ ಹಾಕಿ ಸಿದ್ಧಪಡಿಸಿದ. ಪಾಂಡವರು ದುರ್ಯೋಧನನ ಕುತಂತ್ರವನ್ನು ತಿಳಿಯದೆ ಒಪ್ಪಿಕೊಂಡರು.

ದುರ್ಯೋಧನನ ಹಾಗೂ ಹೀಗೂ ಮಾಡಿ ಯಾರಿಗೂ ತಿಳಿಯದ ರೀತಿಯಲ್ಲಿ ವಿಷದ ಲಡ್ಡುಗೆಗಳನ್ನು ಭೀಮನೇ ತಿನ್ನುವಂತೆ ಮಾಡಿದ. ವಿಷಯದ ಲಡ್ಡುಗೆಗಳೆಂದು ತಿಳಿಯದೆ ಭೀಮ ತಿಂದು ಮುಗಿಸುತ್ತಿದ್ದಂತೆ, ಕೆಳಗುರುಳಿ ಪ್ರಾಣ ನೀಗಿದ. ದುರ್ಯೋಧನ ರಹಸ್ಯವಾಗಿ ಭೀಮನ ಕಳೇಬರವನ್ನು ನೀರಿಗೆ ಎಸೆದ.

ಆಟ, ಊಟ ಎಲ್ಲ ಮುಗಿದ ಮೇಲೆ ಮಕ್ಕಳು (ಕೌರವರು, ಪಾಂಡವರು) ಅರಮನೆಗೆ ಹಿಂತಿರುಗಿದರು. ಸ್ವಲ್ಪ ಸಮಯದ ನಂತರ ಭೀಮನು ತಮ್ಮ ಜೊತೆಗೆ ಇಲ್ಲದ್ದನ್ನು ಗಮನಿಸಿ ಎಲ್ಲರೂ ಗಾಭರಿಗೊಂಡವರು, ಅವನನ್ನು ಹುಡುಕಲೆಂದು ಒಬ್ಬೊಬ್ಬರು ಒಂದು ಕಡೆ ಹೋದರು.

ಈ ಕಡೆ ಭೀಮ ನೀರಿನಲ್ಲಿ ಬಿದ್ದು ವಿಷಪೂರಿತ ಹಾವುಗಳಿಂದ ಕಚ್ಚಿಸಿಕೊಂಡಾಗ ಅವನ ದೇಹದಲ್ಲಿನ ವಿಷವೆಲ್ಲಾ ದೂರವಾಗಿ ಅವನು ಎಚ್ಚೆತ್ತುಕೊಂಡು. ಈಜುತ್ತಾ ದಡವನ್ನು ಸೇರಿದ. ಅಲ್ಲಿ ಯಾರೊಬ್ಬರನ್ನೂ ಕಾಣದೆ ಅರಮನೆಗೆ ಹಿಂತಿರುಗಿದ.

ಭೀಮನನ್ನು ಕಾಣದೆ ದುಃಖ ನಿರಾಸೆಗಳಿಂದ ಹಿಂತಿರುಗಿದ ಪಾಂಡವರಿಗೆ, ಭೀಮ ಜೀವಂತವಾಗಿ, ಸುರಕ್ಷಿತವಾಗಿ ಹಿಂತಿರುಗಿದ್ದನ್ನು ನೋಡಿ ಸಂತೋಷವಾಯಿತು.

ಪಾಂಡವ ಸೋದರರಿಗೆ ಇದೆಲ್ಲವೂ ದುರ್ಯೋಧನನಿಂದಲೇ ಆಯಿತೆಂಬುದು ನಂತರ ತಿಳಿಯಿತು. ಇನ್ನು ಮುಂದೆ ಇಂತಹ ಅಪಾಯ ಗಳು ಆಗದಂತೆ ಎಚ್ಚರ ಹಿಸಿಬೇಕೆಂದುಕೊಂಡರು. ದುರ್ಯೋಧನನ ಸಹವಾಸದಿಂದ ಆದಷ್ಟೂ ದೂರವಿರಲು ಪ್ರಯತ್ನಿಸುತ್ತಿದ್ದರು.



# ದ್ರೋಣರು ಗುರುಗಳಾದರು

ಮಕ್ಕಳು ಬೆಳೆದು ದೊಡ್ಡವರಾದರು. ಅವರಿಗೆ ಶಸ್ತ್ರಾಭ್ಯಾಸವನ್ನೂ ವಿದ್ಯಾಭ್ಯಾಸವನ್ನು ಮಾಡಿಸಬೇಕಿತ್ತು. ಅದಕ್ಕಾಗಿ ಒಬ್ಬ ಒಳ್ಳೆಯ ಗುರುಗಳ ಹುಡುಕಾಟ ನಡೆದಿತ್ತು.

ಒಮ್ಮೆ ಮಕ್ಕಳು ಆಡುತ್ತಿದ್ದಾಗ ಅಕಸ್ಮಾತ್ತಾಗಿ ಅವರಾಡುತ್ತಿದ್ದ ಚೆಂಡು ಹೋಗಿ ಅಲ್ಲಿಯೇ ಹತ್ತಿರದಲ್ಲಿದ್ದ ಬಾವಿಯಲ್ಲಿ ಬಿತ್ತು. ಬಾವಿಯೊಳಗಿಂದ ಚೆಂಡನ್ನು ಹೇಗೆ ತೆಗೆಯಬೇಕೆಂದು ತಿಳಿಯದೆ ಅಸಹಾಯಕರಂತೆ ನಿಂತಿದ್ದರು. ಅದೇ ಸಮಯಕ್ಕೆ ಸರಿಯಾಗಿ ಒಬ್ಬ ಬ್ರಾಹ್ಮಣನು ಬಾವಿಯಿಂದ ಸ್ವಲ್ಪ ದೂರದಲ್ಲಿ ನಿಂತಿದ್ದು ಮಕ್ಕಳ ಕಷ್ಟವನ್ನು, ಅವರ ಅಸಹಾಯಕತೆಯನ್ನು ಗಮನಿಸಿ, ಒಳಗೊಳಗೇ ನಗುತ್ತಿದ್ದವನು, ಅವರ ಬಳಿಗೆ ಬಂದು, ಅವರ ದುಃಖಕ್ಕೆ ಕಾರಣವೇನೆಂದು ವಿಚಾರಿಸಿದ. ಮಕ್ಕಳು ಕಾರಣವನ್ನು ತಿಳಿಸಿದ ಮೇಲೆ "ರಾಜಕುಮಾರರೇ ಇಷ್ಟಕ್ಕೇ ದುಃಖಿಸಬೇಕೇ? ಅಸಹಾಯಕರಂತೆ ನಿಂತಿರುವ ಬದಲು ನಿಮ್ಮ ಬಿಲ್ಲು ಬಾಣಗಳನ್ನು ಬಳಸಿ ಚೆಂಡನ್ನು ತೆಗೆದುಕೊಳ್ಳಬಾರದೇಕೆ? ನಿಮಗಾಗದಿದ್ದಲ್ಲಿ ಹೇಳಿ, ನಾನೇ ತೆಗೆದುಕೊಡುತ್ತೇನೆ'' ಎಂದನು. ಅವರು ತೆಗೆದುಕೊಡುವುದರಲ್ಲಿ ಪೂರ್ತಿ ನಂಬಿಕೆ ಇಲ್ಲದಿದ್ದರೂ ಕಡೆಗೆ ತೆಗೆದುಕೊಡಲು ಹೇಳಿದರು.

ದ್ರೋಣ ಹುಲ್ಲಿನ ಎಸಳೊಂದನ್ನು ತೆಗೆದು ಬಾಣದಂತೆ ಹೂಡಿ ಚೆಂಡಿನೆಡೆಗೆ ಬಿಟ್ಟ. ಅದು ನೇರವಾಗಿ ಹೋಗಿ ಚೆಂಡಿಗೆ ನಾಟಿತು. ಮತ್ತೊಂದು ಹುಲ್ಲನ್ನು ಅದರೆಡೆಗೆ ಕಳಿಸಿದ. ಹೀಗೆ ಒಂದಾದ ಮೇಲೊಂದು ಹುಲ್ಲಿನ ಎಸಳನ್ನು ಕಳಿಸುತ್ತಾ ಹೋದಾಗ ಸರಪಳಿಯೊಂದು

ಸಿದ್ಧವಾಯಿತು. ಸುಲಭವಾಗಿ ಮೇಲಕ್ಕೆ ಎಳೆದಾಗ ಚೆಂಡು ಹೊರಗೆ ಬಂತು. ಮಕ್ಕಳು ಬ್ರಾಹ್ಮಣನತ್ತ ಬೆರಗಿನಿಂದ ನೋಡಿದರು. ಅವರನ್ನೇ ಗುರುಗಳನ್ನಾಗಿ ಪಡೆಯಲು ಬಯಸಿದರು. ಆತನ ಪರಿಚಯವನ್ನು ಕೇಳಿದರು. ಆದರೆ ದ್ರೋಣ ತನ್ನ ಪರಿಚಯ ಹೇಳಲಿಲ್ಲ. ಬದಲಾಗಿ ಹೋಗಿ, ತನ್ನ ಬಗ್ಗೆ ಭೀಷ್ಮರನ್ನು ಕೇಳಲು ಹೇಳಿದ.

ರಾಜಕುಮಾರರು ಅರಮನೆಗೆ ಹಿಂತಿರುಗಿ ಇಲ್ಲಿ ನಡೆದುದೆಲ್ಲವನ್ನೂ ವಿವರಿಸಿದರು. ದ್ರೋಣರ ವಿವರ ನೀಡಿದರು. ತಮಗೆ ಚೆಂಡನ್ನು ಪಡೆಯಲು ಹೇಗೆ ಸಹಕರಿಸಿದರು ಎಂಬುದನ್ನೂ ತಿಳಿಸಿದರು. ಭೀಷ್ಮರು ಎಲ್ಲವನ್ನೂ ಕೇಳಿಸಿಕೊಂಡ ಮೇಲೆ ಇಂತಹ ವಿದ್ಯೆಯು ದ್ರೋಣರಿಗಲ್ಲದೆ ಬೇರೆಯವರಿಗೆ ಸಾಧ್ಯವಿಲ್ಲವಾದ್ದರಿಂದ ಆ ಬ್ರಾಹ್ಮಣ, ದ್ರೋಣರೇ ಇರಬೇಕೆಂದು ಅಭಿಪ್ರಾಯ ಪಟ್ಟ. ಕೂಡಲೇ ದ್ರೋಣಾಚಾರ್ಯರನ್ನು ಕಂಡು ರಾಜಕುಮಾರರಿಗೆ ಬಿಲ್ವಿದ್ಯೆಯನ್ನು ಕಲಿಸಲು ಬೇಡಿಕೊಂಡ.

ದ್ರೋಣರೂ ರಾಜಕುಮಾರರಿಗೆ ಗುರುಗಳಾಗಲು ಒಪ್ಪಿದರು. ದ್ರೋಣರ ಖ್ಯಾತಿ ಎಲ್ಲೆಡೆಗೂ ಹಬ್ಬಿತ್ತು. ರಾಜಕುಮಾರರಂತೂ ದ್ರೋಣಾಚಾರ್ಯರಲ್ಲಿ ವಿದ್ಯೆ ಕಲಿಯಲು ಉತ್ಸುಕತೆಯಿಂದ ಮುಂದಾದರು. ದ್ರೋಣರು ರಾಜಕುಮಾರರ ಜೊತೆ ತಮ್ಮ ಮಗನಾದ ಅಶ್ವತ್ಥಾಮನಿಗೂ ಮನಸ್ಸಿಟ್ಟು ಬಿಲ್ವಿದ್ಯೆಯನ್ನು ಕಲಿಸಿದರು. ತಮಗೆ ತಿಳಿದ ಎಲ್ಲ ಬಾಣ ಪ್ರಯೋಗ ತಂತ್ರಗಳನ್ನೂ ನಿಸ್ಪೃಹತೆಯಿಂದ ಕಲಿಸಿದರು.



## ಅರ್ಜುನನ ಬಿಲ್ವಿದ್ಯಾ ಪ್ರಾವೀಣ್ಯತೆ

ರಾಜಕುಮಾರರಿಗೆ ಉಪನಯನ ಸಂಸ್ಕಾರವನ್ನು ಮಾಡಿ, ವಿದ್ಯೆ ಕಲಿಯಲು ಅರಮನೆಯನ್ನು ಬಿಟ್ಟು ಗುರುಕುಲಕ್ಕೆ ನಡೆದರು. ದ್ರೋಣರಲ್ಲಿ ಯುದ್ಧಕ್ಕೆ ಬೇಕಾದ ಎಲ್ಲ ಬಗೆಯ ಶಸ್ತ್ರಾಸ್ತ್ರ ಪ್ರಯೋಗ ತಂತ್ರಗಳನ್ನು, ಕತ್ತಿವರಸೆ, ಮಲ್ಲಯುದ್ಧ ಮೊದಲಾದ ವಿದ್ಯೆಗಳನ್ನು ಕಲಿತರು. ಜೊತೆಗೆ ವೇದಶಾಸ್ತ್ರ, ರಾಜನೀತಿಶಾಸ್ತ್ರ ಮುಂತಾದವುಗಳನ್ನೂ ಕಲಿತರು.

ದ್ರೋಣರು ರಾಜಕುಮಾರರಿಗೆ ಯಾವುದೇ ಪಕ್ಷಪಾತವಿಲ್ಲದೆ ತಮಗೆ ತಿಳಿದಿದ್ದೆಲ್ಲವನ್ನೂ ಎಲ್ಲರಿಗೂ ಕಲಿಸಿಕೊಟ್ಟರಾದರೂ ಅರ್ಜುನ ಕಲಿಯುವುದರಲ್ಲಿ ಎಲ್ಲರಿಗಿಂತಲೂ ಮುಂದಿದ್ದ. ಅವನ ಚುರುಕುತನ, ಜಾಣ್ಮೆ, ಕುಶಲತೆ ಮತ್ತು ಕಲಿಯುವಲ್ಲಿನ ಏಕಾಗ್ರತೆಗಳನ್ನು ಕಂಡು ಬಹಳವಾಗಿ ಮೆಚ್ಚಿಕೊಂಡಿದ್ದರು. ಅವನು ಅವರ ಖಾಸಾ ಶಿಷ್ಯನಾಗಿದ್ದ. ಅವನ ಮೇಲೆ ದ್ರೋಣಾಚಾರ್ಯರು ತುಂಬ ಭರವಸೆಗಳನ್ನು ಇರಿಸಿಕೊಂಡಿದ್ದರು. ಅದನ್ನು ಆಗಾಗ ವ್ಯಕ್ತಪಡಿಸುತ್ತಿದ್ದರು. ಮತ್ತು ಅವನ ಬಗ್ಗೆ ಸ್ವಲ್ಪ ಕಾಳಜಿ ವಹಿಸಿದ್ದರು. ಇದು ದುರ್ಯೋಧನಾದಿಗಳಿಗೆ ಸಹಿಸಲು ಆಗಲಿಲ್ಲ. ಅವನ ಬಗ್ಗೆ ಅಸೂಯೆಯನ್ನು ಬೆಳೆಸಿಕೊಂಡರು. ವಿಶೇಷವಾಗಿ ದುರ್ಯೋಧನನಿಗೆ ಹೆಚ್ಚಿನ ಅಸೂಯೆಯುಂಟಾಯಿತು. ದ್ರೋಣರು ಇದನ್ನು ಗಮನಿಸಿದರು. ತಾನು ಅರ್ಜುನನ ಬಗ್ಗೆ ಆಸಕ್ತಿ ತೋರಿಸಲು ಕಾರಣವೇನೆಂಬುದನ್ನು ಅವರಿಗೆ ಮನದಟ್ಟು ಮಾಡಿಕೊಡಲು ಯೋಚಿಸಿದರು. ಆದ್ದರಿಂದ ಒಂದ ದಿನ ಎಲ್ಲ ಶಿಷ್ಯರಿಗೆ ಒಂದು ಪರೀಕ್ಷೆ ಇಟ್ಟರು. ಅವರೆಲ್ಲರನ್ನು ಕರೆದು ಮರದ ಕೊಂಬೆಯೊಂದರ ಮೇಲಿದ್ದ ಕೃತಕ ಹಕ್ಕಿಯನ್ನು ತೋರಿಸಿ, ಅದರ ಕಣ್ಣಿಗೆ ನೇರವಾಗಿ ಗುರಿಯಿಟ್ಟು ಹೊಡೆಯಬೇಕೆಂದರು. ಒಬ್ಬೊಬ್ಬರನ್ನೇ ಕರೆದು ಮಾಡಬೇಕಾದ್ದನ್ನು ವಿವರಿಸಿ ಹೇಳಿದರು.

ಗುರುಗಳ ಆದೇಶದಂತೆ ಒಬ್ಬೊಬ್ಬರಾಗಿ ಬಂದು ಹಕ್ಕಿಯ ಕಣ್ಣಿಗೆ ಒಂದೇ ಬಾರಿಗೆ ಗುರಿಯಿಟ್ಟು ಹೊಡೆಯುವಲ್ಲಿ ವಿಫಲರಾದರು. ಕಡೆಯದಾಗಿ ಅರ್ಜುನನ ಸರದಿ ಬಂತು. ಎಲ್ಲರನ್ನೂ ಕೇಳಿದಂತೆ ಅವನನ್ನೂ ಏನೇನು ನೋಡುತ್ತಿರುವೆಯೆಂದು ಪ್ರಶ್ನಿಸಿದರು. ಅರ್ಜುನ ತನಗೆ ಹಕ್ಕಿಯ ಕಣ್ಣೊಂದು ಕಾಣುತ್ತಿದೆಯೇ ಹೊರತಾಗಿ ಮತ್ತೇನು ಕಾಣುತ್ತಿಲ್ಲವೆಂದು ಉತ್ತರಿಸಿದ. ದ್ರೋಣಾಚಾರ್ಯರು, "ಹಾಗಾದರೆ ಹೊಡಿ" ಎಂದು ಆದೇಶಿಸಿದರು. ಆದೇಶ ಮುಗಿಯುತ್ತಿದ್ದಂತೆಯೇ ಕಣ್ಣಿಗೆ ನಾಟಿದ್ದ ಬಾಣದೊಂದಿಗೆ ಹಕ್ಕಿ ಕೆಳಗೆ ಬಿತ್ತು. ಈ ಸಾಹಸಕ್ಕೆ, ಗೆಲುವಿಗೆ ಎಲ್ಲರೂ ಜೋರಾಗಿ ಚಪ್ಪಾಳೆ ತಟ್ಟಿ ಮೆಚ್ಚುಗೆ ಸೂಚಿಸಿದರು. ಈ ರೀತಿಯಾಗಿ ದ್ರೋಣಾಚಾರ್ಯರು ಅರ್ಜುನ ಎಲ್ಲರಿಗಿಂತಲೂ ಸಮರ್ಥನಾದ ಬಿಲ್ಲುಗಾರನೆಂಬುದನ್ನು ತೋರಿಸಿಕೊಟ್ಟರು.



## ಅರ್ಜುನ ಏಕಲವ್ಯರ ಭೇಟಿ

ಅರ್ಜುನ ಅತ್ಯಂತ ಕುಶಲನಾದ ಬಿಲ್ಲುಗಾರನೆಂಬುದರಲ್ಲಿ ಸಂದೇಹವಿಲ್ಲ. ಆದರೆ ಇದರಿಂದ ಅವನಲ್ಲಿ ವಿನಯಕ್ಕಿಂತ ಅಹಂಕಾರ ಮನೆ ಮಾಡಿತು. ದ್ರೋಣಾಚಾರ್ಯರೂ ಕೂಡಾ ಅವನನ್ನು ಹೊಗಳಿ ಅಟ್ಟಕ್ಕೇರಿಸಿ ಕೂರಿಸಿದ್ದರು. ಅವನನ್ನು ಮೀರಿಸುವ ಬಿಲ್ಲುಗಾರರು ಮೂರು ಲೋಕಗಳಲ್ಲಿಯೂ ಇಲ್ಲದಂತೆ ಮಾಡುತ್ತೇನೆಂದು ಮಾತು ಬೇರೆ ಕೊಟ್ಟುಬಿಟ್ಟಿದ್ದರು. ಇದರಿಂದ ಅವನ ಜಂಬಕ್ಕೆ ಕೊನೆಯಿಲ್ಲವಾಗಿತ್ತು.

ದ್ರೋಣಾಚಾರ್ಯರು ಆಶ್ರಮದಿಂದ ಸ್ವಲ್ಪದೂರದಲ್ಲಿ, ಕಾಡಿನ ಒಳಭಾಗದಲ್ಲಿ ಬೇಡರ ಒಂದು ಸಣ್ಣ ಹಳ್ಳಿಯಿತ್ತು. ಅಲ್ಲಿ ಏಕಲವ್ಯನೆಂಬ ಬೇಡರ ಯುವಕನೊಬ್ಬ ಬಿಲ್ವಿದ್ಯೆಯಲ್ಲಿ ಮಹಾಕುಶಲನಾಗಿದ್ದ. ಆದರೂ ದ್ರೋಣಾಚಾರ್ಯರ ಬಳಿ ಇನ್ನಷ್ಟು ಕಲಿತು ಸಮರ್ಥನಾಗಬೇಕೆಂದು ಯೋಚಿಸಿ, ಒಮ್ಮೆ ಅವರನ್ನು ಭೇಟಿಯಾಗಿದ್ದ. ಆದರೆ ಅವನು ಕೀಳು ಜಾತಿಯವನಾಗಿದ್ದ ಕಾರಣ ಬಿಲ್ವಿದ್ಯೆಯನ್ನು ಕಲಿಸಲು ನಿರಾಕರಿಸಿದ್ದರು. ಆದರೂ ಏಕಲವ್ಯ ದ್ರೋಣಾಚಾರ್ಯರನ್ನೆ ಮನಸ್ಸಿನಲ್ಲಿ ಗುರುವೆಂದು ಭಾವಿಸಿ, ಅವರ ಪ್ರತಿಮೆಯನ್ನು ಸ್ಥಾಪಿಸಿ, ಅದರ ಮುಂದೆ ನಿಂತು ತಾನಾಗಿಯೇ ಬಿಲ್ವಿದ್ಯೆಯನ್ನು ಕಲಿತು ಪಾರಂಗತನಾದ. ಅದರಲ್ಲಿಯೂ ಶಬ್ದವೇದಿ ತಂತ್ರದಲ್ಲಿ ಅವನನ್ನು ಮೀರಿಸುವವರೇ ಇರದಂತಾದರು.

ಒಮ್ಮೆ ದ್ರೋಣಾಚಾರ್ಯರು ಅರ್ಜುನನನ್ನು ಜೊತೆಯಲ್ಲಿ ಕರೆದುಕೊಂಡು ಏಕಲವ್ಯನ ಗುಡಿಸಲಿನ ಮುಂದೆ ಹಾದು ಹೋಗುತ್ತಿದ್ದರು. ಅದೇ ಸಮಯದಲ್ಲಿ ಏಕಲವ್ಯ ಬಿಲ್ವಿದ್ಯೆಯನ್ನು ಅಭ್ಯಾಸ ಮಾಡುತ್ತಿದ್ದ. ಹತ್ತಿರದಲ್ಲಿಯೇ ನಾಯಿಯೊಂದು ಬೊಗಳುತ್ತಿತ್ತು. ಏಕಲವ್ಯನ ಏಕಾಗ್ರತೆಗೆ ಇದರಿಂದ ಭಂಗ ಉಂಟಾಗುತ್ತಿತ್ತು. ಅದಕ್ಕಾಗಿ ಅವನು ತಾನಿದ್ದೆಡೆ



ಯಿಂದಲೇ ಬಾಣಗಳನ್ನು ಬಿಟ್ಟು ನಾಯಿ ಬಾಯಿ ಮುಚ್ಚಿಸಿದ. ದ್ರೋಣಾಚಾರ್ಯ ಮತ್ತು ಅರ್ಜುನ ಈ ಅದ್ಭುತವನ್ನು ನೋಡಿ ಮೆಚ್ಚಿದರು. ಆದರೆ ಅರ್ಜುನನಿಗೆ ಆಗಲೇ ಅಸೂಯೆ ಪ್ರಾರಂಭವಾಗಿತ್ತು. ಗುರುಗಳ ಮುಖ ನೋಡಿದ. ದ್ರೋಣರಿಗೆ ಅರ್ಥವಾಯಿತು. ಏಕಲವ್ಯನು ಅಭ್ಯಾಸ ಮಾಡಿತ್ತಿದ್ದ ಜಾಗಕ್ಕೆ ಬಂದು ನಿಂತರು.

ಅಭ್ಯಾಸ ನಿರತನಾಗಿದ್ದ ಏಕಲವ್ಯನನ್ನು ದ್ರೋಣಾಚಾರ್ಯರು ಮಾತನಾಡಿಸಿದರು. "ಮಗು ನಿನ್ನ ಈ ಶಬ್ದವೇದಿ ವಿದ್ಯೆಯ ಕೌಶಲ್ಯವನ್ನು ನೋಡಿ ಬೆರಗಾಗಿದ್ದೇನೆ. ಹೇಳು ಮಗು ನಿನ್ನಂಥ ಶಿಷ್ಯನನ್ನು ಪಡೆದ ಗುರು ಯಾರು?" ಎಂದು ವಿಚಾರಿಸಿದರು.

ಏಕಲವ್ಯ ದ್ರೋಣಾಚಾರ್ಯರನ್ನು ದಿಟ್ಟಿಸಿ ನೋಡುತ್ತಾ, ಸಂತೋಷ, ಸಂಭ್ರಮಗಳಿಂದ ಕೂಡಿದ ದನಿಯಲ್ಲಿ. "ಗುರುಗಳೇ, ನೀವಲ್ಲದೆ ನನಗೆ ಇನ್ಯಾರು ತಾನೇ ಗುರುಗಳಾಗಲು ಸಾಧ್ಯ? ಇಷ್ಟು ದಿನಕ್ಕೆ ಇಂದು ನನಗೆ ಗುರುಗಳ ಅನುಗ್ರಹ ದೊರೆತಿದೆ. ಎಷ್ಟೋ ಕಾಲದಿಂದ ಇಂತಹ ಕ್ಷಣಗಳಿಗಾಗಿ ಕಾಯುತ್ತಿದ್ದೆ" ಎಂದು ಉತ್ತರಿಸಿದ.

ದ್ರೋಣಾಚಾರ್ಯರಿಗೆ ಅವನ ಮಾತುಗಳನ್ನು ಕೇಳಿ ಆಶ್ಚರ್ಯ ವಾಯಿತು. ಜೊತೆಗೆ ಅರ್ಜುನನನಿಗೆ ಪ್ರತಿಸ್ಪರ್ಧಿಯೊಬ್ಬ ಹುಟ್ಟಿಕೊಂಡನಲ್ಲ!

ಎಂಬ ಚಿಂತೆಯೂ ಆಯಿತು. ದ್ರೋಣರು ಸಂದಿಗ್ಧದಲ್ಲಿ ಸಿಲುಕಿದರು, ಅರ್ಜುನನಿಗೆ ಕೊಟ್ಟ ಭರವಸೆಯ ಮಾತಿಗೆ ಏನು ಮಾಡುವುದೆಂದು ಯೋಚನೆಯಾಯಿತು. ಏನಾದರೂ ಮಾಡಿ ಏಕಲವ್ಯನ ವರ್ಚಸ್ಸನ್ನು ಕಡಿಮೆ ಮಾಡಬೇಕು. ಹೇಗಾದರೂ ಅವನ ಬಿಲ್ವಿದ್ಯೆ ನಿಷ್ಪ್ರಯೋಜಕವಾಗುವಂತೆ ಮಾಡಬೇಕೆಂದುಕೊಂಡು, ಒಂದು ಉಪಾಯವನ್ನು ಯೋಚಿಸಿದರು. ತಮ್ಮ ಮನಸ್ಸಿನ ಆಲೋಚನೆಯ ಸುಳಿವು ಬಾರದಂತೆ ಎಚ್ಚರಿಕೆಯಿಂದ, "ಮಗು ಏಕಲವ್ಯ, ನಿನ್ನಂಥ ಶಿಷ್ಯನಿಗೆ ಗುರು ಎನಿಸಿಕೊಳ್ಳಲು ನನಗೆ ಹೆಮ್ಮೆ ಎನಿಸಿದೆ, ನಾನು ನಿನ್ನನ್ನು ಶಿಷ್ಯನೆಂದು ಸ್ವೀಕರಿಸಿದ್ದೇನೆ. ಅದಕ್ಕಾಗಿ ಸಂಪ್ರದಾಯದಂತೆ ನೀನು ನನಗೆ ಗುರು ದಕ್ಷಿಣೆಯನ್ನು ಕೊಡಬೇಕಾಗುವುದು" ಎಂದು ತಿಳಿಸಿದರು.

ತನ್ನನ್ನು ಶಿಷ್ಯನೆಂದು ಒಪ್ಪಿಕೊಂಡ ಸಂತೋಷದ ಭರದಲ್ಲಿ, ಹಿಂದು ಮುಂದು ಆಲೋಚಿಸದೆ ಮುಗ್ಧತೆಯಿಂದ, "ಗುರುಗಳೇ ಇಂದು ನನ್ನ ಜನ್ಮ ಸಾರ್ಥಕವಾಯಿತು. ಹೇಳಿ ಗುರುಗಳೇ, ನೀವೇನು ಕೇಳಿದರೂ ನಾನು ಕೊಡಲು ಸಿದ್ಧನಾಗಿದ್ದೇನೆ" ಎಂದು ಆವೇಶದಿಂದ ಹೇಳಿದ.

ದ್ರೋಣರಿಗೆ ಮನಸ್ಸಿನಲ್ಲೇ ಸಂಕೋಚವಾಯಿತು. ಏಕಲವ್ಯನ ಬಗ್ಗೆ ಪಾಪ! ಎನಿಸಿತು. ಮನಸ್ಸಿಲ್ಲದ ಮನಸ್ಸಿನಿಂದಲೇ, "ಏಕಲವ್ಯ ನಿಜವಾಗಿ ನೀನು ನನಗೆ ಗುರುದಕ್ಷಿಣೆ ಕೊಡುವುದಾದರೆ ನಿನ್ನ ಬಲಗೈ ಹೆಬ್ಬೆರಳನ್ನು ನೀಡು" ಎಂದು ಆದೇಶಿಸಿದರು.

ಏಕಲವ್ಯ ಕ್ಷಣಾರ್ಧದಲ್ಲಿ, ಒಂದಿಷ್ಟೂ ಹಿಂಜರಿಕೆಯಿಲ್ಲದೆ, ಮೊನಚಾದ ಬಾಣದಿಂದ ಕತ್ತರಿಸಿ ಹೆಬ್ಬೆರಳನ್ನು ಗುರುಗಳ ಪಾದಗಳ ಬಳಿ ಇರಿಸಿದ. ದ್ರೋಣಾಚಾರ್ಯರಿಗೆ ತಾನೆಂತಹ ಅಪರಾಧ ಮಾಡಿದೆನಲ್ಲಾ! ಎನಿಸಿ ಒಳಗೇ ದುಃಖಿಸಿದರು. ಆದರೆ ಅರ್ಜುನ, ಇಲ್ಲಿಯವರೆಗೆ ಅಸೂಯೆ, ಅಸಮಾಧಾನಗಳಿಂದ ಕುದಿಯುತ್ತಿದ್ದವನು, ಖುಷಿಪಟ್ಟ. ಅವನಿಗೆ ಏಕಲವ್ಯನ ಈ ಕೃತ್ಯದಿಂದ ನಿರಾಳವೆನಿಸಿತು.



## ವಿದ್ಯಾ ಪ್ರದರ್ಶನ – ಅಂಗರಾಜನಾದ ಕರ್ಣ

ಕೌರವ ಪಾಂಡವರ ಶಸ್ತ್ರಾಸ್ತ್ರ ವಿದ್ಯೆಯು ಪೂರ್ಣವಾಯಿತು. ಸಮರ ಕಲೆಯಲ್ಲಿ ಮತ್ತು ಅನ್ಯಜ್ಞಾನ ಶಾಖೆಗಳಲ್ಲಿ ನಿಷ್ಣಾತರಾದರು. ದ್ರೋಣಾಚಾರ್ಯರು ಭೀಷ್ಮರನ್ನು ಕಂಡು, ರಾಜಕುಮಾರರ ವಿದ್ಯಾಭ್ಯಾಸ, ಶಸ್ತ್ರಾಭ್ಯಾಸ ಪೂರ್ಣವಾದ ವಿಚಾರವನ್ನು ತಿಳಿಸಿದರು. ಹಾಗೆಯೇ ಅವರು ಕಲಿತ ವಿದ್ಯೆಗಳ ಪ್ರಾವೀಣ್ಯತೆಯ ಪ್ರದರ್ಶನವೊಂದನ್ನು ಏರ್ಪಡಿಸುವಂತೆ ಕೇಳಿಕೊಂಡರು.

ದ್ರೋಣಾಚಾರ್ಯರ ಮಾತು ಭೀಷ್ಮನಿಗೆ ಹಿಡಿಸಿತು. ಧೃತರಾಷ್ಟ್ರ, ವಿದುರ ಮೊದಲಾದವರೊಂದಿಗೆ ಚರ್ಚಿಸಿ ಕಡೆಗೆ, ವಿದ್ಯಾ ಪ್ರದರ್ಶನಕ್ಕೆಂದು ಒಂದು ದಿನ ಗೊತ್ತು ಮಾಡಿದರು.

ರಾಜರು, ಮನ್ನೆಯರು, ಸಾಮಂತರು, ಪ್ರಜಾ ಪ್ರತಿನಿಧಿಗಳು ಮಂತ್ರಿವರ್ಯರು, ರಾಜ ಕುಟುಂಬದವರು ಹೀಗೆ ಎಲ್ಲರನ್ನೂ ಪ್ರದರ್ಶನ ವೀಕ್ಷಿಸಲು ಆಹ್ವಾನಿಸಿದರು.

ಬಿಲ್ಲು, ಬಾಣ, ಕತ್ತಿ, ಗದೆ, ಈಟಿ ಮೊದಲಾದವುಗಳ ಪ್ರಯೋಗ ಪ್ರದರ್ಶನ ನಡೆಯಿತು. ನಂತರ ಮಲ್ಲಯುದ್ಧ, ಕುದುರೆ ಸವಾರಿ ಮುಂತಾದವುಗಳಲ್ಲಿಯೂ ರಾಜಕುಮಾರರು ತಮ್ಮ ಪ್ರತಿಭೆ ಕೌಶಲ್ಯಗಳನ್ನು ತೋರಿಸಿದರು. ಅಲ್ಲಿ ನೆರೆದಿದ್ದವರೆಲ್ಲ ಎಲ್ಲವನ್ನೂ ವೀಕ್ಷಿಸಿ ಅರ್ಜುನನನ್ನು ಮೆಚ್ಚಿಕೊಂಡು ಹೊಗಳಿದರು.

ಇನ್ನೇನು ಎಲ್ಲ ವಿದ್ಯೆಗಳ ಪ್ರದರ್ಶನ ಮುಗಿಯಿತು ಎಂದು ಕೊಳ್ಳುವಷ್ಟರಲ್ಲಿ , ನೆರೆದ ಮಂದಿಯ ಮಧ್ಯೆ ಸ್ವಲ್ಪ ಗಲಿಬಿಲಿ ಕಾಣಿಸಿತು. ಅದರ ಮಧ್ಯದಿಂದ ಒಬ್ಬ ಯುವಕ ಎದ್ದು ಬಂದ. ಅರ್ಜುನನನೊಡನೆ ಸ್ಪರ್ಧಿಸಲು ಅಪ್ಪಣೆ ಕೇಳಿದ. ದ್ರೋಣ ಮತ್ತು ಇತರರಿಗೆ ಅವನು

ಯಾರೆಂದು ತಿಳಿದಿದ್ದ ಕಾರಣ, "ಎಲೈ ಯುವಕನೇ ನೀನಾರೆಂದು ನಮಗೆ ತಿಳಿದಿದೆ. ಸೂತ ಪುತ್ರನಾದ ನಿನಗೆ ರಾಜವಂಶದವರೊಂದಿಗೆ ಸ್ಪರ್ಧಿಸಲು ಸಾಧ್ಯವಿಲ್ಲ. ಅರ್ಜುನನೊಡನೆ ಸ್ಪರ್ಧೆಯ ಮಾತನ್ನು ಮರೆತು ಬಿಡು" ಎಂದರು.

ಇದೆಲ್ಲವನ್ನು ಗಮನಿಸುತ್ತಿದ್ದ ದುರ್ಯೋಧನ ತಕ್ಷಣವೇ ಮಧ್ಯೆ ಪ್ರವೇಶಿಸಿ, "ರಾಜವಂಶವೇ ಸ್ಪರ್ಧೆಯ ಪ್ರವೇಶಕ್ಕೆ ಅರ್ಹತೆಯಾದರೆ, ಈಗಲೇ ಇಲ್ಲಿಯೆ ಈ ಕರ್ಣನನ್ನು ಅಂಗದೇಶಕ್ಕೆ ಅಧಿಪತಿಯನ್ನಾಗಿ ಮಾಡುತ್ತೇನೆ. ಇಂದಿನಿಂದ ಇವನು ಅಂಗರಾಜನೆಂದು ಗುರುತಿಸಿಕೊಳ್ಳುತ್ತಾನೆ" ಎಂದು ಘೋಷಿಸಿದನು. ಜನರಲ್ಲಿ ಗುಜು ಗುಜು ಪ್ರಾರಂಭವಾಯಿತು. ಕೆಲವರು ಒಪ್ಪಿದರು ಮತ್ತೆ ಕೆಲವರು ವಿರೋಧಿಸಿದರು.

ಅಷ್ಟರಲ್ಲಿ ಸಂಜೆಯಾಗುತ್ತ ಬಂದುದರಿಂದ ಸ್ಪರ್ಧೆಗಳು ಮತ್ತು ಪ್ರದರ್ಶನಕ್ಕೆ ತೆರೆ ಎಳೆದರು.

ದುರ್ಯೋಧನ ಅಸಮಾಧಾನದಿಂದ ಕರ್ಣನನ್ನು ಜೊತೆಗೆ ಕರೆದುಕೊಂಡು ಅರಮನೆಯ ಕಡೆಗೆ ನಡೆದ.



## ಸಾವಿನ ಗೂಡಾದ ಅರಗಿನ ಮನೆ (ಸಾವಿನ ಕೂಪದಲ್ಲಿ ಪಾಂಡವರು)

ಪಾಂಡವರು ಮತ್ತು ಕೌರವರು ಈಗ ಪ್ರಾಪ್ತ ವಯಸ್ಕರಾಗಿದ್ದರು. ರಾಜ್ಯಭಾರದ ಹೊಣೆಯನ್ನು ಹೊರಬಲ್ಲವರಾಗಿದ್ದರು. ಭೀಷ್ಮ, ದ್ರೋಣ, ವಿದುರ, ಧೃತರಾಷ್ಟ್ರ ಮೊದಲಾದವರು ಪರಸ್ಪರ ಚರ್ಚಿಸಿ, ಯುಧಿಷ್ಟಿರನನ್ನು ಯುವರಾಜನನ್ನಾಗಿ ಮಾಡಲು ಯೋಚಿಸಿದರು. ಈ ಸುದ್ದಿ ದುರ್ಯೋಧನನಿಗೆ ತಿಳಿದದ್ದೇ ಅವನ ದ್ವೇಷ, ಅಸೂಯೆಗಳು ಮುಗಿಲು ಮುಟ್ಟಿದವು. ತನ್ನ ತಂದೆಯ ನಂತರ ರಾಜ್ಯ ಖಂಡಿತವಾಗಿಯೂ ಯುಧಿಷ್ಠಿರನ ಕೈ ಸೇರುತ್ತದೆ. ತಾವೆಲ್ಲರೂ ಪಾಂಡವರ ಗುಲಾಮರಾಗಿ ಬಾಳಬೇಕಾಗಿ ಬರುತ್ತದೆ, ಎನ್ನುವ ವಿಚಾರದಿಂದ ಅಸ್ವಸ್ಥನಾದ. ಪಾಂಡವರು ಜೀವದಿಂದ ಇರಬಾರದೆಂದು ಯೋಚಿಸಿ ಸೋದರ ಮಾವ ಶಕುನಿಯೊಂದಿಗೆ ಮಾತಾಡಿದ. ಆ ಶಕುನಿಯೋ ದುರ್ಯೋಧನನಿಗಿಂತ ಹತ್ತು ಪಟ್ಟು ದುಷ್ಟನಾಗಿದ್ದ. ಉರಿವ ಬೆಂಕಿಗೆ ತುಪ್ಪ ಹಾಕಿದಂತೆ, ಅವನ ಅಸಮಾಧಾನವನ್ನು ತನ್ನ ಚಾಡಿ ಮಾತುಗಳಿಂದ ಮತ್ತಷ್ಟು ಹೆಚ್ಚಿಸಿದ. ಪಾಂಡವರ ಸಾವಿನ ತಂತ್ರಕ್ಕೆ ತನ್ನ ಆಲೋಚನೆಯನ್ನೂ ಸೇರಿಸಿದ. ಮಹತ್ವದ ಉಪಾಯವೊಂದನ್ನು ಸೂಚಿಸಿದ.

ದುರ್ಯೋಧನ ತಮ್ಮ ಕೆಲಸದಿಂದ ಅಸಂತೋಷಗೊಂಡಿದ್ದಾನೆಂಬ ವಿಷಯ ತಿಳಿದು ಧೃತರಾಷ್ಟ್ರ ಮಗನನ್ನು ಬಳಿಗೆ ಕರೆಸಿದ. ಅವನ ಅಸಮಾಧಾನಕ್ಕೆ ಕಾರಣವೇನೆಂದು ವಿಚಾರಿಸಿದ. ದುರ್ಯೋಧನ, ಮಾವನ ಧೂರ್ತ ಆಲೋಚನೆಯನ್ನೂ ಮನಸ್ಸಿನಲ್ಲಿರಿಸಿಕೊಂಡು, ಪ್ರತಿಭಟಿಸಿ ತನ್ನೆಲ್ಲ ಅಸಮಾಧಾನ, ಅಳಲುಗಳನ್ನು ತೋಡಿಕೊಂಡ, ಅಂಧನಾದ ಧೃತರಾಷ್ಟ್ರ, ಮಗನ ಮೇಲಿನ ಪ್ರೀತಿ, ವ್ಯಾಮೋಹಗಳಿಂದ ಮತ್ತಷ್ಟು ಅಂಧನಾಗಿ, ಮಗನ ಪಾಂಡವರ ಸಾವಿನ ಉಪಾಯವನ್ನು ಒಪ್ಪಿ, ಪ್ರೋತ್ಸಾಹಿಸಿದ.

ಧೃತರಾಷ್ಟ್ರ ಪಾಂಡವರನ್ನು ಕರೆಸಿದ. ಎಲ್ಲಿಲ್ಲದ ಪ್ರೀತಿಯನ್ನು ತೋರಿಸಿಕೊಂಡ. ಅವರ ಬಗ್ಗೆ, ಅವರ ಕ್ಷೇಮದ ಬಗ್ಗೆ ಅತಿಯಾದ ಕಾಳಜಿ ತೋರಿಸಿದ. ಯುಧಿಷ್ಠಿರನೊಂದಿಗೆ ಪ್ರೀತಿಯಿಂದ, "ಮಗು ಯುಧಿಷ್ಠಿರ, ನನ್ನ ಮಕ್ಕಳು ಬಹಳ ದುಷ್ಟರು. ನಿಮ್ಮನ್ನು ಕಂಡರೆ ಅವರಿಗೆ ಅಸೂಯೆ. ನಿಮ್ಮ ಕ್ಷೇಮದ ಬಗ್ಗೆ ನನಗೆ ಬಹಳ ಚಿಂತೆಯಾಗಿದೆ. ಆದ್ದರಿಂದ ನಾನೊಂದು ದಾರಿ ಯೋಚಿಸಿದ್ದೇನೆ. ನೀವು ಹಸ್ತಿನಾಪುರವನ್ನು ಬಿಟ್ಟು ಬೇರೆಲ್ಲಾದರೂ ನೆಲೆಸುವುದು ಒಳ್ಳೆಯದು. ಅದಕ್ಕಾಗಿ ನಾನು ನಿಮಗೆ ವಾರಣಾವತವನ್ನು ನೀಡುತ್ತೇನೆ. ಅದು ಬಹಳ ಸುಂದರವಾದ ಪ್ರದೇಶ. ಅಲ್ಲಿಗೆ ಹೋಗಿ ಇರುವುದರಿಂದ ನನ್ನ ಮಕ್ಕಳಿಂದ ನಿಮಗೆ ಯಾವುದೇ ಅಪಾಯ ಬರುವುದಿಲ್ಲವೆಂದು ಭಾವಿಸುತ್ತೇನೆ" ಎಂದು ಹೇಳಿದ. ಧೃತರಾಷ್ಟ್ರನ ಮಾತುಗಳನ್ನು ನಿಜವೆಂದೇ ನಂಬಿದ ಪಾಂಡವರು, ಯಾವುದೇ ಅನುಮಾನವಿಲ್ಲದೆ, ವಾರಣಾವತಕ್ಕೆ ಪ್ರಯಾಣ ಬೆಳೆಸಲು ಸಿದ್ಧತೆ ನಡೆಸಿದರು.

ದುರ್ಯೋಧನ ಅವರಿಗಾಗಿ ಸುಂದರವಾದ ಅರಮನೆಯನ್ನು ಕಟ್ಟಿಸಿದ. ಆದರೆ ಅದಕ್ಕೆ ಬಳಸಿದ್ದು ಬೇಗನೆ ಬೆಂಕಿ ಹತ್ತಿಕೊಳ್ಳುವ ಅರಗನ್ನು! ಪಾಂಡವರು ಅದರಲ್ಲಿದ್ದಾಗ ಉಪಾಯಾಂತರದಿಂದ ಬೆಂಕಿಹಚ್ಚಿ ಆಕಸ್ಮಿಕವೆನ್ನುವ ಹಾಗೆ ಮಾಡಿ ಪಾಂಡವರನ್ನು ಸಾಯಿಸುವ ಉದ್ದೇಶ ಅವನದಾಗಿತ್ತು. ಆದರೆ ಗೂಢಚಾರರಿಂದ ವಿದುರನಿಗೆ, ವಿಷಯ ತಿಳಿದು ಗುಟ್ಟಾಗಿ ಪಾಂಡವರಿಗೆ ಎಚ್ಚರಿಕೆಯಿಂದ ಇರಲು ಸೂಚನೆ ಕಳಿಸಿದ.

ದುರ್ಯೋಧನನ ಉಪಾಯ ಒಂದು ವೇಳೆ ಸಫಲವಾದರೆ, ಅಲ್ಲಿಂದ ತಪ್ಪಿಸಿಕೊಂಡು ಹೋಗಲು, ಒಂದು ಸುರಂಗವನ್ನು ರಹಸ್ಯವಾಗಿ ನಿರ್ಮಿಸಲಾಯಿತು. ಯಾರಿಗೂ ಅನುಮಾನವೇ ಬಾರದಷ್ಟು ಕುಶಲತೆಯಿಂದ ಇದನ್ನು ನಿರ್ಮಿಸಲಾಗಿತ್ತು. ಅಲ್ಲಿಂದ ಹೇಗಾದರೂ ಪಾರಾಗಿ ಎಲ್ಲಿಯಾದರೂ ತಲೆಮರೆಸಿಕೊಂಡು ಇರುವುದೆಂದು ನಿರ್ಧರಿಸಿದರು.

ದುರ್ಯೋಧನನ ತಂತ್ರದಂತೆ ಎಲ್ಲವನ್ನೂ ವ್ಯವಸ್ಥೆ ಮಾಡಲಾಯಿತು. ಸೇವಕನ ಹೆಸರಿನಲ್ಲಿ ದುರ್ಯೋಧನನ ಗುಪ್ತಚರರನ್ನು ಅಲ್ಲಿ ಇರಿಸಲಾಯಿತು. ಅವಕಾಶವನ್ನು ನೋಡಿಕೊಂಡು ಅರಮನೆಗೆ ಬೆಂಕಿ ಇಡುವ ಕೆಲಸಕ್ಕೆ ಅವನನ್ನು ನೇಮಿಸಲಾಗಿತ್ತು.

ಸಮಯವನ್ನು ನೋಡಿಕೊಂಡು, ಅವರು ನಿದ್ರಿಸುತ್ತಿದ್ದಾರೆಂದು ಭಾವಿಸಿ ಆ ಸೇವಕ ಅರಮನೆಗೆ ಬೆಂಕಿ ಇಟ್ಟ. ಪಾಂಡವರಿಗೆ ಮೊದಲೇ ಎಲ್ಲವು ತಿಳಿದಿದ್ದರಿಂದ ಬೆಂಕಿ ಬೀಳುವ ಮೊದಲೇ ಸುರಂಗ ಮಾರ್ಗದ ಮೂಲಕ ಹೊರಗೆ ಬಂದು ಅಪಾಯದಿಂದ ತಪ್ಪಿಸಿಕೊಂಡರು. ಭೀಮ ತಾಯಿ ಮತ್ತು ಸೋದರರನ್ನು ಹೊತ್ತು ಹೊರಗೆ ಬಂದು ಏಕಚಕ್ರ ನಗರದ ದಾರಿ ಹಿಡಿದರು.

ಎಲ್ಲಿ ಪಾಂಡವರ ಗುರುತು ಸಿಗುವುದೋ ಎಂದು ಹೆದರಿದ ಕುಂತಿ ಮಕ್ಕಳಿಗೆ ವೇಷಾಂತರದಲ್ಲಿ ಇರಲು ಸೂಚಿಸಿದಳು. ಅವರೆಲ್ಲರೂ ಬ್ರಾಹ್ಮಣ ವೇಷಧಾರಿಗಳಾದರು.

ಸಾಕಷ್ಟು ದೂರ ನಡೆದ ಮೇಲೆ ಏಕಚಕ್ರ ನಗರವನ್ನು ತಲುಪಿದರು. ಆದರೆ ತಲುಪುವುದಕ್ಕೆ ಮೊದಲು ಕಾಡಿನ ಹಾದಿಯಲ್ಲಿ ಅನೇಕ ಅಪಾಯಗಳನ್ನು ಎದುರಿಸಿದರು. ಹಿಡಿಂಬಾಸುರನನ್ನು ಎದುರಿಸಿದ ಭೀಮ ಅವನನ್ನು ಕೊಂದು ಹಾಕಿದ. ಸೋದರನನ್ನು ಕಳೆದುಕೊಂಡಿದ್ದ ಹಿಡಿಂಬೆ ಈಗ ಅನಾಥಳಾಗಿದ್ದಳು. ಅವಳು ಭೀಮನಲ್ಲಿ ಮೋಹಿತಳಾದಳು. ತನ್ನ ಆಸೆಯನ್ನು ಕುಂತಿ ಮತ್ತು ಯುಧಿಷ್ಠಿರನಲ್ಲಿ ತೋಡಿಕೊಂಡಳು. ಅವರೆಲ್ಲರೂ ಅವಳ ಆಸೆಯನ್ನು ಪೂರೈಸಲು ಭೀಮನನ್ನು ಒತ್ತಾಯಿಸಿದರು. ಭೀಮ ಒಂದು ಷರತ್ತನ್ನು ಮುಂದಿಟ್ಟು ಮದುವೆಯಾದ. ಒಂದು ಮಗುವಾಗುವವರೆಗೂ ಹಿಡಿಂಬೆಯ ಜೊತೆಯಲ್ಲಿದ್ದು, ನಂತರ ಅವಳನ್ನು ಬಿಟ್ಟು ಹೋಗಲು ಅನುಮತಿ ನೀಡಬೇಕೆಂದ. ಅವನ ಷರತ್ತಿಗೆ ಹಿಡಿಂಬೆ ಒಪ್ಪಿದಳು.



## ಬಕಾಸುರ ವಧೆ

ಬ್ರಾಹ್ಮಣವೇಷಧಾರಿಗಳಾಗಿ ಕಾಡಿನ ಮೂಲಕ ಹೊಕ್ಕು, ಹಿಡಿಂಬೆಯನ್ನು ಮದುವೆಯಾಗಿ, ಸ್ವಲ್ಪ ಕಾಲ ಅಲ್ಲಿದ್ದು, ಕಡೆಗೆ ಏಕಚಕ್ರ ನಗರವನ್ನು ತಲುಪಿ ಅಲ್ಲೊಂದು ಬ್ರಾಹ್ಮಣ ಕುಟುಂಬದ ಜೊತೆಯಲ್ಲಿ ವಾಸಿಸುತ್ತಿದ್ದರು.

ಪ್ರತಿದಿನ ಭಿಕ್ಷೆಗೆ ಹೋಗಿ, ಭಿಕ್ಷೆಯಲ್ಲಿ ಬಂದ ಆಹಾರವನ್ನು ಎಲ್ಲರೂ ಹಂಚಿಕೊಂಡು ತಿನ್ನುತ್ತಿದ್ದರು. ಬಂದದ್ದರಲ್ಲಿ ಅರ್ಧಭಾಗ ಭೀಮನಿಗೆ, ಉಳಿದರ್ಧದಲ್ಲಿ ಮಿಕ್ಕವರು ಸಮಾನವಾಗಿ ಹಂಚಿ ತಿನ್ನುತ್ತಿದ್ದರು. ಏಕಚಕ್ರ ನಗರದಲ್ಲಿ ಈ ಕುಟುಂಬದ ಬಗ್ಗೆ ಬಹಳ ಒಳ್ಳೆಯ ಅಭಿಪ್ರಾಯ ಬೆಳೆದಿತ್ತು. ಸಜ್ಜನರು, ಧರ್ಮನಿಷ್ಠರು ದಯಾವಂತರು ಎಂದು ಅವರನ್ನು ಭಾವಿಸಿ ಗೌರವಿಸುತ್ತಿದ್ದರು.

ಒಂದು ದಿನ ಕುಂತಿ, ತಾವಿದ್ದ ಕುಟುಂಬದ ಸದಸ್ಯರು ದುಃಖದಿಂದ ಅಳುತ್ತಿದ್ದುದನ್ನು ಕೇಳಿಸಿಕೊಂಡಳು. ಯಾಕೆಂಬುದು ಅವಳಿಗೆ ತಿಳಿದಿರಲಿಲ್ಲ. ಆದ್ದರಿಂದ ತಾನೇ ಅವರ ಬಳಿಗೆ ಹೋಗಿ ವಿಚಾರಿಸಲು ಯೋಚಿಸಿ, ಮನೆಯೊಳಕ್ಕೆ ಹೋದಳು. ಮನೆಯವರನ್ನು ಕಂಡು ಮಾತನಾಡಿಸಿ, ಅವರೇಕೆ ದುಃಖಿಸುತ್ತಿದ್ದಾರೆಂದು ಕೇಳಿದಳು. ಮನೆಯೊಡತಿಗೆ ಈ ಪ್ರಶ್ನೆಯಿಂದ ಮತ್ತಷ್ಟು ಅಳು ಬಂತು. “ಅಮ್ಮಾ ಇದೆಲ್ಲ ನಮ್ಮ ಕರ್ಮ, ಈ ಏಕಚಕ್ರ ನಗರಕ್ಕೆ ರಾಹು ಬಡಿದಿದೆ. ಬಕಾಸುರನೆಂಬ ರಾಕ್ಷಸ ಪದೇ ಪದೇ ಊರೊಳಕ್ಕೆ ಬಂದು ಜನರನ್ನು ಹಿಂಸಿಸಿ ಕೊಂದು ತಿನ್ನುತ್ತಿದ್ದುದನ್ನು ಮತ್ತು ಅದನ್ನು ತಡೆಯಲು ತಾವು ಒಂದು ಷರತ್ತಿಗೆ ಅವನನ್ನು ಒಪ್ಪಿಸಿದ್ದನ್ನು. ಅಂದಿನಿಂದ ಪ್ರತಿದಿನ ಒಬ್ಬೊಬ್ಬರ ಮನೆಯಿಂದ, ಬಕಾಸುರನಿಗೆ ಬೇಕಾಗುವಷ್ಟು ಬಂಡಿ ತುಂಬ ಆಹಾರವನ್ನು ಜೊತೆಗೆ ಒಬ್ಬ ಮನೆಯಾಳನ್ನು ಕಳಿಸುತ್ತಿದ್ದ ಪರಿಪಾಠವನ್ನು ವಿವರಿಸಿ ಹೇಳಿದಳು.

ಸರದಿಯ ಪ್ರಕಾರ ಇಂದು ತಮಗೆ ಕಳಿಸಬೇಕಾಗಿದೆ. ಬಕಾಸುರನ ಬಳಿಗೆ ಯಾರನ್ನು ಕಳಿಸುವುದು ಎಂಬ ವಿಷಯದಲ್ಲಿ ದುಃಖಿಸುತ್ತಿದ್ದೇವೆ" ಎಂದಳು.

ಕಥೆಯನ್ನೆಲ್ಲ ಕೇಳಿದ ಮೇಲೆ ಕುಂತಿ ಅವರನ್ನು ಸಮಾಧಾನ ಪಡಿಸುತ್ತ. "ಅಮ್ಮ ನೀವು ಈ ವಿಷಯದಲ್ಲಿ ಯಾವ ಚಿಂತೆಯನ್ನೂ ಇಟ್ಟುಕೊಳ್ಳಬೇಡಿ. ನಿಮ್ಮ ಮನೆಯಲ್ಲಿನ ಯಾವ ಸದಸ್ಯನೂ ಹೋಗಬೇಕಾದ ಅಗತ್ಯವಿಲ್ಲ. ನೀವು ಅಡಿಗೆ ಮಾಡಿಸಿ, ಬಂಡಿ ತುಂಬಿ, ಎಲ್ಲವನ್ನೂ ಸಿದ್ಧಮಾಡಿ. ನನಗಿರುವ ಐದು ಮಕ್ಕಳಲ್ಲಿ ಒಬ್ಬನಾದ ಭೀಮನನ್ನು ಕಳಿಸುತ್ತೇನೆ, ಅವನು ಮಹಾಬಲಶಾಲಿ. ಬಕಾಸುರನನ್ನು ಖಂಡಿತವಾಗಿಯೂ ಕೊಂದು ಬರುತ್ತಾನೆ." ಎಂದು ಹೇಳಿ ಭರವಸೆ ತುಂಬಿ ಹೊರಟಳು.

ಆ ಬ್ರಾಹ್ಮಣ ಕುಟುಂಬದವರಿಗೆ ಕುಂತಿಯ ಮಾತುಗಳಿಂದ ಧೈರ್ಯ ಬಂತು. ಸಂತೋಷವಾಯಿತು. ಮರುದಿನ ಅಡಿಗೆಯಲ್ಲವನ್ನೂ ಸಿದ್ಧಮಾಡಿ ದೊಡ್ಡ ದೊಡ್ಡ ಪಾತ್ರೆಗಳಲ್ಲಿ ತುಂಬಿ ಬಂಡಿಗೇರಿಸಿದರು. ಭೀಮ ಬಂಡಿಯೇರಿ ಕುಳಿತು, ಬಂಡಿಯನ್ನು ಬಕಾಸುರನಿದ್ದ ಕಾಡಿನ ಕಡೆಗೆ ಹೊಡೆದ. ದಾರಿಯಲ್ಲಿ ಅವನಿಗೆ ಬಂಡಿಯಲ್ಲಿದ್ದ ಬಗೆ ಬಗೆಯ ಪಂಚಭಕ್ಷ್ಯ ಪರಮಾನ್ನಗಳ ಪರಿಮಳ, ಬಾಯಿ ನೀರೂರುವಂತೆ ಮಾಡಿತ್ತು. ಬಹಳ ದಿನಗಳಿಂದ ರುಚಿಯಾದ ಊಟವೂ ಇರಲಿಲ್ಲ. ಆದ್ದರಿಂದ ಸ್ವಲ್ಪ ದೂರ ಹೋದ ಮೇಲೆ ಒಂದು ಕಡೆ ಬಂಡಿ ನಿಲ್ಲಿಸಿ, ಬಂಡಿಯಲ್ಲಿದ್ದ ಪಾತ್ರೆಗಳನ್ನು ಒಂದೊಂದಾಗಿ ತಿಂದು ತಿಂದು ಖಾಲಿ ಮಾಡಿದ. ಹೊಟ್ಟೆ ಭಾರವಾಯಿತು. ಹಾಗೆಯೇ ಒಂದು ನಿದ್ದೆ ತೆಗೆದ.

ಇತ್ತ ಕಾಡಿನಲ್ಲಿ ಬಕಾಸುರ ತನಗೆ ಬರಬೇಕಾಗಿದ್ದ ಊಟ ತಡವಾದರೂ ಇನ್ನೂ ಯಾಕೆ ಬರಲಿಲ್ಲವೆಂದು ಚಿಂತಿಸಿದ; ಚಡಪಡಿಸಿದ. ಹಸಿವಿನಿಂದ ಹುಚ್ಚನಾದ. ಕಾದು ಕಾದು ಸಾಕಾಗಿ ಸಿಟ್ಟಿನಿಂದ ಊರಿನ ಕಡೆಗೆ ಹೊರಟು ಬಂದ. ದಾರಿಯಲ್ಲಿ ಬಂಡಿ, ಖಾಲಿಯಾದ ಪಾತ್ರೆಗಳು ನಿದ್ರಿಸುತ್ತಿದ್ದ ಭೀಮ ಕಣ್ಣಿಗೆ ಬೀಳಲು ಅವನಿಗೆ ಕೋಪ ತಡೆಯಲಾಗಲಿಲ್ಲ. ಅಬ್ಬರಿಸುತ್ತ ನಿದ್ರಿಸುತ್ತಿದ್ದ ಭೀಮನ ಮೇಲೆ ಬಿದ್ದ. ಭೀಮ ಎಚ್ಚರಗೊಂಡು ಕಣ್ಣು



ಬಿಟ್ಟ. ಬಕಾಸುರ ಹೂಂಕರಿಸುತ್ತ "ಎಲವೋ ಯಾರೋ ನೀನು? ನನಗೆಂದು ಕಳಿಸಿರುವ ಇದನ್ನೆಲ್ಲ ತಿಂದು ಮುಗಿಸಲು ನಿನಗೆಷ್ಟು ಧೈರ್ಯ? ನಿನ್ನನ್ನು ಸುಮ್ಮನೆ ಬಿಡುವುದಿಲ್ಲ. ಮೊದಲುನಿನ್ನನ್ನು ತಿಂದು ಮುಗಿಸುತ್ತೇನೆ" ಎಂದು ಭೀಮನ ಮೇಲೆ ಬಿದ್ದ. ಭೀಮ ತಣ್ಣಗೆ ಎದ್ದು ಮೈ ಕೊಡವಿಕೊಂಡು ಬಕಾಸುರನ ಜೊತೆಗೆ ಯುದ್ಧಕ್ಕೆ ನಿಂತ. ಇಬ್ಬರ ನಡುವೆಯೂ ಭಯಂಕರ ಯುದ್ಧವಾಯಿತು. ಭೀಮ ಬಕಾಸುರನನ್ನು ಎತ್ತಿ ಒಗೆದು ಸಾಯಿಸಿದ. ತನ್ನ ಕೆಲಸಕ್ಕೆ ತಾನೇ ಹಿಗ್ಗಿ ಸಂಭ್ರಮದಿಂದ, ಉತ್ಸಾಹದಿಂದ, ಬಕಾಸುರನ ಕಳೇಬರವನ್ನೂ ಗಾಡಿಯಲ್ಲಿ ಇರಿಸಿಕೊಂಡು ಹಿಂತಿರುಗಿದ. ಊರಿನ ಜನಕ್ಕೆ ಭೀಮನು ಬಕಾಸುರನ ಮೇಲೆ ಸಾಧಿಸಿದ ವಿಜಯದ ಸುದ್ದಿ, ಬಕಾಸುರನ ಸಾವಿನ ಸುದ್ದಿ ತಲುಪಿದ್ದೇ ಓಡಿ ಬಂದು ಭೀಮನನ್ನು ಸುತ್ತುವರಿದು ಕೊಂಡಾಡಿದರು. ಇಂತಹ ಬಲಶಾಲಿ, ಪರಾಕ್ರಮಶಾಲಿ ಮಗನನ್ನು ಪಡೆದಿರುವ ಕುಂತಿಯ ಅದೃಷ್ಟವನ್ನು ಕೊಂಡಾಡಿದರು. ಅಂದಿನಿಂದ ಏಕಚಕ್ರ ನಗರದ ಜನ ನೆಮ್ಮದಿಯಿಂದ ಉಸಿರಾಡಿದರು.



# ದ್ರೌಪದಿ ಸ್ವಯಂವರ

ಪಾಂಡವರು ಇನ್ನೂ ಏಕಚಕ್ರದಲ್ಲಿಯೇ ಉಳಿದುಕೊಂಡಿದ್ದರು. ಆ ಸಮಯದಲ್ಲಿ ದ್ರೌಪದಿ ಸ್ವಯಂವರದ ಸಮಾಚಾರ ತಿಳಿದು ಬಂತು. ಅಷ್ಟರಲ್ಲಿ ಕೃಷ್ಣನೂ ಅವರನ್ನು ಸ್ವಯಂವರದಲ್ಲಿ ಭಾಗವಹಿಸಿ ದ್ರೌಪದಿಯನ್ನು ವಿವಾಹವಾಗಬೇಕೆಂದು ಸಂದೇಶ ಕಳಿಸಿದ. ಅವನಿಗೆ ಪಾಂಡವರ ಮೇಲೆ ಅತಿಯಾದ ಪ್ರೀತಿ. ಅವರಿಗೆ ಕಷ್ಟ ಬಂದಾಗಲೆಲ್ಲ ಸಹಾಯಕ್ಕೆಂದು, ಸಲಹೆಗೆಂದು ಧಾವಿಸುತ್ತಿದ್ದ.

ದ್ರೌಪದಿ ಒಂದು ರೀತಿಯಲ್ಲಿ ಕೃಷ್ಣನ ಸೋದರಿಯಾಗಿದ್ದಳು. ಅವಳು ಪಾಂಡವರನ್ನೇ ವರಿಸಬೇಕೆಂಬುದು ಅವನ ಆಸೆಯಾಗಿತ್ತು. ಅದರಲ್ಲಿಯೂ ಅರ್ಜುನನೇ ಅವಳ ಗಂಡನಾಗಬೇಕೆಂದು ಬಯಸಿದ. ಆದ್ದರಿಂದಲೇ ಪ್ರತ್ಯೇಕವಾಗಿ ಅರ್ಜುನನನ್ನು ಸ್ವಯಂವರದಲ್ಲಿ ಪಾಲ್ಗೊಳ್ಳುವಂತೆ ಹೇಳಿ ಕಳಿಸಿದ.

ಪಾಂಚಾಲದಲ್ಲಿ ಸ್ವಯಂವರದ ಏರ್ಪಾಟಾಗಿತ್ತು. ದ್ರೌಪದಿ ಅನುಪಮ ಸುಂದರಿ ಮತ್ತು ದಿಟ್ಟೆಯಾಗಿದ್ದಳು. ಸಾಮಾನ್ಯರಾದ ರಾಜಕುಮಾರರನ್ನು ಒಪ್ಪುವ ಸಾಧ್ಯತೆಯೇ ಇರಲಿಲ್ಲ. ಶಕ್ತಿ, ಸಾಮರ್ಥ್ಯಗಳಿರುವ ರಾಜಕುಮಾರನನ್ನು ವರಿಸಬೇಕೆಂದುಕೊಂಡು ಒಂದು ಷರತ್ತನ್ನು ಒಡ್ಡಿದ್ದಳು. ಅವಳನ್ನು ಮದುವೆಯಾಗಬೇಕೆಂದು ಬಯುಸುವವರು ಮೇಲೆ ತೂಗುಬಿಟ್ಟಿದ್ದ ಮೀನನ್ನು ಕೆಳಗೆ ಇರಿಸಿದ ನೀರಿನ ತಟ್ಟೆಯಲ್ಲಿ ಅದರ ಬಿಂಬವನ್ನು ನೋಡಿ ಗುರಿಯಿಟ್ಟು ಹೊಡೆಯಬೇಕಿತ್ತು. ಮೇಲಿನ ಮೀನನ್ನು ತಿರುಗು ತಟ್ಟೆಯಿಂದ ತೂಗು ಹಾಕಲಾಗಿತ್ತು. ಆದ್ದರಿಂದ ಗುರಿಯಿಟ್ಟು ಹೊಡೆಯುವುದು ಅಷ್ಟು ಸುಲಭವಾಗಿರಲಿಲ್ಲ.

ಅನೇಕ ಮಂದಿ ರಾಜಕುಮಾರರು ಆ ಷರತ್ತಿನಂತೆ ತಮ್ಮ ಕೌಶಲ್ಯ, ಸಾಮರ್ಥ್ಯಗಳನ್ನು ಪರೀಕ್ಷಿಸಿದರು. ಆದರೆ ಯಾರೊಬ್ಬರೂ ಅದನ್ನು ಗುರಿಯಿಟ್ಟು ಹೊಡೆಯುವಲ್ಲಿ ಗೆಲ್ಲಲು ಆಗಲಿಲ್ಲ. ಕರ್ಣ, ದುರ್ಯೋಧನರೂ ಆ ಸ್ಪರ್ಧೆಯಲ್ಲಿ ಭಾಗವಹಿಸಲು ಬಂದಿದ್ದರು. ಪಾಂಡವರು ಬ್ರಾಹ್ಮಣರು ಕುಳಿತಿದ್ದ ಜಾಗದಲ್ಲಿ ಇದ್ದರು. ನಡೆಯುತ್ತಿದ್ದ ವಿದ್ಯಮಾನಗಳನ್ನೆಲ್ಲ ಗಮನಿಸುತ್ತಿದ್ದರು.

ಎಲ್ಲ ರಾಜಕುಮಾರರಂತೆ ಕರ್ಣನೂ ತನ್ನ ಅದೃಷ್ಟ ಪರೀಕ್ಷೆಗೆಂದು ಎದ್ದು ನಿಂತ. ಕರ್ಣನು ಅದರಲ್ಲಿ ಭಾಗವಹಿಸುವುದು ಕೃಷ್ಣನಿಗೆ ಇಷ್ಟವಿರಲಿಲ್ಲ. ಆದ್ದರಿಂದ ಕೃಷ್ಣ ಗುಟ್ಟಾಗಿ ಅವನನ್ನು ತಡೆಯಲು ದ್ರೌಪದಿಗೆ ಸೂಚನೆ ಕಳಿಸಿದ. ಅದರಂತೆ ದ್ರೌಪದಿ ಕರ್ಣನು ಸೂತಪುತ್ರನಾದ ಕಾರಣ ಸ್ವಯಂವರದಲ್ಲಿ ಭಾಗವಹಿಸಬಾರದೆಂದು ಆದೇಶ ಕಳಿಸಿದಳು. ಇದರಿಂದ ಅವಮಾನಿತನಾದ ಕರ್ಣ ಹಿಂತಿರುಗಿ ಬಂದು ಕುಳಿತುಕೊಂಡ.



ಆದರೆ ದುರ್ಯೋಧನ ಮತ್ತೆ ಎದ್ದು ಕರ್ಣನ ಪರವಾಗಿ ವಾದಿಸಿದ. ಈಗ ಅವನು ಅಂಗರಾಜನಾಗಿರುವುದರಿಂದ ಅವನಿಗೆ ಅವಕಾಶ ಕೊಡಬೇಕೆಂದ. ಅವನು ದಯೆಯಿಂದ ಪಡೆದು ರಾಜನಾಗಿರುವನೇ ಹೊರತು ಗೆದ್ದು ಪಡೆದುದಲ್ಲ. ಅಥವಾ ವಂಶಪಾರಂಪರ್ಯವಾಗಿ ಬಂದುದಲ್ಲ. ಆದ್ದರಿಂದ ವಂಶದ ದೃಷ್ಟಿಯಿಂದಲೂ ಅವನಿಗೆ ಸ್ಪರ್ಧೆಯಲ್ಲಿ ಅವಕಾಶವಿಲ್ಲವೆಂದು ಬಾಯಿ ಮುಚ್ಚಿಸಿದಳು ದ್ರೌಪದಿ.

ಈ ಮಾತಿಗೆ ಕರ್ಣ, ದುರ್ಯೋಧನರಲ್ಲಿ ಉತ್ತರವಿರಲಿಲ್ಲ. ಸದ್ದಿಲ್ಲದೆ ಅಲ್ಲಿಂದ ಹೊರಟು ಹೋದರು.

ಯಾವ ರಾಜಕುಮಾರನೂ ಸ್ಪರ್ಧೆಯಲ್ಲಿ ಗೆಲ್ಲಲಿಲ್ಲವಾಗಿ, ಈಗ ಬ್ರಾಹ್ಮಣರಿಗೆ ಅವಕಾಶ ಕೊಟ್ಟರು. ಕೃಷ್ಣ ಅರ್ಜುನನಿಗೆ ಸನ್ನೆ ಮಾಡಿದ. ಅರ್ಜುನ ಅದನ್ನು ಅರ್ಥ ಮಾಡಿಕೊಂಡ. ಕುಳಿತಲ್ಲಿಂದ ಎದ್ದ. ಮನಸ್ಸಿನಲ್ಲಿಯೇ ಕೃಷ್ಣನಿಗೆ ತಲೆಬಾಗಿದ. ಸ್ಪರ್ಧೆಯ ಸ್ಥಳಕ್ಕೆ ಬಂದು, ಏಕಾಗ್ರತೆಯಿಂದ ಕೆಳಗೆ ನೀರಿನಲ್ಲಿ ಕಾಣುತ್ತಿದ್ದ ಬಿಂಬವನ್ನು ಗಮನಿಸಿದ. ಸರಿಯಾಗಿ ಗುರಿ ಇಟ್ಟು ಬಾಣ ಬಿಟ್ಟ. ನಿರೀಕ್ಷಿಸಿದಂತೆ ಅದು ಗುರಿ ಮುಟ್ಟಿತ್ತು. ಅವನು ಸ್ಪರ್ಧೆಯಲ್ಲಿ ಗೆದ್ದ. ಪ್ರಚಂಡ ಕರತಾಡನ ಕೇಳಿ ಬಂತು. ದ್ರೌಪದಿ ಸಂಭ್ರಮದಿಂದ ಅರ್ಜುನನೆಡೆಗೆ ನಡೆದು ಬಂದು ಹೂಮಾಲೆ ಹಾಕಿದಳು.

ಅರ್ಜುನ ತನ್ನ ಹೊಸ ಹೆಂಡತಿ ಮತ್ತು ಸೋದರರೊಡನೆ ಏಕಚಕ್ರ ನಗರಕ್ಕೆ ಹಿಂತಿರುಗಿದ. ತಮ್ಮ ಮನೆಯನ್ನು ತಲುಪಿದ ಕೂಡಲೇ ಹರ್ಷಾತಿರೇಕದಿಂದ, "ಅಮ್ಮ ಬಂದು ನೋಡು. ಇವತ್ತು ಒಂದು ವಿಶೇಷವಾದ್ದನ್ನು ತಂದಿದ್ದೇನೆ" ಎಂದರು. ಕುಂತಿ ಯಾವುದೋ ಕೆಲಸದಲ್ಲಿ ವ್ಯಗ್ರವಾಗಿದ್ದ ಕಾರಣ, ವಾಮೂಲಿನಂತೆ ಹಂಚಿಕೊಳ್ಳಿ ಎಂದು ಹೇಳಿಬಿಟ್ಟಳು. ಇವರಿಗೆ ದಿಗ್ಭ್ರಮೆಯಾಯಿತು; ಸಂದಿಗ್ಧವೂ ಆಯಿತು. ಹಂಚಿಕೊಳ್ಳಲು ತಂದಿರುವುದು ಹಣ್ಣಲ್ಲ; ಆಹಾರವಲ್ಲ, ಹೆಣ್ಣು!!! ಯೋಚಿಸುತ್ತ ನಿಂತುಬಿಟ್ಟರು. ಕೆಲಸ ಮುಗಿಸಿ ಹೊರಗೆ ಬಂದ ಕುಂತಿಗೆ ವಿಷಯವೇನೆಂದು ಅರ್ಥವಾಗಿ ಪೇಚಾಡಿದಳು. ತನ್ನನ್ನು ಬೈದುಕೊಂಡಳು. ಇದಕ್ಕೆ ಪರಿಹಾರ ಹೇಗೆ ಎಂದು ಅವಳಿಗೂ ಸಮಸ್ಯೆಯಾಯಿತು.

ಆಗಬಾರದ್ದು ಆಗಿ ಹೋಗಿದೆ ನಿಜ. ಆದರೆ ಸೋದರರು ಒಬ್ಬನ ಹೆಂಡತಿಯನ್ನು ಹಂಚಿಕೊಳ್ಳುವುದೇ?! ಆದರೆ ಇವರ ಸಮಸ್ಯೆಯನ್ನು ಗಮನಿಸಿದ ದ್ರೌಪದಿ, ಕುಂತಿಗೆ ಇದರ ಬಗ್ಗೆ ಇಷ್ಟೊಂದು ಚಿಂತೆ ಬೇಡ, ಇದೆಲ್ಲ ತನ್ನ ಹಣೆಬರಹವೆಂದು ಅಲ್ಲದೆ ಐದು ಜನ ಗಂಡಂದಿರನ್ನು ಪಡೆಯುವಂತೆ ಶಿವನು ವರವನ್ನೂ ಕೊಟ್ಟಿರುವನೆಂದು ಸಮಾಧಾನ ಹೇಳಿದಳು. ಕೃಷ್ಣನೂ ಸಮಯಕ್ಕೆ ಸರಿಯಾಗಿ ಬಂದು, ಒಬ್ಬಳನ್ನು ಐದು ಜನ ಹಂಚಿಕೊಳ್ಳುವುದರಲ್ಲಿ ಅಪರಾಧವಿಲ್ಲವೆಂದು ಸಮಾಧಾನಪಡಿಸಿದ. ಈಗ ಎಲ್ಲ ಅನುಮಾನಗಳನ್ನು ಬದಿಗಿಟ್ಟು ಪಾಂಡವರು ದ್ರೌಪದಿಯನ್ನು ವಿವಾಹವಾದರು.



# ಪಾಂಡವರಿಗೆ ರಾಜ್ಯ ಲಾಭ

ಪಾಂಡವರು ಜೀವದಿಂದ ಉಳಿದಿದ್ದಾರೆಂಬ ಸುದ್ದಿ ಮತ್ತು ಮದುವೆಯಾದ ವಿಷಯ ಧೃತರಾಷ್ಟ್ರ, ದುರ್ಯೋಧನ, ಭೀಷ್ಮ, ವಿದುರಾದಿಗಳಿಗೆ ತಿಳಿಯಿತು. ದುರ್ಯೋಧನನ ಹೊರತು ಮಿಕ್ಕವರಿಗೆಲ್ಲ ಸಂತೋಷವಾಯಿತು. ಧೃತರಾಷ್ಟ್ರನು ಸಂತೋಷ ವ್ಯಕ್ತಪಡಿಸಿದರೂ ಅದು ಮನಸ್ಸಿನಿಂದ ಬಂದುದಲ್ಲವಾಗಿತ್ತು. ತನ್ನ ಅಂತರಂಗವನ್ನು ಯಾರ ಮುಂದೂ ತೆರೆದಿಡಲಿಲ್ಲ. ತನ್ನ ಮಗನ ಮಾತುಗಳಿಗೇ ಬಲಿಯಾಗುತ್ತಿದ್ದ. ಆದರೂ ಹೊರಗೆ ಮಾತ್ರ ಪಾಂಡವರ ಬಗ್ಗೆ ಅತಿಯಾದ ಪ್ರೀತಿ ಇರುವಂತೆ ನಟಿಸುತ್ತಿದ್ದ; ಅವರ ಕ್ಷೇಮದ ಬಗ್ಗೆ ಕಾತರನಾದಂತೆ ತೋರಿಸಿಕೊಳ್ಳುತ್ತಿದ್ದ. ಒಂದು ದಿನ ವಿದುರನಿಗೆ, "ವಿದುರ ಪಾಂಡವರು ಬದುಕಿದ್ದಾರೆಂಬ ಸುದ್ದಿಯಿಂದ ನನಗೆ ತುಂಬಾ ಸಂತೋಷವಾಗಿದೆ. ನನ್ನ ಮಕ್ಕಳು ದುಷ್ಟರು. ಯಾವ ಕ್ಷಣದಲ್ಲಿ ಪಾಂಡವರಿಗೆ ಏನು ಅಪಾಯ ತಂದಿಡುತ್ತಾರೋ ಎಂಬ ಹೆದರಿಕೆಯಾಗಿದೆ. ಪಾಂಡವರಿಗೆ ಏನು ಅಪಾಯ ತಂದಿಡುತ್ತಾರೋ ಎಂಬ ಹೆದರಿಕೆಯಾಗಿದೆ. ಪಾಂಡವರ ಕ್ಷೇಮದ ಬಗ್ಗೆ ನನಗೆ ತುಂಬಾ ಚಿಂತೆಯಾಗಿದೆ. ಆದ್ದರಿಂದ ಅವರ ನಡುವೆ ಮನಸ್ತಾಪವನ್ನು ತಪ್ಪಿಸಲು ರಾಜ್ಯವನ್ನು ಪಾಂಡವರಿಗೆ ಮತ್ತು ನನ್ನ ಮಕ್ಕಳಿಗೆ ಹಂಚಿಕೊಡೋಣವೆಂದು ಕೊಂಡಿದ್ದೇನೆ." ಎಂದು ಬಹಳ ಕಳಕಳಿ ಉಳ್ಳವನಂತೆ ಹೇಳಿದ. ವಿದುರನಿಗೂ ಧೃತರಾಷ್ಟ್ರನ ಆಲೋಚನೆ ಸರಿಯೆನಿಸಿತು.

ಆದರೆ ದುರ್ಯೋಧನನಿಗೆ ಇದು ಒಪ್ಪಿಗೆಯಾಗಲಿಲ್ಲ. ಪಾಂಡವರನ್ನು ಪೂರ್ತಿಯಾಗಿ ಹೊಸಕಿ ಹಾಕಿಬಿಡಬೇಕೆಂದು ಆಲೋಚಿಸುತ್ತಿರುವಾಗ, ತಂದೆಯ ನಿರ್ಧಾರದಿಂದ ಮತ್ತಷ್ಟು ಉರಿದೆದ್ದ. ಬುಸುಗುಡುತ್ತ ತಂದೆಯ ಬಳಿಗೆ ನಡೆದ. ಕೂಗಾಡುತ್ತ, "ತಂದೆಯೇ ಏನು ನೀನು ಮಾಡುತ್ತಿರುವ

ಕೆಲಸ! ಅವರು ಬದುಕಿರುವುದು ನಿನಗೆ ಸಂಭ್ರಮವೇ? ಅವರನ್ನು ಕರೆಸಿ, ಅವರಿಗೆ ರಾಜ್ಯ ಕೊಟ್ಟು ಸಮಾರಂಭ ಮಾಡಬೇಕೆಂದು ಇದ್ದೀಯೇನು?" ಎಂದು ತರಾಟೆಗೆ ತೆಗೆದುಕೊಂಡ.

ತನ್ನ ನಿರ್ಧಾರದಿಂದ ಮಗನ ಮನಸ್ಸಿಗೆ ಎಷ್ಟು ನೋವಾಗಿರಬಹುದೆಂದು ಊಹಿಸಿದ್ದ. ಅವನನ್ನು ಬಳಿಗೆ ಕರೆದು ಸಮಾಧಾನದಿಂದ, "ಮಗು ದುರ್ಯೋಧನ, ಸ್ವಲ್ಪ ಸುಮ್ಮನಿರು, ನಾನು ಇದನ್ನೆಲ್ಲ ಮನಸ್ಸಿನಿಂದ ಮಾಡುತ್ತಿದ್ದೀನೆಂದು ತಿಳಿದಿದ್ದೀಯೇನು? ನಾನು ಅವರಿಗೆ ಅನ್ಯಾಯ ಮಾಡುತ್ತಿದ್ದೇನೆಂದು ಜಗತ್ತು ತಿಳಿಯಬಾರದು. ಅದಕ್ಕಾಗಿ ಪ್ರಸ್ತುತಕ್ಕೆ ಅವರಿಗೆ ಪಾಳುಬಿದ್ದ ರಾಜ್ಯದ ಭಾಗವನ್ನು ಖಾಂಡವಪ್ರಸ್ಥವನ್ನು ಕೊಡೋಣ. ಅವರೆಲ್ಲ ಸಮರ್ಥರು. ಅದನ್ನು ಚೆನ್ನಾಗಿ ವೃದ್ಧಿ, ಅಭಿವೃದ್ಧಿ ಮಾಡುತ್ತಾರೆ. ಅಷ್ಟರಲ್ಲಿ ನಾವು ಅದನ್ನು ಕಸಿದುಕೊಳ್ಳಲು ಬೇರೆ ರೀತಿಯಲ್ಲಿ ಯೋಚಿಸೋಣ" ಎಂದು ಆಂತರ್ಯವನ್ನು ಬಿಡಿಸಿ ಹೇಳಿದ.

ದುರ್ಯೋಧನನಿಗೆ ಈಗ ಸಮಾಧಾನವಾಯಿತು. ಎಲ್ಲರ ಅಭಿಪ್ರಾಯದಂತೆ ವಿದುರನನ್ನು ಪಾಂಡವರನ್ನು ಒಪ್ಪಿಸಿ ಕರೆತರಲು ಕಳಿಸಿದರು. ಪಾಂಚಾಲಕ್ಕೆ ಬಂದು ಪಾಂಡವರೊಡನೆ ಮಾತಾಡಿ, ಅವರನ್ನು ಸತೀ ಸಮೇತನಾಗಿ ಹಸ್ತಿನಾಪುರಕ್ಕೆ ಕರೆತಂದ. ಅಲ್ಲಿಯವರೆಗೆ ಕೌರವರ ಮೇಲೆ ಇರಿಸಿಕೊಂಡಿದ್ದ ಕೋಪ, ಅಸಮಾಧಾನಗಳನ್ನು ಬಿಟ್ಟು, ಈಗ ಧೃತರಾಷ್ಟ್ರ ತಮ್ಮ ಮೇಲೆ ತೋರಿದ ಪ್ರೀತಿಗಾಗಿ ಸಂತಸ ತಂದುಕೊಂಡರು.

ಯಾವುದೇ ಕಹಿಭಾವನೆಗಳನ್ನು ಇರಿಸಿಕೊಳ್ಳದೆ ಹಸ್ತಿನಾಪುರವನ್ನು ಪ್ರವೇಶಿಸಿದರು. ದೊಡ್ಡಪ್ಪನಾದ ಧೃತರಾಷ್ಟ್ರನನ್ನು ಕಂಡು ಆಶೀರ್ವಾದ ಪಡೆಯಲೆಂದು ಅವನ ಬಳಿಗೆ ಹೋದರು. ಧೃತರಾಷ್ಟ್ರ ಅವರು ಕ್ಷೇಮದಿಂದ ಇರುವುದಕ್ಕೆ ಸಂತೋಷ ವ್ಯಕ್ತಪಡಿಸಿದ. ಅವರನ್ನು ಆಶೀರ್ವದಿಸಿದ. ಮತ್ತೆ ಯುಧಿಷ್ಠಿರನಿಗೆ "ಮಗು, ನೀವು ಕಾಣದೆ ಹೋದಾಗ, ಬೆಂಕಿಯ ಆಕಸ್ಮಿಕದಲ್ಲಿ ನೀವು ಸಾವನ್ನು ಅಪ್ಪಿದ್ದೀರಿ ಎಂದು ಸುದ್ದಿ ಹಬ್ಬಿದಾಗ ನಾನೆಷ್ಟು ವ್ಯಥೆ ಪಟ್ಟೆ ತಿಳಿದಿರುವೆಯೇನು? ಸಧ್ಯ, ನೀವೀಗ ಬದುಕಿ, ಸುರಕ್ಷಿತವಾಗಿದ್ದು, ವಿವಾಹವನ್ನೂ ಮಾಡಿಕೊಂಡಿರುವಿರಿ

ಎಂದು ತಿಳಿದು ನನಗೆ ಸಂತೋಷವಾಗಿದೆ. ಮಗು, ನಾನು ನಿಮಗೆ ಒಂದರ್ಧ ರಾಜ್ಯವನ್ನು ಕೊಡುತ್ತೇನೆ. ಖಾಂಡವಪ್ರಸ್ತ ಅಷ್ಟೊಂದು ಜನ ಸಂಖ್ಯೆಯಿಲ್ಲದ ಪ್ರದೇಶವಾಗಿದೆ. ಅದನ್ನು ರಾಜಧಾನಿಯಾಗಿ ಮಾಡಿಕೊಂಡು, ಚೆನ್ನಾಗಿ ಅಭಿವೃದ್ಧಿ ಪಡಿಸಿಕೊಳ್ಳಿ. ನನ್ನ ಮಕ್ಕಳು ದುಷ್ಟರು. ನಿತ್ಯವೂ ನಿಮ್ಮ ನಡುವೆ ಜಗಳವಾಗುವುದು ಬೇಡ. ನಿಮ್ಮ ತಂದೆ ಪಾಂಡು ನನ್ನ ಬಗ್ಗೆ ತುಂಬ ಗೌರವಿರಿಸಿಕೊಂಡಿದ್ದ. ನನ್ನ ಯಾವುದೇ ಮಾತನ್ನು ಮೀರುತ್ತಿರಲಿಲ್ಲ. ಬಹುಶಃ ನೀವೂ ಹಾಗೇ ಇರುವಿರೆಂದು ಭಾವಿಸುತ್ತೇನೆ. ಈಗ ಹೋಗಿ ಬನ್ನಿ. ದೇವರು ನಿಮಗೆ ಒಳ್ಳೆಯದು ಮಾಡಲಿ. ನಿಮ್ಮ ಪಾಲಿನ ರಾಜ್ಯವನ್ನು ಚೆನ್ನಾಗಿ ಅಭಿವೃದ್ಧಿ ಮಾಡಿ, ಪ್ರಖ್ಯಾತವಾಗುವಂತೆ ನೋಡಿಕೊಳ್ಳಿ."

ಯುಧಿಷ್ಠರ ತಮ್ಮಂದಿರೊಂದಿಗೆ ದೊಡ್ಡಪ್ಪ ಕೊಟ್ಟಿದ್ದನ್ನು ಒಂದಿಷ್ಟೂ ಅಸಮಾಧಾನವಿಲ್ಲದೆ ಸ್ವೀಕರಿಸಿದ.

ಪಾಂಡವ ಸೋದರರು ಕಷ್ಟಪಟ್ಟು ಖಾಂಡವಪ್ರಸ್ಥವನ್ನು ಚೆನ್ನಾಗಿ ಅಭಿವೃದ್ಧಿ ಪಡಿಸಿದರು. ಇಂದ್ರಪ್ರಸ್ಥವೆಂದು ಹೊಸದಾಗಿ ನಾಮಕರಣ ಮಾಡಿದರು.



## ಅರ್ಜುನ - ಸುಭದ್ರೆಯರ ವಿವಾಹ

ಇಂದ್ರಪ್ರಸ್ಥವನ್ನು ರಾಜಧಾನಿಯಾಗಿ ಮಾಡಿಕೊಂಡು ತಮ್ಮ ಪಾಲಿನ ರಾಜ್ಯವನ್ನು ಚೆನ್ನಾಗಿ ಆಳಿದರು. ಅತ್ಯಂತ ಶ್ರೀಮಂತ ರಾಜ್ಯವನ್ನಾಗಿ ರೂಪಾಂತರಿಸಿದರು. ಹೆಸರು, ಖ್ಯಾತಿಗಳನ್ನು ಅಲ್ಪ ಕಾಲದಲ್ಲಿಯೇ ಗಳಿಸಿಕೊಂಡರು. ಬೇರೆ ಬೇರೆ ದೇಶಗಳ ರಾಜರುಗಳು ಅಸೂಯೆ ಪಟ್ಟರೂ ಸಹ ಮೆಚ್ಚಿಕೊಳ್ಳುತ್ತಿದ್ದರು.

ಹೀಗೇ ಒಂದಷ್ಟು ವರ್ಷಗಳು ಕಳೆದ ಮೇಲೆ ಒಂದು ದಿನ ನಾರದರು ಅಲ್ಲಿಗೆ ಬಂದರು. ಪಾಂಡವರ ಏಳಿಗೆಯನ್ನು ಕಂಡು ಸಂತೋಷಪ್ಟರು. ಮನದುಂಬಿ ಆಶೀರ್ವದಿಸಿದರು. ಹಾಗೆಯೇ ದ್ರೌಪದಿಯ ಪೂರ್ವ ವೃತ್ತಾಂತವನ್ನು ವಿವರಿಸಿ, ಆದ್ದರಿಂದಲೇ ಐದೂ ಜನರನ್ನು ವಿವಾಹವಾಗಬೇಕಾಯಿತೆಂಬುದನ್ನೂ ತಿಳಿಸಿದರು. ಹಾಗೆಯೇ ಅವರಿಗೆ ಒಂದಷ್ಟು ಬುದ್ಧಿವಾದವನ್ನೂ ಹೇಳಿದರು. ಅದರಂತೆ ನಡೆದರೆ ಸೋದರರ ನಡುವೆ ಯಾವುದೇ ಭಿನ್ನಾಭಿಪ್ರಯ ಬರುವುದಿಲ್ಲವೆಂದರು. ದ್ರೌಪದಿಯ ವಿಷಯಕ್ಕೆ ಸಂಬಂಧಿಸಿದಂತೆ ಒಂದು ಒಪ್ಪಂದವನ್ನು ಮಾಡಿಕೊಳ್ಳಬೇಕು. ಒಂದೊಂದು ವರ್ಷ ಒಬ್ಬೊಬ್ಬರ ಜೊತೆಯಲ್ಲಿ ಕಳೆಯಬೇಕು. ಯಾರಾದರೂ ಪ್ರವೇಶಿಸಿ, ಏಕಾಂತಕ್ಕೆ ಭಂಗ ಬಂದರೆ, ಒಂದು ವರ್ಷ ಪ್ರಾಯಶ್ಚಿತ್ತದಂತೆ ತೀರ್ಥಯಾತ್ರೆ ಮಾಡಿ ಬರಬೇಕು. ಇದು ಷರತ್ತು. ಇದಕ್ಕೆ ಎಲ್ಲ ಸೋದರರೂ ಒಪ್ಪಿದರು. ಅಂತೆಯೇ ನಡೆದುಕೊಂಡರು.

ಒಮ್ಮೆ ಯುಧಿಷ್ಠಿರ ಮತ್ತು ದ್ರೌಪದಿ ಏಕಾಂತದಲ್ಲಿ ಕುಳಿತಿದ್ದರು. ಅದೇ ಸಮಯಕ್ಕೆ ತುರ್ತಾಗಿ ಅರ್ಜುನನಿಗೆ ಆಯುಧಗಳು ಬೇಕಾಗಿದ್ದವು. ಅವು ಯುಧಿಷ್ಠಿರನ ಕೋಣೆಯಲ್ಲಿದ್ದವು. ಕಳ್ಳರು ಯಾರೋ ಗೋವುಗಳನ್ನು ಕದ್ದೊಯ್ದಿದ್ದರು. ಅವುಗಳನ್ನು ಅವರಿಂದ ಬಿಡಿಸಿ ಯಜಮಾನನಿಗೆ

ಒಪ್ಪಿಸಬೇಕಿತ್ತು. ಆರ್ತರಾದವರಿಗೆ, ಸಹಾಯಬೇಡಿ ಬಂದವರಿಗೆ ಅವರು ಬೇಡಿದ್ದನ್ನು ಮಾಡುವುದು ಪಾಂಡವರ ಧರ್ಮವಾಗಿತ್ತು. ಆದ್ದರಿಂದ ಷರತ್ತು ತಿಳಿದಿದ್ದರೂ ಅರ್ಜುನ ಒಳಗೆ ಪ್ರವೇಶಿಸಿ ಬಿಲ್ಲು ಬಾಣಗಳನ್ನು ತೆಗೆದುಕೊಂಡು ಹೊರಟ.

ಗೋವುಗಳನ್ನು ರಕ್ಷಿಸಿ ಮರಳಿ ಬಂದ ನಂತರ ಅಣ್ಣ ಯುಧಿಷ್ಠಿರನ ಅನುಮತಿ ಪಡೆದು ಷರತ್ತಿನಂತೆ ತೀರ್ಥಯಾತ್ರೆಗೆ ಹೊರಟ. ತೀರ್ಥಯಾತ್ರೆಗೆ ಹೋದವನು ಪುಣ್ಯಸ್ಥಳಗಳಲ್ಲಿ ಸ್ನಾನ ಮಾಡಿದ. ಗಂಗಾನದಿಯಲ್ಲಿ ಸ್ನಾನ ಮಾಡಿ ತನ್ನ ಪಿತೃಗಳಿಗೆ ತರ್ಪಣ ಕೊಟ್ಟ. ಅದೇ ಸಮಯದಲ್ಲಿ ನಾಗರಾಜನ ಮಗಳಾದ ಉಲೂಪಿ ಅರ್ಜುನನನ್ನು ನೋಡಿ ಮೋಹಿತಳಾದಳು. ಅವನನ್ನು ತಂದೆಯ ಬಳಿಗೆ ಕರೆದೊಯ್ದಳು. ವಿಷಯವೆಲ್ಲ ತಿಳಿದ ನಾಗರಾಜ ಸಂತೋಷದಿಂದ ಅವರಿಬ್ಬರಿಗೂ ಮದುವೆ ಮಾಡಿದ. ಅರ್ಜುನ ಅಲ್ಲಿ ಕೆಲಕಾಲವಿದ್ದು ನಂತರ ನಾಗರಾಜ ಇರಾವತನ ಮತ್ತು ಊಲೂಪಿಯ ಅಪ್ಪಣೆ ಪಡೆದು ಅಲ್ಲಿಂದ ಹೊರಟ.

ಅನೇಕ ಪುಣ್ಯಕ್ಷೇತ್ರಗಳನ್ನು ಸುತ್ತಿ ಕಡೆಗೆ, ಚಿತ್ರಾಂಗದನೆಂಬ ರಾಜನು ಆಳುತ್ತಿದ್ದ ಮಣಿಪುರಕ್ಕೆ ಬಂದ. ಅವನಿಗೆ ಚಿತ್ರಾಂಗದೆ ಎಂಬ ಮಗಳಿದ್ದಳು. ಅರ್ಜುನ ಅವಳ ಸೌಂದರ್ಯಕ್ಕೆ ಸೋತು ಹೋದ. ಅವಳನ್ನು ಮದುವೆಯಾಗಬೇಕೆನಿಸಿತು. ರಾಜನನ್ನು ಕಂಡು ತನ್ನ ಆಸೆಯನ್ನು ತಿಳಿಸಿದ. ಚಿತ್ರಾಂಗದ ಅರ್ಜುನನನ ಬಗ್ಗೆ ಎಲ್ಲ ತಿಳಿದ ಮೇಲೆ ಒಂದು ಷರತ್ತು ಮುಂದಿಟ್ಟು ಒಪ್ಪಿದ. ಮಗಳಿಗೆ ಹುಟ್ಟಿದ ಮಗುವನ್ನು ತನ್ನ ಬಳಿಗೇ ಬಿಟ್ಟು ಹೋಗಬೇಕೆಂಬುದು ಅವನ ಷರತ್ತಾಗಿತ್ತು. ಅರ್ಜುನನು ಆ ಷರತ್ತಿಗೆ ಒಪ್ಪಿ ಚಿತ್ರಾಂಗದೆಯನ್ನು ಮದುವೆಯಾದ.

ಕೆಲಕಾಲದ ನಂತರ ಅರ್ಜುನ ಚಿತ್ರಾಂಗದೆಯರಿಗೆ ಒಬ್ಬ ಮಗ ಜನಿಸಿದ. ಮಗುವನ್ನು ಮತ್ತು ಚಿತ್ರಾಂಗದೆಯನ್ನು ಅಲ್ಲಿಯೇ ಬಿಟ್ಟು, ನಂತರ ಬಂದು ಚಿತ್ರಾಂಗದೆಯನ್ನು ಕರೆದೊಯ್ಯುವುದಾಗಿ ಹೇಳಿ ಅಲ್ಲಿಂದ ಹೊರಟ.

ಮಣಿಪುರದಿಂದ ಹೊರಟು, ಕೃಷ್ಣನ ದ್ವಾರಕೆಗೆ ಬಂದು ಕೃಷ್ಣನನ್ನು ಮಾತಾಡಿಸಿದ. ಕೃಷ್ಣನಿಗೆ ಅರ್ಜುನ ಹೀಗೆ ಅಕಸ್ಮಾತ್ ಬಂದದ್ದು ಆಶ್ಚರ್ಯವಾದರೂ ಬಂದಿದ್ದಕ್ಕೆ ಸಂತೋಷಿಸಿದ. ಪ್ರೀತಿಯಿಂದ ಬರಮಾಡಿಕೊಂಡು ಸತ್ಕರಿಸಿದ. ಅರ್ಜುನ ತನ್ನ ತೀರ್ಥಯಾತ್ರೆಯ ಹಿಂದಿನ ಕಥೆಯನ್ನು ವಿವರಿಸಿದ. ಕೃಷ್ಣನಿಗೆ, ತನ್ನ ತಂಗಿ ಸುಭದ್ರೆಯನ್ನು ಅರ್ಜುನನನಿಗೆ ಪರಿಚಯ ಮಾಡಿಸಿದ. ಇಬ್ಬರೂ ಪರಸ್ಪರ ಪ್ರೀತಿಸಿದರು. ಮದುವೆಯಾಗಲು ಬಯಸಿದರು. ಆದರೆ ಕೃಷ್ಣನ ಅಣ್ಣ ಬಲರಾಮನಿಗೆ ಇದು ಒಪ್ಪಿಗೆಯಾಗಲಿಲ್ಲ. ಅವನಿಗೆ ಸುಭದ್ರೆಯನ್ನು ದುರ್ಯೋಧನನಿಗೆ ಕೊಡಬೇಕೆಂಬಾಸೆ. ಕೃಷ್ಣ ಮಾತ್ರ ಹೇಗಾದರೂ ಈ ಸಂಬಂಧವನ್ನು ತಪ್ಪಿಸಬೇಕೆಂದುಕೊಂಡ. ಅದಕ್ಕಾಗಿ ಅವನು ಅರ್ಜುನ ಸುಭದ್ರೆಯನ್ನು ಗುಟ್ಟಾಗಿ ತಪ್ಪಿಸಿಕೊಂಡು ಓಡಿಹೋಗಲು ಉಪಾಯ ಸೂಚಿಸಿದ. ಅರ್ಜುನ – ಸುಭದ್ರೆ ಕೃಷ್ಣನು ಹೇಳಿದಂತೆಯೇ ಮಾಡಿದರು. ನಂತರ ಅವರಿಬ್ಬರೂ ಮದುವೆಯಾದರು. ಬಲರಾಮನೂ ಕಡೆಗೆ ಒಪ್ಪಿ ವೈಭವದಿಂದ ವಿವಾಹ ಮಾಡಿಸಿದ.

ದ್ವಾರಕೆಯಲ್ಲಿ ಕೆಲವು ದಿನಗಳಿದ್ದು. ತನ್ನ ದೇಶಾಂತರದ ಅವಧಿ ಮುಗಿದಿದ್ದರಿಂದ ಇಂದ್ರಪ್ರಸ್ಥಕ್ಕೆ ಮರಳಿದ.

ಕೃಷ್ಣ ಆಗಾಗ ಇಂದ್ರಪ್ರಸ್ಥಕ್ಕೆ ಭೇಟಿಕೊಟ್ಟು ಎಲ್ಲರ ಯೋಗಕ್ಷೇಮ ವಿಚಾರಿಸಿಕೊಂಡು ಹೋಗುತ್ತಿದ್ದ. ಪಾಂಡವರ ಏಳಿಗೆಯನ್ನು ನೋಡಿ ಹೆಮ್ಮೆ ಪಟ್ಟ.



## ಅಗ್ನಿಗೆ ಆಹುತಿಯಾದ ಖಾಂಡವ ವನ

ಕೃಷ್ಣನು, ಪಾಂಡವರನ್ನು ತನ್ನ ಸೋದರತ್ತೆ ಕುಂತಿಯನ್ನು, ಸೋದರಿಯಾದ ದ್ರೌಪದಿಯನ್ನು ಕಾಣಲೆಂದು ಬಂದವನು ಸ್ವಲ್ಪ ದಿನ ಅಲ್ಲಿಯೇ ಉಳಿದುಕೊಂಡ.

ಬೇಸಿಗೆಯ ದಿನಗಳಾಗಿದ್ದವು. ರಾಜಪರಿವಾರವೆಲ್ಲವೂ ಎಲ್ಲಿಯಾದರೂ ಹೊರಗೆ ನದಿ ತೀರಗಳೆಡೆಗೆ ಹೋಗಿ ನೀರಾಟಗಳಲ್ಲಿ ಸ್ವಲ್ಪ ಸಮಯ ಕಳೆದು ಬರಲು ಆಲೋಚಿಸಿ, ಹೊರಟು ಬಂದಿದ್ದರು. ಸಾಕಷ್ಟು ಹೊತ್ತು ನೀರಾಟದ ಸುಖ ಅನುಭವಿಸಿದರು. ಬೇರೆಲ್ಲರೂ ನೀರಾಟದಲ್ಲಿ ಮುಳುಗಿರುವಾಗ ಅರ್ಜುನ, ಕೃಷ್ಣರು ಸ್ವಲ್ಪ ದೂರ ಹೋಗಿ ಕುಳಿತು ಲೋಕಾಭಿರಾಮವಾಗಿ ಮಾತಾಡುತ್ತಿದ್ದರು. ಆಗ ತೇಜಸ್ವಿಯಾಗಿದ್ದ ಬ್ರಾಹ್ಮಣನೊಬ್ಬನು ಅವರನ್ನು ಸಮೀಪಿಸಿ ತನಗೆ ಸಹಾಯ ಮಾಡಬೇಕೆಂದು ಕೇಳಿಕೊಂಡ. ಅವನಿಗೆ ಬಂದಿರುವ ಕಷ್ಟವಾದರೂ ಏನೆಂದು ವಿಚಾರಿಸಿದಾಗ ಆ ಬ್ರಾಹ್ಮಣನು, "ಅಯ್ಯಾ, ಖಾಂಡವ ವನದಲ್ಲಿ ಅಪಾರ ಸಂಖ್ಯೆಯಲ್ಲಿ ಹಾವುಗಳು, ಕ್ರೂರಮೃಗಗಳಿವೆ. ಅವುಗಳಿಂದ ನಮಗೆ ಬಹಳ ತೊಂದರೆಯಾಗಿದೆ. ನೀವು ಕೃಪೆಯಿಟ್ಟು ಅವುಗಳಿಗೆ ಬೆಂಕಿ ಇಟ್ಟು ನಾಶ ಮಾಡಿದರೆ ನಾವು ಯಾವುದೇ ತೊಂದರೆಯಿಲ್ಲದೆ ಯಾಗ ಯಜ್ಞಗಳನ್ನು ಮಾಡಿಕೊಳ್ಳಬಹುದು; ಯಾವುದೇ ಭಯವಿಲ್ಲದೆ ಈ ಕಾಡಿನಲ್ಲಿ ಜೀವಿಸಬಹುದು."

ಅರ್ಜುನ, ಕೃಷ್ಣರು ಬ್ರಾಹ್ಮಣನ ಕೋರಿಕೆಯನ್ನು ಪೂರೈಸಿದರು. ಬೆಂಕಿಯಿಂದ ತಪ್ಪಿಸಿಕೊಂಡು ಓಡಲು ಪ್ರಯತ್ನಿಸುತ್ತಿದ್ದ ಪ್ರಾಣಿಗಳನ್ನು ಬೇಟೆಯಾಡಿ ಕೊಂದರು. ಆದರೆ 'ಮಯ' ಎಂಬ ರಾಕ್ಷಸನೊಬ್ಬ ಶರಣಾಗತನಾಗಿ ತನ್ನನ್ನು ಕೊಲ್ಲಬೇಡಿ ಎಂದು ಬೇಡಿಕೊಂಡ. ಕೃಷ್ಣ,

ಅರ್ಜುನರು ಅವನ ಮೇಲೆ ದಯೆ ತೋರಿ ಅವನಿಗೆ ಪ್ರಾಣಭಿಕ್ಷೆ ನೀಡಿದರು. ಮಯ ಕೃತಜ್ಞತೆಯಿಂದ ತುಂಬಿ ಹೋದ. ಅವರು ತನ್ನ ಮೇಲೆ ತೋರಿದ ದಯೆ, ಮಾಡಿದ ಉಪಕಾರಕ್ಕಾಗಿ ಎಂದಾದರೂ ತನ್ನಿಂದ ಸಹಾಯ ಬೇಕಾದರೆ ಆಜ್ಞಾಪಿಸಬೇಕೆಂದೂ, ತಾನೊಬ್ಬ ಅತ್ಯುತ್ತಮ ವಾಸ್ತುಶಿಲ್ಪಿಯೆಂದೂ, ಅದರಲ್ಲಿಯೂ ಸಭಾಭವನಗಳನ್ನು ನಿರ್ಮಿಸುವುದರಲ್ಲಿ ತನಗೆ ಸಾಟಿಯಿಲ್ಲವೆಂದೂ ತನ್ನ ಬಗ್ಗೆ ಎಲ್ಲ ವಿವರಗಳನ್ನೂ ಪರಿಚಯವನ್ನೂ ತಿಳಿಸಿದ. ಮತ್ತೊಮ್ಮೆ ಕೃತಜ್ಞತೆ ಹೇಳಿ ಅಲ್ಲಿಂದ ಹೊರಟು ಹೋದ. ಕೃಷ್ಣ ಅರ್ಜುನರು ಮಯನ ಮಾತಿನಿಂದ ಸೋತು ಹೋದರು. ಅವನ ಕೌಶಲ್ಯ, ಪ್ರತಿಭೆಯ ಪ್ರಯೋಜನವನ್ನು ಎಂದಾದರೂ ಪಡೆದುಕೊಳ್ಳಲೇಬೇಕೆಂದು ಕೊಂಡರು.



## ರಾಜಸೂಯ ಯಾಗ

ಪಾಂಡವರು ಬಯಸಿದ್ದೆಲ್ಲವನ್ನು ಪಡೆದುಕೊಂಡರು. ತಾವು ಗಳಿಸಿದ ಜಯ, ಸಂಪತ್ತು, ಅಭಿವೃದ್ಧಿ ಇವೆಲ್ಲವುಗಳ ಸಂಭ್ರಮವನ್ನು ಆಚರಿಸಲು ರಾಜಸೂಯ ಯಾಗ ಮಾಡಬೇಕೆಂದುಕೊಂಡರು. ಅಲ್ಲದೆ ರಾಜಸೂಯ ಯಾಗದಿಂದ ತಮ್ಮ ಪಿತೃಪಿತಾಮಹರು ಅಥವಾ ಪೂರ್ವಜರು ಪುಣ್ಯಲೋಕವನ್ನು ಪಡೆಯುತ್ತಾರೆಂಬ ನಂಬಿಕೆಯೂ ಇದ್ದುದರಿಂದ, ಆದಷ್ಟು ಬೇಗ ಅದನ್ನು ಮಾಡಬೇಕೆಂದು ತೀರ್ಮಾನಿಸಿದರು.

ಕೃಷ್ಣನೊಡನೆ ಇದರ ಸಂಬಂಧವಾಗಿ ಸಮಾಲೋಚನೆ ನಡೆಸಿದರು. ಜೊತೆಗೆ ಗುರುಹಿರಿಯರನ್ನು ಕಂಡು ಸಲಹೆ ಸೂಚನೆ, ಅಪ್ಪಣೆ ಪಡೆದು ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡರು. ಇಂದ್ರಪ್ರಸ್ಥವು ಅಪರ ಸ್ವರ್ಗದಂತೆ ಕಂಗೊಳಿಸಿತು. ಅಗಲವಾದ, ಅಲಂಕೃತವಾದ ರಸ್ತೆಗಳು, ಅದ್ಭುತವಾದ ಅರಮನೆಗಳು, ಅತಿಥಿಗೃಹಗಳು ನಿರ್ಮಾಣವಾದವು. ಎಲ್ಲ ರಾಜರಿಗೂ ಆಹ್ವಾನಗಳನ್ನು ಕಳಿಸಿದರು. ಕೌರವರಿಗೆ ಪ್ರತ್ಯೇಕವಾಗಿ, ವಿಶೇಷವಾಗಿ ವ್ಯವಸ್ಥೆ ಮಾಡಲಾಗಿತ್ತು.

ಆಹ್ವಾನಿತರೆಲ್ಲರೂ ರಾಜಸೂಯ ಯಾಗದ ವ್ಯವಸ್ಥೆ, ಅತಿಥಿ ಅಭ್ಯಾಗತರಿಗೆ ದೊರೆತ ಸತ್ಕಾರ, ನಗರಿಯ ಅಲಂಕಾರ, ಸುಂದರವೂ ಭವ್ಯವೂ ಆದ ಗೃಹಗಳು, ಅತಿಥಿಗೃಹಗಳು ಮೊದಲಾದವನ್ನೆಲ್ಲ ನೋಡಿ ಸ್ತಂಭಿಸಿ ಹೋದರು. ಪಾಂಡವರನ್ನು, ಅವರ ಔದಾರ್ಯ, ಸದ್ಗುಣ, ಸತ್ಕಾರಗಳನ್ನು ಮನಸಾರೆ ಹೊಗಳಿದರು. ಮಯನಿಂದ ನಿರ್ಮಿತವಾದ ಸಭಾಭವನಗಳ ಸೌಂದರ್ಯ, ಕೌಶಲ್ಯಗಳು ಮಾತಿಗೆ ಮೀರಿದ್ದಾಗಿತ್ತು. ರಾಜಸೂಯ ಯಾಗ ಮುಗಿದ ಮೇಲೆ, ಎಲ್ಲ ಅತಿಥಿ ಅಭ್ಯಾಗತರು,

ಬ್ರಾಹ್ಮಣರು, ಋಷಿ ಮುನಿಗಳು ಪೂರ್ಣತೃಪ್ತಿಯೊಂದಿಗೆ ಹಿಂತಿರುಗಿದರು. ಪಾಂಡವರಂತೂ ಕೈತುಂಬಾ ದಾನ, ಧರ್ಮಗಳನ್ನು ಮಾಡಿ, ಎಲ್ಲರನ್ನೂ ತಣಿಸಿದರು.

ಎಲ್ಲರೂ ಹಿಂತಿರುಗಿದರೂ ಕೌರವರಿಗೆ ಅಲ್ಲಿಂದ ಹೋಗಲು ಮನಸ್ಸಾಗಲಿಲ್ಲ. ಪಾಂಡವರ ಅರಮನೆ, ಸಭಾ ಭವನಗಳ ಕಣ್ಣು ಕುಕ್ಕುವ ಸೌಂದರ್ಯವಂತೂ ದುರ್ಯೋಧನನನ್ನು ಅಲ್ಲಿಂದ ಹೋಗಲು ಬಿಡಲೇ ಇಲ್ಲ. ಅವನು ಇನ್ನೂ ಕೆಲವು ದಿನ ಅಲ್ಲಿಯೇ ಇರಬೇಕೆಂದು ಯೋಚಿಸಿದ. ಪಾಂಡವರ ಏಳಿಗೆ, ಅವರ ಸಿರಿ ಸಂಪತ್ತು ಅವನಲ್ಲಿ ಅಸೂಯೆಯನ್ನು ಹೆಚ್ಚಿಸಿತ್ತು. ಪಾಂಡವರನ್ನು ತುಳಿದು ಹಾಕಬೇಕೆಂದು, ಅವರು ಮೇಲೇಳದಂತೆ ಮಾಡಬೇಕೆಂದು ಹೊಸ ಹೊಸ ತಂತ್ರಗಳನ್ನು ಯೋಚಿಸುತ್ತಲೇ ಇದ್ದರು.

ದುರ್ಯೋಧನ ಒಮ್ಮೆ ಬಿಡುವಾಗಿ, ಅರಮನೆಯನ್ನು ಅದರ ಅಂದಚೆಂದಗಳನ್ನು ಮತ್ತೊಮ್ಮೆ ನೋಡಬೇಕೆಂದು ಹಾಗೆಯೇ ಒಳಗೆಲ್ಲ ಅಡ್ಡಾಡಿ ಬರುತ್ತಿದ್ದ. ಅರಮನೆಯ ಅಂಗುಲಂಗಲವೂ ಅತ್ಯದ್ಭುತವಾಗಿತ್ತು. ವಿಶೇಷವಾಗಿ ಸಭಾಭವನದ ರಚನೆಯಂತು ವಿವರಿಸಲು ಸಾಧ್ಯವೇ ಇರಲಿಲ್ಲ. ಗಾಜಿನ ಭವನವಾಗಿದ್ದ ಅದರಲ್ಲಿ ಯಾವುದು ವಾಸ್ತವ, ಯಾವುದು ಭ್ರಮೆ ಎಂಬುದೇ ತಿಳಿಯುತ್ತಿರಲಿಲ್ಲ. ಅವನು ಹಾಗೆಯೇ ನೋಡುತ್ತ ಒಂದೆಡೆಗೆ ಬಂದ. ಅಲ್ಲಿ ಮೆಟ್ಟಿಲುಗಳಿದ್ದವು. ಅದರ ಕೆಳಗಡೆ ಒಂದು ಕೊಳವಿದ್ದಂತೆ ಕಾಣಿಸಿತು. ಪಾಪ ದುರ್ಯೋಧನ ನೀರಿದೆಯೆಂದು ಬಲು ಎಚ್ಚರಿಕೆಯಿಂದ ಪಂಚೆಯನ್ನು ಸ್ವಲ್ಪ ಮೇಲಕ್ಕೆ ಎತ್ತಿ ಕಟ್ಟಿ ನೀರಿಗೆ ಇಳಿದ. ಆದರೆ ಆಶ್ಚರ್ಯ ಅಲ್ಲಿ ನೀರೇ ಇರಲಿಲ್ಲ. ಅವನಿಗೆ ಏಕಕಾಲದಲ್ಲಿ ಆಶ್ಚರ್ಯವೂ ನಾಚಿಕೆಯೂ ಆಯಿತು. ಅದು ನೀರಿನ ಭ್ರಮೆಯಾಗಿತ್ತು.

ಮತ್ತೊಂದು ದಿನ, ಇನ್ನೊಂದು ಭಾಗದಲ್ಲಿಯೂ ಇದೇ ರೀತಿ ಇತ್ತು. ಇವನ ಹಿಂದಿನ ಅನುಭವ ನೆನಪಾಗಿ ಈಗ ತಾನು ಬಹಳ ಬುದ್ಧಿವಂತಿಕೆಯಿಂದ, ನಿರಾತಂಕವಾಗಿ ಮೆಟ್ಟಿಲು ಇಳಿದ. ನೀರಿಲ್ಲವೆಂದು ನಿರಾಳವಾಗಿ ಇಳಿದು ಹೆಜ್ಜೆಯಿಟ್ಟದ್ದೇ, ನೀರೆಲ್ಲವೂ ಸಿಡಿದು ಮುಖಕ್ಕೆ

ಹಾರಿತು. ಬಿದ್ದು ಮೈಯೆಲ್ಲ ಒದ್ದೆ ಮಾಡಿಕೊಂಡ. ತುಂಬಾ ಅವಮಾನವಾಯಿತು. ಸಾಲದ್ದಕ್ಕೆ ಆಕಸ್ಮಿಕವಾಗಿ ಅದೇ ಸಮಯಕ್ಕೆ ಆ ಕಡೆ ಬಂದ ದ್ರೌಪದಿ ಇದನ್ನೆಲ್ಲ ನೋಡಿ ಬಿದ್ದು ಬಿದ್ದು ನಕ್ಕಳು. ಇದರಿಂದ ಇನ್ನಷ್ಟು ಕುದಿದು ಹೋದ. ಈ ದ್ರೌಪದಿಯಿಂದ ಆದ ಅವಮಾನಕ್ಕೆ ಸರಿಯಾಗಿ ಪಾಠ ಕಲಿಸಬೇಕೆಂದು ಆಗಲೇ ನಿರ್ಧಾರ ಮಾಡಿದ. ತನ್ನನ್ನು ನೋಡಿ ನಕ್ಕಿದ್ದಷ್ಟೇ ಅಲ್ಲ, ಅವನನ್ನು ಅವನ ಅಪ್ಪನಂತೆ ಕುರುಡ ಎಂದದ್ದು, ಇನ್ನಷ್ಟು ಅಸಮಾಧಾನಕ್ಕೆ ಕಾರಣವಾಯಿತು. ತನ್ನ ನೋವನ್ನೆಲ್ಲ ತನ್ನ ಆಪ್ತ ಸಚಿವನಂತಿದ್ದ ಮಾವ ದುಷ್ಟ ಶಕುನಿಯೊಂದಿಗೆ ಹಂಚಿಕೊಂಡ.

ಸೋದರಳಿಯನ ಮಾತುಗಳನ್ನೆಲ್ಲ ಕೇಳಿಸಿಕೊಂಡು ಅವನ ನೋವನ್ನೆಲ್ಲ ಅರ್ಥಮಾಡಿಕೊಂಡು ಸಮಾಧಾನ ಹೇಳಿದ ಮತ್ತು ತಾನು ಪಾಂಡವರನ್ನು ನಾಶಮಾಡಲು ಉಪಾಯವೊಂದನ್ನು ಯೋಚಿಸುತ್ತಿರುವುದಾಗಿ ಹೇಳಿದನು.

ದುರ್ಯೋಧನನಿಗೆ ನೆಮ್ಮದಿಯಿಂದ ನಿದ್ದೆ ಮಾಡಲಾಗಲಿಲ್ಲ. ಅವನ ತಲೆತುಂಬ ಪಾಂಡವರ ಯೋಚನೆಯೇ ತುಂಬಿಕೊಂಡಿತ್ತು. ಶಕುನಿ ಮತ್ತೊಮ್ಮೆ ಅವನ ಬಳಿಗೆ ಬಂದು. "ದುರ್ಯೋಧನ, ಇನ್ನೂ ನಿನ್ನ ಯೋಚನೆಯನ್ನು ಬಿಟ್ಟಂತಿಲ್ಲ. ಈ ಸಲದ ಉಪಾಯದಿಂದ ಖಂಡಿತವಾಗಿಯೂ ಪಾಂಡವರು ಭಿಕಾರಿಗಳಾಗುತ್ತಾರೆ. ಅವರು ನಾಶವಾಗುವುದನ್ನು ನೀನು ನೋಡಿಯೇ ನೋಡುತ್ತೀ? ನನ್ನಲ್ಲಿ ನಂಬಿಕೆ ಇಡು" ಎಂದ. ಆದರೆ ದುರ್ಯೋಧನ ದುಃಖಿಸುತ್ತ, "ಇಲ್ಲ ಮಾವ, ನನಗೆ ಇನ್ನು ಕಾಯುವ ಸಹನೆಯಿಲ್ಲ. ಹೋಗಿ ಅವರ ಮೇಲೆ ಆಕ್ರಮಣ ಮಾಡಿ ಮುಗಿಸಿ ಬರುತ್ತೇನೆ. ಅವರ ರಾಜ್ಯವನ್ನು ಗೆದ್ದು ಬರುತ್ತೇನೆ" ಎಂದು ಆತುರ ತೋರ್ಪಡಿಸಿದ. ಶಕುನಿ ಬುದ್ಧಿವಾದದ ದನಿಯಲ್ಲಿ, "ದುರ್ಯೋಧನ ಕೋಪದಲ್ಲಿ ಏನೇನೋ ಮಾಡಲು ಹೊರಟಿದ್ದೀಯ. ನಿನಗೆ ಪಾಂಡವರ ಶಕ್ತಿ ಸಾಮರ್ಥ್ಯಗಳು ತಿಳಿದಿಲ್ಲ. ವಿವೇಚನೆಯಿಲ್ಲದೆ, ಅವರನ್ನು ಗೆಲ್ಲಲು ಹೋಗಿ ಅವರೇ ಗೆಲ್ಲುವಂತೆ ಮಾಡಿ ಬರುತ್ತೀಯ. ಅವರ ರಾಜ್ಯ ನಿನಗೆ ಬರುವುದಿರಲಿ, ನಿನ್ನ ರಾಜ್ಯವೇ ಅವರದಾಗುತ್ತದೆ. ಅಂಥ ಮೂರ್ಖ ಕೆಲಸಕ್ಕೆ ಕೈ ಹಾಕಬೇಡ. ನಾನು ಸೂಚಿಸಿದಂತೆ

ಅವರನ್ನು ದ್ಯೂತಕ್ಕೆ ಕರೆ, ಯುಧಿಷ್ಠಿರನಿಗೆ ದ್ಯೂತವೆಂದರೆ ಪ್ರಾಣ. ಆದ್ದರಿಂದ ಆಡಲು ಆಹ್ವಾನ, ಅವಕಾಶಗಳು ಬಂದರೆ ಖಂಡಿತವಾಗಿಯೂ ತಪ್ಪಿಸಿಕೊಳ್ಳಲಾರ. ಅಲ್ಲದೆ ರಾಜನಾಗಿದ್ದು ದ್ಯೂತವನ್ನು ನಿರಾಕರಿಸುವುದೆಂದರೆ ರಾಜತ್ವಕ್ಕೆ ಅವಮಾನ ಮತ್ತು ಹೇಡಿತನದ ಸಂಕೇತವೆಂದು ಭಾವಿಸುತ್ತಾನೆ" ಎಂದು ಮನವೊಲಿಸಿದ.

ದುರ್ಯೋಧನನಿಗೆ ಇದರಿಂದ ಸಂತೋಷವಾಯಿತು. ಧೃತರಾಷ್ಟ್ರನ ಬಳಿಗೆ ಹೋಗಿ ತನ್ನ ಉಪಾಯವನ್ನು ಹೇಳಿದ. ಧೃತರಾಷ್ಟ್ರನಿಗೆ ಇದರ ಪರಿಣಾಮಗಳು ಏನಾಗುತ್ತವೆಂದು ತಿಳಿದಿದ್ದೂ ಮಗನ ಸಂತೋಷಕ್ಕಾಗಿ ಒಪ್ಪಿಗೆ ನೀಡಿದ.

ಭೀಷ್ಮ, ದ್ರೋಣ, ವಿದುರಾದಿಗಳಿಗೆ ಈ ದ್ಯೂತದ ವಿಚಾರ ಹಿಡಿಸಲಿಲ್ಲ. ಇದೆಲ್ಲ ಆ ಶಕುನಿಯ ಕುತಂತ್ರವೇ ಇರಬೇಕೆಂದು ಅನಿಸಿತು. ಧೃತರಾಷ್ಟ್ರನಿಗೂ ಈ ದ್ಯೂತದಾಟಕ್ಕೆ ಅನುಮತಿ ಕೊಡಬೇಡವೆಂದು ಹೇಳಿದ. ಆದರೆ ಧೃತರಾಷ್ಟ್ರ ಕೇಳಿಸಿಕೊಳ್ಳಲಿಲ್ಲ. ಮಗನ ಮೇಲಿನ ಪ್ರೀತಿ ಹೃದಯದಿಂದಲೂ ಕುರುಡಾಗಿಸಿತ್ತು.

ವಿದುರ ವಿಧಿಯಿಲ್ಲದೆ ಸುಮ್ಮನಾದ. ಆದರೆ ಅವನೇ ಯುಧಿಷ್ಠಿರನನ್ನು ಜೂಜಿಗೆ ಆಹ್ವಾನಿಸಲು ಹೋಗಬೇಕಾಗಿ ಬಂದುದು ಮತ್ತೂ ದುರಂತವೆನಿಸಿತು.

ವಿದುರ ಧೃತರಾಷ್ಟ್ರನ ಆಜ್ಞೆ ಮೇರೆಗೆ ಇಂದ್ರಪ್ರಸ್ಥವನ್ನು ತಲುಪಿದ. ಯುಧಿಷ್ಠಿರನನ್ನು ಕಂಡು ಜೂಜಿನ ವಿಚಾರ ತಿಳಿಸಿದ. ಕುಂತಿ, ಜೂಜಿಗೆ ಆಹ್ವಾನ ಬಂದದ್ದನ್ನು ತಿಳಿದು ಯುಧಿಷ್ಠಿರನಿಗೆ ಒಪ್ಪಬೇಡವೆಂದು ಬುದ್ಧಿ ಹೇಳಿದಳು. ಅವನ ಸಹೋದರರೂ ಜೂಜಿನ ಸಹವಾಸ ಬೇಡವೇ ಬೇಡವೆಂದರು. ಆದರೆ ಧರ್ಮರಾಯನಿಗೆ ಜೂಜಿನ ಚಪಲದಿಂದಾಗಿ ಬೇಡವೆಂದು ನಿರಾಕರಿಸಲು ಸಾಧ್ಯವೇ ಆಗಲಿಲ್ಲ.

ಕುಂತಿಗೆ ಬೇರೇನೂ ಹೇಳಲು ತೋಚಲಿಲ್ಲ. ಪಾಂಡವರು ದ್ರೌಪದಿಯೊಡನೆ ಹಸ್ತಿನಾಪುರಕ್ಕೆ ನಡೆದರು. ಅಲ್ಲಿ ಭೀಷ್ಮ, ವಿದುರ ಮತ್ತು ಇನ್ನೂ ಅನೇಕ ಪಾಂಡವರ ಕ್ಷೇಮಚಿಂತಕರು ಯುಧಿಷ್ಠಿರನನ್ನು

ಎಚ್ಚರಿಕೆಯಿಂದಿರಲು ಸೂಚಿಸಿದರು. ಯಾಕೆಂದರೆ ಶಕುನಿಗೆ ದಾಳಗಳನ್ನು ಹೇಗೆಂದರೆ ಹಾಗೆ ಉರುಳಿಸುವ ಮಂತ್ರಶಕ್ತಿ ಇತ್ತು. ತಮಗೆ ಅನುಕೂಲ ಆಗುವ ಹಾಗೆ ದಾಳಗಳನ್ನು ಉರುಳಿಸಬಲ್ಲವನಾಗಿದ್ದ. ಆದರೆ ಯುಧಿಷ್ಠಿರ ಇದ್ಯಾವುದರ ಬಗ್ಗೆಯೂ ತಲೆ ಕೆಡಿಸಿಕೊಳ್ಳಲಿಲ್ಲ. ಅವನು ಈ ದ್ಯೂತದ ಆಟಕ್ಕೆ ಪೂರ್ತಿಯಾಗಿ ಸಿದ್ಧನಾಗಿ ಬಂದಿದ್ದ ಸವಾಲಿಗೆ ಎದೆಯೊಡ್ಡಿದ್ದ.

ಆಟಕ್ಕೆ ಒಂದು ನಿಶ್ಚಿತವಾದ ದಿನವನ್ನು ಗೊತ್ತು ಮಾಡಿದರು. ದುರ್ಯೋಧನ, ಶಕುನಿ, ದುಶ್ಯಾಸನ ಒಂದು ಕಡೆಗೆ, ಪಾಂಡವ ಸೋದರರು ಮತ್ತೊಂದು ಕಡೆಗೆ ಇದ್ದರು. ಆಟ ಪ್ರಾರಂಭವಾಯಿತು. ಸೋದರರ ಪರವಾಗಿ ಯುಧಿಷ್ಠಿರ, ದುರ್ಯೋಧನ, ದುಶ್ಯಾಸನರ ಪರವಾಗಿ ಶಕುನಿ ಆಡತೊಡಗಿದರು. ಯುಧಿಷ್ಠಿರನಿಗೆ ಇದ್ದಕ್ಕಿದ್ದಂತೆ ಅನುಮಾನವಾಗಿ ಯೋಚಿಸಿದ, ಶಕುನಿಯನ್ನು ನಂಬುವ ಹಾಗಿಲ್ಲ. ಆಟದಲ್ಲಿ ಅವನು ಮೋಸ ಮಾಡಿದರೂ ಮಾಡಬಹುದು ಎನಿಸಿ ಆಟಕ್ಕೆ ಮೊದಲು ಶಕುನಿಯನ್ನು "ಮಾವ ಆಟದಲ್ಲಿ ಮೋಸಗೀಸ ಇಲ್ಲ ತಾನೇ?" ಎಂದು ಕೇಳಿದ.

ಶಕುನಿ ನಗುತ್ತಾ, "ಯುಧಿಷ್ಠಿರ, ಮೋಸದ ಪ್ರಶ್ನೆ ಎಲ್ಲಿ ಬಂತು. ಎಲ್ಲರ ಮುಂದೆ, ಕಾಣುವಂತೆ ದಾಳಗಳನ್ನು ಬಯಸಿದ ಸಂಖ್ಯೆಗೆ ಎಸೆಯುತ್ತೇವೆ. ಹೀಗಿರುವಾಗ ಮೋಸವಾಗುತ್ತದೆಂದು ಹೇಗೆ ಯೋಚಿಸಿದೆ?" ಎಂದು ಪ್ರಾಮಾಣಿಕನಂತೆ ಮಾತನಾಡಿದ.

ಯುಧಿಷ್ಠಿರ ಮತ್ತೇನೂ ಹೇಳಲಿಲ್ಲ. ಶಕುನಿ ಪಣಕ್ಕೆ ವಸ್ತುಗಳನ್ನು ಇರಿಸಿ ದಾಳಗಳನ್ನು ಎಸೆಯತೊಡಗಿದ. ಪ್ರತಿ ಸಲವೂ ಶಕುನಿಯೇ ಗೆಲ್ಲುತ್ತಿದ್ದ. ಅದರೊಂದಿಗೆ ಪಣಕ್ಕಿಟ್ಟ ವಸ್ತುಗಳೂ ಅವನಿಗೇ ಸೇರಿದವು.

ಯುಧಿಷ್ಠಿರ ಒಂದೊಂದಾಗಿ, ಹಸುಗಳು, ಕುದುರೆಗಳು, ಆನೆಗಳು, ಸೈನ್ಯ, ಪ್ರಜೆಗಳು ಹೀಗೆ ಎಲ್ಲವನ್ನೂ ಕಳೆದುಕೊಂಡ. ಆದರೂ ಆಟ ನಿಲ್ಲದೆ ಮುಂದುವರಿಯಿತು. ಶಕುನಿ ಯುಧಿಷ್ಠಿರನನ್ನು ಪ್ರಚೋದಿಸುತ್ತಿದ್ದ; ಹಂಗಿಸುತ್ತಿದ್ದ. ಆಟ ಬಿಟ್ಟು ಹೋಗುವುದು ಹೇಡಿತನವೆಂದೂ ಟೀಕೆ ಮಾಡಿದ. ಇದರಿಂದ ಯುಧಿಷ್ಠಿರ, ತನ್ನ ಬಳಿ ವಸ್ತುಗಳು ಪಣಕ್ಕಿಡಲು



ಏನೂ ಇಲ್ಲದಿದ್ದರೂ ತಮ್ಮನ್ನೇ ಒಡ್ಡಿಕೊಂಡು, ಒಬ್ಬೊಬ್ಬರನ್ನೂ ಆಟದಲ್ಲಿ ತನ್ನನ್ನೂ ಸೇರಿದಂತೆ ಸೋತು ಹೋದ.

ದುಷ್ಟ ಶಕುನಿ, ಯುಧಿಷ್ಠಿರನ ಸೋಲನ್ನು ಕಂಡು ಹಿಗ್ಗುತ್ತಿದ್ದ. "ಯುಧಿಷ್ಠಿರ, ಪಾಪ! ನಿನ್ನನ್ನು ನೋಡಿದರೆ ಕನಿಕರವೆನಿಸುತ್ತದೆ. ಈಗ ಪೂರ್ತಿಯಾಗಿ ಭಿಕ್ಷುಕನಾಗಿ ಬಿಟ್ಟಿದ್ದೀಯೆ. ನಿನ್ನ ಬಳಿ ಇನ್ನು ಆಡಲು ಪಣಕ್ಕೆ ದ್ರೌಪದಿ ಹೊರತು ಬೇರೇನೂ ಇಲ್ಲ. ನೋಡು ಅವಳನ್ನು ಪಣಕ್ಕಿಡು. ಒಂದು ವೇಳೆ ಈ ಬಾರಿ ಅದೃಷ್ಟವಶಾತ್ ಗೆದ್ದರೆ ಕಳೆದುಕೊಂಡದ್ದನ್ನೆಲ್ಲ ಹಿಂದಕ್ಕೆ ಪಡೆಯಬಹುದು" ಎಂದು ಹುರಿದುಂಬಿಸಿದ.

ಇಷ್ಟಾದರೂ ಯುಧಿಷ್ಠಿರ ಪಾಠ ಕಲಿಯಲಿಲ್ಲ. ಬದಲಾಗಿ ಶಕುನಿಯೊಡ್ಡಿದ ಪ್ರಲೋಭನೆಗೆ ಬಿದ್ದ. ಶಕುನಿ ಈ ಬಾರಿಯೂ ದಾಳಗಳನ್ನು ಎಸೆದ. ಸಂತೋಷದಿಂದ ಕೂಗುತ್ತ, "ಓಹ್ ನಾನೇ ಗೆದ್ದೆ. ಅಯ್ಯೋ ದ್ರೌಪದಿಯನ್ನೂ ಸೋತೆಯಲ್ಲ?" ಎಂದು ನಗುತ್ತ ಹೇಳಿದ.

ದುರ್ಯೋಧನನ ಸಂತೋಷಕ್ಕೆ ಪಾರವೇ ಇರಲಿಲ್ಲ. ವಿದುರನ ಕಡೆ ತಿರುಗಿ ಹೇಳಿದ. "ಹೋಗು ದ್ರೌಪದಿಯನ್ನು ಕರೆದು ತಾ" ಎಂದು ಹಿರಿತನ, ಪದವಿಗಳ ಬಗ್ಗೆ ಒಂದಿಷ್ಟೂ ಗೌರವವಿಲ್ಲದೆ ಆದೇಶಿಸಿದ. ವಿದುರನಿಗೆ ಕೋಪ ತಡೆಯಲಾಗಲಿಲ್ಲ. "ದುರ್ಯೋಧನ ನಿಜವಾಗಿಯೂ ನಿನ್ನ ತಲೆ ಕೆಟ್ಟಿದೆ. ಅಹಂಕಾರ, ಗರ್ವದ ಅಮಲು ನೆತ್ತಿಗೇರಿದೆ. ಖಂಡಿತವಾಗಿಯೂ ನಿನಗೆ ಉಳಿಗಾಲವಿಲ್ಲ. ನಿನ್ನ ವಿನಾಶ ಹತ್ತಿರ ಬಂದಿದೆ. ಕುರುವಂಶದ ಸೊಸೆಯನ್ನು ಎಳೆದು ತಾ ಎಂದು ಹೇಳಲು ನಿನಗೆ ಎಷ್ಟು ಧೈರ್ಯ! ಅವಳನ್ನು ಹೀಗೆ ಅವಮಾನ ಮಾಡುವುದು ಸರಿಯಲ್ಲ. ನಿನ್ನ ಮೂರ್ಖತನವನ್ನು ಸಾಕು ಮಾಡು" ಎಂದು ವಿದುರ ಅಬ್ಬರಿಸಿ, ಎಚ್ಚರಿಸಿದ.

ದುರ್ಯೋಧನ ವಿದುರನ ಮಾತನ್ನು ಲೆಕ್ಕಿಸಲೇ ಇಲ್ಲ. ವಿದುರನನ್ನು ಬಿಟ್ಟು ತನ್ನ ಸಾರಥಿಯಾಗಿದ್ದ ಪ್ರಾತಿಕಾಮಿಯನ್ನು ಕರೆದು, "ಹೋಗು, ಈ ಕೂಡಲೇ ದ್ರೌಪದಿಯನ್ನು ಕರೆದು ತಾ. ಅವಳು ತಾನಾಗಿ ಬರಲಿಲ್ಲವಾದರೆ ನೀನೇ ಬಲವಂತದಿಂದ ಎಳೆದುಕೊಂಡು ಬಾ" ಎಂದು ಆದೇಶಿಸಿದ.



# ಸಂಕಟದಲ್ಲಿ ದ್ರೌಪದಿ

ಪ್ರಾತಿಕಾಮಿ, ದುರ್ಯೋಧನನ ಆಜ್ಞೆಯಂತೆ ದ್ರೌಪದಿಯ ಅರಮನೆಗೆ ಬಂದು ವಿನಯದಿಂದಲೇ, "ಮಹಾರಾಣಿಯವರೇ, ಕ್ಷಮಿಸಿ, ತಾವು ಸಭೆಗೆ ಬರಬೇಕೆಂದು ಆದೇಶಿಸಿದ್ದಾರೆ. ಯುಧಿಷ್ಠಿರ ಪ್ರಭುಗಳು ತಮ್ಮನ್ನು ಜೂಜಿನಲ್ಲಿ ಪಣವಿಟ್ಟು ಸೋತಿದ್ದಾರೆ. ಈಗ ತಾವು ದುರ್ಯೋಧನನ ವಸ್ತುವಾಗಿರುವುದರಿಂದ ತಮ್ಮನ್ನು ಬರಲು ಹೇಳಿದ್ದಾರೆ. ಇನ್ನು ಮುಂದೆ ತಾವು ಅವರ ಸೇವೆಯಲ್ಲಿ ಇರುತ್ತೀರಿ" ಎಂದು ವಿನಯದಿಂದ ತಿಳಿಸಿದ.

ಸುದ್ದಿಯನ್ನು ಕೇಳಿದ ದ್ರೌಪದಿ ದಿಗ್ಭ್ರಾಂತಳಾದಳು. ಯುಧಿಷ್ಠಿರನಿಗೆ ನನ್ನನ್ನು ಪಣವಾಗಿಡಲು ಏನು ಹಕ್ಕಿದೆ? ಎಂದು ತನ್ನಲ್ಲೇ ಯೋಚಿಸಿದಳು. ನಂತರ ಪ್ರಾತಿಕಾಮಿಯ ಕಡೆ ತಿರುಗಿ, "ಪ್ರಾತಿಕಾಮಿ ಪಣವಿಡಲು ನನ್ನನ್ನು ಬಿಟ್ಟರೆ ಬೇರೇನೂ ಇರಲಿಲ್ಲವೆ?" ಎಂದು ವಿಚಾರಿಸಿದಳು.

ಪ್ರಾತಿಕಾಮಿ ವಿನಯದಿಂದ, "ಇಲ್ಲ ಮಹಾರಾಣಿಯವರೇ, ಎಲ್ಲವನ್ನೂ ಸೋತು. ಕಡೆಗೆ ಏನೂ ಉಳಿಯದಿದ್ದಾಗ ಅಸಹಾಯಕರಾಗಿ, ವಿಧಿಯಿಲ್ಲದೆ ತಮ್ಮನ್ನು ಪಣಕ್ಕೊಡ್ಡಿದರು. ತಮ್ಮನ್ನೂ ಮೊದಲೇ ಸೋತು ಬಿಟ್ಟಿದ್ದರು" ಎಂದ.

ದ್ರೌಪದಿ ಪ್ರಾತಿಕಾಮಿಯ ಜೊತೆ ಹೋಗಲು ತಿರಸ್ಕರಿಸಿದಳು. ಪ್ರಾತಿಕಾಮಿ ಹಿಂತಿರುಗಿದ. ದುರ್ಯೋಧನ ಈಗ ತನ್ನ ತಮ್ಮ ದುಶ್ಯಾಸನನನ್ನು ಕಳಿಸಿದ. ದುಶ್ಯಾಸನ ಅಣ್ಣನ ಮಾತಿಗೆ ಪ್ರತಿ ಹೇಳದೆ ಹೋಗಿ ಬಲವಂತದಿಂದ ಎಳೆದು ತಂದ.

ದುರ್ಯೋಧನ ಗೆಲುವಿನ ಅಟ್ಟಹಾಸದಿಂದ ಅವಳ ಕಡೆ ನೋಡುತ್ತಾ, "ಎಲ್ಲೈ ಸುಂದರ ಹೆಣ್ಣೆ, ಈಗ ನೀನು ನನ್ನ ದಾಸಿ, ನಾವು ಹೇಳಿದಂತೆ ಇನ್ನು ಮುಂದೆ ನಡೆದುಕೊಳ್ಳಬೇಕು" ಎಂದು ಹೇಳಿದ.

ದ್ರೌಪದಿ ಸುಮ್ಮನಿರಲಿಲ್ಲ. ಉಗ್ರವಾಗಿ ಕೇಳಿದಳು. "ನಾನು ನಿನ್ನ ದಾಸಿಯೆಂದು ಹೇಗೆ ಹೇಳುವೇ? ಯುಧಿಷ್ಠಿರ ತನ್ನನ್ನೇ ಸೋತ ಮೇಲೆ, ನನ್ನನ್ನು ಸೋಲುವ ಹಕ್ಕು ಅವನಿಗೆಲ್ಲಿದೆ? ನನ್ನ ಮೇಲೆ ಯಾವುದೇ ಬಗೆಯಲ್ಲಿ ಅವನ ಹಕ್ಕಿರಲು ಸಾಧ್ಯವಿಲ್ಲವಲ್ಲವೇ?" ಎಂದಳು.

ದ್ರೌಪದಿಯ ಕೋಪ, ಪ್ರಾರ್ಥನೆ ಯಾವುದರಿಂದಲೂ ಪರಿಣಾಮವಾಗಲಿಲ್ಲ. ಭೀಷ್ಮ, ದ್ರೋಣ, ವಿದುರ, ಧೃತರಾಷ್ಟ್ರಾದಿಗಳೂ ಅಸಹಾಯಕರಂತೆ ಕೈಕಟ್ಟಿ ಕುಳಿತಿದ್ದರು. ಅವಮಾನದಿಂದ ತಲೆ ತಗ್ಗಿಸಿದ್ದರು. ಪಾಂಡವ ಸೋದರರದೂ ಇದೇ ಸ್ಥಿತಿಯಾಗಿತ್ತು. ತಾವೇ ಗುಲಾಮರಾಗಿರುವಾಗ ತಮ್ಮ ಮಡದಿಯ ಅಸಹಾಯಕತೆಗೆ ಹೇಗೆ ತಾನೇ ಮುಂದೆ ಬಂದು ಸಹಕರಿಸಿಯಾರು? ಭೀಮನಿಗೆ ರೋಷ ಉಕ್ಕಿ ಬಂದರೂ ಯುಧಿಷ್ಠಿರನ ಧರ್ಮದ ಮುಂದೆ ತೆಪ್ಪಗಾಯಿತು.

ದುರ್ಯೋಧನ ನಾಚಿಕೆಯಿಲ್ಲದೆ, ದ್ರೌಪದಿಯನ್ನು ಬಂದು ತನ್ನ ತೊಡೆಯ ಮೇಲೆ ಕುಳಿತುಕೊಳ್ಳಲು ಆಹ್ವಾನಿಸಿದ. ತನ್ನ ರಾಣಿಯಾಗುವಂತೆ ಒತ್ತಾಯಿಸಿದ ದ್ರೌಪದಿ ಅವನನ್ನು ಅವಾಚ್ಯ ಶಬ್ದಗಳಿಂದ ಬೈದಳು. ಇದರಿಂದ ಉದ್ರಿಕ್ತನಾದ ದುರ್ಯೋಧನ, ತನ್ನ ತಮ್ಮ ದುಶ್ಯಾಸನನನ್ನು ಕರೆದು ದ್ರೌಪದಿಯನ್ನು ನಿರ್ವಸ್ತ್ರಳನ್ನಾಗಿ ಮಾಡಲು ಹೇಳಿದ.

ದುರ್ಯೋಧನನ ಈ ಅತಿರೇಕದ ನಡವಳಿಕೆ ಸಭಾಸದರನ್ನು, ಹಿರಿಯರನ್ನು ದಿಗ್ಭ್ರಮೆಗೊಳಿಸಿತು. ಅವರೆಲ್ಲ ಅವನಿಗೆ ಬುದ್ಧಿ ಹೇಳಿದರು. ಧೃತರಾಷ್ಟ್ರನೂ ಮಗನಿಗೆ ವಿವೇಕ ಹೇಳಿದನು. ಕುರುವಂಶದ ಸೊಸೆಯನ್ನು ಈ ರೀತಿ ಅವಮಾನ ಮಾಡುವುದು ಸರಿಯಲ್ಲವೆಂದು ತಿಳಿಸಿ ಹೇಳಿದ.

ಅವರೆಲ್ಲ ಎಷ್ಟೇ ಬೇಡವೆಂದು ಕೂಗಿ ಹೇಳುತ್ತಿದ್ದರೂ ದುರ್ಯೋಧನ, ದುಶ್ಯಾಸನ ಅವಳ ಸೀರೆಗೆ ಕೈ ಹಾಕಿ ಎಳೆದ. ದ್ರೌಪದಿಗೆ ಏನು ಮಾಡಲೂ ತೋಚಲಿಲ್ಲ. ಕೃಷ್ಣನೇ ತನ್ನ ಕಡೆಯ ಭರವಸೆ ಎಂದು ಅವನನ್ನು ಮೊರೆ ಹೊಕ್ಕಳು. ಆರ್ತಳಾಗಿ ಪ್ರಾರ್ಥಿಸಿದಳು. ಅವಳಿಗೆ ಇನ್ನು ಸಹಿಸಿಕೊಳ್ಳುವುದು ಸಾಧ್ಯವಾಗದೆ ಮೂರ್ಛೆ ಬಿದ್ದಳು. ಸ್ವಲ್ಪ ಸಮಯದ ನಂತರ ಎಚ್ಚರಗೊಂಡಳು. ದುಶ್ಯಾಸನ ಅವಳ ಸೀರೆಯನ್ನು ಎಳೆಯಲು




ಮೊದಲು ಮಾಡಿದ. ಆಶ್ಚರ್ಯವೆಂಬಂತೆ ಎಳೆದೆಳೆದು. ಎಷ್ಟೇ ಎಳೆದರೂ ಅಕ್ಷಯವಾಗುತ್ತಿದ್ದ ವಸ್ತ್ರವನ್ನು ಇನ್ನು ಎಳೆಯಲು ಸಾಧ್ಯವಾಗದೆ ಸೋತು ಕೆಳಗೆ ಬಿದ್ದ.

ಅಷ್ಟರಲ್ಲಿ ಅಪಶಕುನಗಳಾಗುತ್ತಿದ್ದುದು ಎಲ್ಲರ ಗಮನಕ್ಕೆ ಬಂತು. ಹೂಳಿಡುವ ನರಿಗಳು, ಅರಚುವ ಕತ್ತೆಗಳು, ಮೊದಲಾದವುಗಳಿಂದ ಹೆದರಿದ ಧೃತರಾಷ್ಟ್ರ ಮತ್ತೊಮ್ಮೆ ಮಗನಿಗೆ ಬುದ್ಧಿ ಹೇಳಿದ. ಆದರೆ ದುರ್ಯೋಧನನಿಗೆ ಶಕುನಿ, ಕರ್ಣರ ಪ್ರಚೋದನೆ, ಒತ್ತಾಸೆಗಳಿಂದ ಮತ್ತೊಮ್ಮೆ ದ್ರೌಪದಿಯನ್ನು ತೊಡೆ ತೋರಿ ಕರೆದ. ಈಗ ಭೀಮನಿಗೆ ಸುಮ್ಮನಿರಲಾಗದೆ ಸಿಂಹ ಗರ್ಜನೆಯೊಂದಿಗೆ ಅಬ್ಬರಿಸಿ ಹೇಳಿದ. “ಎಲೈ ದುರ್ಯೋಧನ ಯಾವ ತೊಡೆ ತೋರಿಸಿ, ನನ್ನವಳಿಗೆ ಅವಮಾನ ಮಾಡಿದೆಯೋ, ಅದನ್ನು ನಾನು ಮುರಿದೇ ಮುರಿಯುತ್ತೇನೆ” ಎಂದು ಪ್ರತಿಜ್ಞೆ ಮಾಡಿದ. ಮತ್ತೆ ದುಶ್ಯಾಸನನ ಎದೆ ಸೀಳಿ ಅವನ ರಕ್ತವನ್ನು ಕುಡಿಯುತ್ತೇನೆಂದ. ದ್ರೌಪದಿಯೂ ಮುಂದೆ ಬಂದು, ಆ ದುಶ್ಯಾಸನನ ರಕ್ತವನ್ನು ತಲೆಗೆ ಸವರಿಸಿಕೊಂಡು ಅವನ ಕರುಳು ಮುಡಿಯುವವರೆಗೆ ನಾನು ಕೂದಲು ಕಟ್ಟುವುದಿಲ್ಲ ಎಂದು ಪ್ರತಿಜ್ಞೆ ಮಾಡಿದಳು.

ಧೃತರಾಷ್ಟ್ರ, ವಿದುರರು ಮಧ್ಯೆ ಪ್ರವೇಶಿಸಿ, ಅವನು ತನ್ನ ತಪ್ಪುಗಳನ್ನು ತಿಳಿದುಕೊಂಡು ಸುಧಾರಿಸದಿದ್ದಲ್ಲಿ ಒಳ್ಳೆಯದಾಗುವುದಿಲ್ಲವೆಂದು ಹೇಳಿ, ಹೇಗೋ ಸಧ್ಯಕ್ಕೆ ಅವನು ಮುಂದೆ ಅನಾಹುತಗಳನ್ನು ಮಾಡದಂತೆ ತಡೆದರು.

ಧೃತರಾಷ್ಟ್ರನಿಗೆ ಮನಸ್ಸಿನಲ್ಲಿ ತುಂಬ ವ್ಯಥೆಯಾಯಿತು. ಇದಕ್ಕೆಲ್ಲಾ ತಾನೂ ಒಂದು ರೀತಿಯಲ್ಲಿ ಕಾರಣನಾದೆ ಎಂಬ ಪಾಪ ಪ್ರಜ್ಞೆ ಕಾಡಿತು. ಸ್ವಲ್ಪವಾದರೂ ಮಾಡಿದ ತಪ್ಪುಗಳನ್ನು ತಿದ್ದಿಕೊಳ್ಳಬೇಕೆಂದು ದ್ರೌಪದಿಯನ್ನು ಬಳಿಗೆ ಕರೆದು ಪ್ರೀತಿಯಿಂದ ಮಾತನಾಡಿಸಿದ. "ಮಗಳೇ, ಏನೋ ತಿಳಿಯದೆ ಎಲ್ಲ ನಡೆದು ಹೋಯಿತು. ನಾನೇ ಇದಕ್ಕೆಲ್ಲ ಕಾರಣ. ನಾನು ಅವರ ಪರವಾಗಿಯೂ ನನ್ನ ಪರವಾಗಿಯೂ ಕ್ಷಮೆ ಬೇಡುತ್ತೇನೆ. ಆದದ್ದನ್ನೆಲ್ಲ ಮರೆತು ಬಿಡು. ಹೇಳು ಮಗಳೇ, ನಿನಗೇನು ಬೇಕೋ ಕೇಳಿಕೋ. ನಾನು ಕೊಡುತ್ತೇನೆ" ಎಂದು ನಿಜವಾದ ಅಂತಃಕರಣದಿಂದ ಹೇಳಿದ.

ದ್ರೌಪದಿ, "ಮಾವಾ ನಿಜವಾಗಿಯೂ ನಿಮಗೆ ಏನನ್ನಾದರೂ ಕೊಡಬೇಕೆಂಬ ಇಚ್ಛೆಯಿದ್ದರೆ, ಪಾಂಡವ ಸೋದರರನ್ನು ದಾಸ್ಯದಿಂದ ಮುಕ್ತಗೊಳಿಸಿ" ಎಂದಳು.

ಧೃತರಾಷ್ಟ್ರನಿಗೆ ಸಂತೋಷವಾಯಿತು. ಅವನು ಯುಧಿಷ್ಠಿರನನ್ನು ಕರೆದು, "ಯುಧಿಷ್ಠಿರ, ಮಗು. ನೀನು ಬಹಳ ಸಜ್ಜನ, ಧರ್ಮಿಷ್ಠ, ನಿಷ್ಕಲ್ಮಶ ವ್ಯಕ್ತಿತ್ವ ನಿನ್ನದು. ಎಲ್ಲರೂ ನಿನ್ನನ್ನು ಪ್ರೀತಿಸುತ್ತಾರೆ. ಆದರೆ ನನ್ನ ಮಕ್ಕಳು ನಿಮಗೆಲ್ಲ ಎಷ್ಟೊಂದು ತೊಂದರೆ ಕೊಟ್ಟಿದ್ದಾರೆ. ಅದನ್ನೆಲ್ಲ ಮರೆತು ಬಿಡು. ನಾನು ಸಂತೋಷದಿಂದ ನಿಮ್ಮನ್ನೆಲ್ಲ ದಾಸ್ಯಮುಕ್ತರನ್ನಾಗಿ ಮಾಡಿದ್ದೇನೆ. ನೀವು ರಾಜ್ಯ ಸಿರಿ ಸಂಪತ್ತೆಲ್ಲವನ್ನು ಮತ್ತೆ ನಿಮಗೆ ಹಿಂತಿರುಗಿಸಿದ್ದೇನೆ. ಹೋಗು ಮಗು. ಧರ್ಮದಿಂದ ರಾಜ್ಯ ಪಾಲಿಸು. ದೇವರು ನಿನಗೆ ಒಳ್ಳೆಯದು ಮಾಡಲಿ. ನನ್ನ ಆಶೀರ್ವಾದವೂ ನಿನಗಿರಲಿ" ಎಂದು ಹೇಳಿ, ಆಶೀರ್ವದಿಸಿ ಅವರನ್ನು ಅಲ್ಲಿಂದ ಕಳಿಸಿಕೊಟ್ಟ.

ಯುಧಿಷ್ಠಿರ ತನ್ನ ಸೋದರರೊಂದಿಗೆ ದೊಡ್ಡಪ್ಪನ ಆಶೀರ್ವಾದ ಪಡೆದು ಬೀಳ್ಕೊಂಡರು. ❖

# ಪಾಂಡವರ ವನವಾಸ

ಹಸ್ತಿನಾಪುರದಿಂದ ಇಂದ್ರಪ್ರಸ್ಥಕ್ಕೆ ಬಂದು ಮೊದಲಿನಂತೆ ರಾಜ್ಯಭಾರವನ್ನು ವಹಿಸಿಕೊಂಡು ಕೆಲದಿನಗಳು ಆಗಿದ್ದವು ಅಷ್ಟೇ!... ಮತ್ತೆ ಹಸ್ತಿನಾವತಿಯಿಂದ ದ್ಯೂತವಾಡಲು ಆಹ್ವಾನ ಬಂತು.

ತಂದೆ ಪಾಂಡವರಿಗೆ ಅವರ ಮೊದಲಿನ ಸ್ಥಿತಿಗೆ ತಲುಪಲು ಸಹಕರಿಸಿದ್ದು, ದುರ್ಯೋಧನನ ಅಸೂಯೆಗೆ, ಕೋಪಾವೇಶಕ್ಕೆ ಕಾರಣವಾಯಿತು. ತಂದೆಯ ಮೇಲೆ ಕೂಗಾಡಿದ. ಧೃತರಾಷ್ಟ್ರನಿಗೆ ಏನು ಸಮಾಧಾನ ಹೇಳಬೇಕೋ ತಿಳಿಯಲಿಲ್ಲ. ದುರ್ಯೋಧನ ಅದನ್ನೆಲ್ಲ ಮರಳಿ ಅವರಿಂದ ಕಸಿದುಕೊಳ್ಳಲು ಯೋಚಿಸಿದ ಉಪಾಯವನ್ನು ತಿಳಿಸಿದಾಗ, ಧೃತರಾಷ್ಟ್ರ ತುಟಿಪಿಟಿಕ್ಕೆನ್ನದೆ ತಲೆಯಾಡಿಸಿ ಒಪ್ಪಿಗೆ ಕೊಟ್ಟ. ಇದೆಲ್ಲವೂ ಶಕುನಿಯ ಉಪಾಯವಾಗಿತ್ತು. ಪಾಂಡವರನ್ನು ಮತ್ತೊಂದು ರೀತಿಯಲ್ಲಿ ಸೋಲಿಸಬಹುದಾಗಿತ್ತು.

ಯುಧಿಷ್ಠಿರ ಎರಡನೇ ಸಲವೂ ಆಹ್ವಾನ ಬಂದಾಗ, ಒಲ್ಲೆ ಎನ್ನಲಿಲ್ಲ. ಇದು ತನ್ನ ಪ್ರತಿಷ್ಠೆಯ ಸವಾಲಾಗಿತ್ತು. ಆದ್ದರಿಂದ ಮತ್ತೆ ಹಸ್ತಿನಾಪುರಕ್ಕೆ ಪ್ರಯಾಣ ಬೆಳೆಸಿದ.

ದುರ್ಯೋಧನ, ಶಕುನಿಯರು ಈ ಬಾರಿ ಎಲ್ಲಿಲ್ಲದ ಪ್ರೀತಿ ತೋರಿಸಿದರು. ಹಿಂದಿನದು ಯಾವುದೂ ನೆನಪಿಲ್ಲದಂತೆ ವರ್ತಿಸಿದರು. ಈ ಸಲ ಪಣಕ್ಕೆ ರಾಜ್ಯ, ವಸ್ತು ವಾಹನಗಳು ಯಾವುದನ್ನೂ ಇಡಬೇಕಾಗಿಲ್ಲ. ಸೋತವರು ಹನ್ನೆರಡು ವರ್ಷ ವನವಾಸ ಒಂದು ವರ್ಷ ಅಜ್ಞಾತವಾಸ ಮಾಡಬೇಕು. ಒಂದು ವೇಳೆ ಅಜ್ಞಾತವಾಸದಲ್ಲಿದ್ದಾಗ, ಪತ್ತೆಯಾದರೆ, ಮತ್ತೆ ಷರತ್ತನ್ನು ಪುನರಾವರ್ತಿಸಬೇಕು ಅಷ್ಟೇ ಎಂದು ಆಟದ ನಿಯಮವನ್ನು ಷರತ್ತನ್ನು ವಿವರಿಸಿದರು.

ಆಟ ಪ್ರಾರಂಭವಾಯಿತು. ಶಕುನಿಯ ತಂತ್ರಗಳೂ ಮಂತ್ರಗಳೂ ಪ್ರಾರಂಭವಾದವು. ಅವರು ಸೂಚಿಸಿದ ಸಂಖ್ಯೆಗಳೇ ಬರುತ್ತಿದ್ದವು. ಮತ್ತೆ ನಿರೀಕ್ಷಿಸಿದಂತೆ ಯುಧಿಷ್ಠಿರನ ಪಾಲಿಗೆ ಸೋಲೇ ಗತಿಯಾಯಿತು. ದುಃಖ, ನಾಚಿಕೆ, ಅವಮಾನಗಳಿಂದ ತಲೆ ತಗ್ಗಿಸಿ ಕುಳಿತು ಬಿಟ್ಟ ಯುಧಿಷ್ಠಿರ.

ದುರ್ಯೋಧನನ ಆನಂದಕ್ಕೆ ಕೊನೆಯೇ ಇಲ್ಲವಾಯಿತು. ಒಪ್ಪಂದದಂತೆ ಪಾಂಡವರು ದ್ರೌಪದಿಯೊಂದಿಗೆ ವನವಾಸಕ್ಕೆ ನಡೆದರು. ಪ್ರಜೆಗಳೆಲ್ಲರೂ ಕಣ್ಣೀರು ಹಾಕಿದರು. ಒಲ್ಲದ ಮನಸ್ಸಿನಿಂದ ಅವರನ್ನು ಬೀಳ್ಕೊಟ್ಟರು. ಯುಧಿಷ್ಠಿರ ಅವರೆಲ್ಲರಿಗೂ ಶಾಂತವಾಗಿರುವಂತೆ ಸಮಾಧಾನ ಹೇಳಿದ; ಹಿಂತಿರುಗುವಂತೆ ಬೇಡಿಕೊಂಡ.

ಉತ್ತರ ದಿಕ್ಕಿಗೆ ಹೊರಟು ಕಾಡುಗಳನ್ನು ಹಾದು, ಭಯಂಕರ ಕಾಡು ಪ್ರಾಣಿಗಳನ್ನು ಎದುರಿಸಿ, ಸಾಕಷ್ಟು ದೂರ ನಡೆದು, ಅಂತೂ ಇಂತೂ ಕಾಮ್ಯಕ ವನವನ್ನು ತಲುಪಿದರು.



## ವನವಾಸದ ಕಷ್ಟಗಳು

ತಾವು ಇರಬೇಕೆಂದುಕೊಂಡ ಕಾಮ್ಯಕ ವನದಲ್ಲಿ ಹೆಜ್ಜೆ ಹೆಜ್ಜೆಗೂ ಕಷ್ಟಗಳನ್ನು ಎದುರಿಸಬೇಕಾಯಿತು. ಕಾಡು ಪ್ರಾಣಿಗಳಿಂದ ರಾಕ್ಷಸರಿಂದ ಪದೇ ಪದೇ ತೊಂದರೆ ಉಂಟಾಗುತ್ತಿತ್ತು. ಆದರೂ ಆ ವನ ತುಂಬಾ ಸುಂದರವಾಗಿತ್ತು. ಸುತ್ತಲೂ ಹಸಿರು ಕಣ್ಣಿಗೆ ಹಬ್ಬಿದಂತಿತ್ತು.

ಇತ್ತ ಹಸ್ತಿನಾಪುರದಲ್ಲಿ ಪ್ರಜೆಗಳು ಧೃತರಾಷ್ಟ್ರ ಮತ್ತು ಅವನ ಮಕ್ಕಳನ್ನು ಪಾಂಡವರಿಗೆ ಮಾಡಿದ ಅನ್ಯಾಯಕ್ಕಾಗಿ ನಿಂದಿಸುತ್ತಿದ್ದರು. ಜನರು ತಮ್ಮ ಬಗ್ಗೆ ಹೇಗೆ ಕೆಟ್ಟದ್ದಾಗಿ ಮಾತಾಡಿಕೊಳ್ಳುತ್ತಿದ್ದಾರೆಂಬುದು ಧೃತರಾಷ್ಟ್ರನ ಕಿವಿಗೆ ಬಿತ್ತು. ಅವನಿಗೂ ಪಾಂಡವರಿಗಾದ ಅನ್ಯಾಯಕ್ಕಾಗಿ ಕೆಡುಕೆನಿಸಿತು. ಇದಕ್ಕೆ ಏನಾದರೂ ಪರಿಹಾರ ಹುಡುಕಬೇಕೆಂದು ವಿದುರನನ್ನು ಕರೆಸಿದ. ಅವನ ಸಲಹೆಯನ್ನು ಕೇಳಿದ.

ವಿದುರ ಧೃತರಾಷ್ಟ್ರನಿಗೆ ಬುದ್ಧಿ ಹೇಳಿದ. ತನ್ನ ಮಕ್ಕಳನ್ನು ಪಾಂಡವರೊಂದಿಗೆ ಕೂಡ ರಾಜ್ಯವಾಳಲು ಒಪ್ಪಿಸುವಂತೆ ಹೇಳಿದ. ಈ ಪ್ರಸ್ತಾಪವನ್ನು ಮುಂದಿಟ್ಟರೆ ಯುಧಿಷ್ಠಿರ ಒಳ್ಳೇ ಮನಸ್ಸಿನಿಂದ ಒಪ್ಪಿಕೊಳ್ಳುತ್ತಾನೆ ಎಂದು ತಿಳಿಸಿದ. ಧೃತರಾಷ್ಟ್ರನಿಗೂ ಇದು ಸರಿಯೆನಿಸಿತು. ವಿದುರನನ್ನೇ ಪಾಂಡವರ ಬಳಿಗೆ ಹೋಗಿ ಮನವೊಲಿಸಿ ಕರೆದು ತರುವಂತೆ ಕೇಳಿಕೊಂಡ.

ವಿದುರ ಶಾಂತಿದೂತನಾಗಿ ಪಾಂಡವರ ಕಡೆಗೆ ಹೊರಟ. ಆದರೆ ಅಲ್ಲಿ ತಲುಪಿದ ಮೇಲೆ ತನ್ನ ಮನಸ್ಸನ್ನು ಬದಲಾಯಿಸಿದ. ಅವರನ್ನು ಕರೆತರುವುದಕ್ಕೆ ಬದಲಾಗಿ ತಾನೇ ಅವರ ಜೊತೆ ಉಳಿಯುವುದಾಗಿ ಹೇಳಿದ.

ವಿದುರ ಬಾರದಿದ್ದುದನ್ನು ನೋಡಿ ಧೃತರಾಷ್ಟ್ರನಿಗೆ ಚಿಂತೆಯಾಯಿತು. ಪಾಂಡವರ ಜೊತೆಯಲ್ಲಿಯೇ ಇದ್ದು ಬಿಡುವ ಅವನ ನಿರ್ಧಾರದ ವಿಷಯ ತಿಳಿದಾಗ ಹೌಹಾರಿದ. ತನಗೆ ಇರುವ ಒಬ್ಬ ಆಪ್ತನೂ, ಮತಿವಂತನೂ ಹೀಗೆ ತನ್ನಿಂದ ದೂರವಾದರೆ ಹೇಗೆಂದು ಯೋಚಿಸಿದ. ಕೂಡಲೇ ಸಂಜಯನನ್ನು ಕರೆದು ವಿಷಯ ಏನೆಂದು ತಿಳಿದು, ಹೇಗಾದರೂ ಮಾಡಿ ವಿದುರನನ್ನು ಕರೆತರಲು ಹೇಳಿದ.

ಕೆಲ ದಿನಗಳ ನಂತರ ಮೈತ್ರೇಯ ಋಷಿ ಕಾಮ್ಯಕ ವನದಲ್ಲಿ ಪಾಂಡವರನ್ನು ಕಂಡು ಮಾತನಾಡಿಸಿದ. ಅವರ ದಯನೀಯ ಸ್ಥಿತಿಯನ್ನು ನೋಡಿದ. ದುರ್ಯೋಧನಾದಿಗಳಿಂದ ಒದಗಿದ ದುಸ್ಥಿತಿಯನ್ನು ನೋಡಿ ಪಾಂಡವರ ಬಗ್ಗೆ ದುಃಖವೆನಿಸಿತು. ಅವರನ್ನು ಈ ಸ್ಥಿತಿಗೆ ತಂದವರನ್ನು ಕಂಡು ಬುದ್ಧಿ ಹೇಳಬೇಕೆಂದು ಕೌರವನಲ್ಲಿಗೆ ಬಂದ. ದುರ್ಯೋಧನನಿಗೆ ಛೀಮಾರಿ ಹಾಕಿದ. ಆದರೆ ಇದರಿಂದ ದುರ್ಯೋಧನನಿಗೆ ಏನೂ ಅನಿಸಲೇ ಇಲ್ಲ. ಸಾಲದ್ದಕ್ಕೆ ಇದನ್ನೆಲ್ಲ ಹೇಳಿದ ಋಷಿಯ ಬಗ್ಗೆ ತಾತ್ಸಾರ ತೋರಿದ. ದುರ್ಯೋಧನನ ನಡವಳಿಕೆ ಕಂಡ ಋಷಿ ಕೋಪದಿಂದ ಕಿಡಿಕಾರುತ್ತ ಪಾಂಡವರ ಕೈಯ್ಯಿಂದ ಶಿಕ್ಷೆ ಅನುಭವಿಸುತ್ತೀ ಎಂದು ಶಾಪ ಹಾಕಿದ.

ಕಾಮ್ಯಕ ವನದಲ್ಲಿದ್ದಾಗ ಕಿರಮೀರನೆಂಬ ರಾಕ್ಷಸನ ಉಪಟಳ ಹೆಚ್ಚಾಯಿತು. ಭೀಮನೇ ಏಕಾಂಗಿಯಾಗಿ ಆ ರಾಕ್ಷಸನೊಡನೆ ಹೋರಾಡಿ ಕೊಂದು ಸೋದರರನ್ನು ರಕ್ಷಿಸಿದ.

ಕೃಷ್ಣನಿಗೆ ಪಾಂಡವರ ವನವಾಸದ ಸುದ್ದಿ ತಿಳಿದು ಬಹಳ ಚಿಂತಿಸಿದ. ಕೂಡಲೇ ಅವರನ್ನು ಕಂಡು ವಿಚಾರಿಸಲು ಕಾಮ್ಯಕ ವನಕ್ಕೆ ಬಂದ. ಅವರ ಸ್ಥಿತಿಗಾಗಿ ಮರುಗಿದ. ಪಾಂಡವರನ್ನು ಈ ಸ್ಥಿತಿಗೆ ತಂದ ದುರ್ಯೋಧನನಿಗೆ ಶಿಕ್ಷೆಯಾಗಲೇಬೇಕೆನಿಸಿ, ತನ್ನೆಲ್ಲ ಮಿತ್ರರಾಜರಿಗೆ, ಕೌರವರಿಗೆ ಪಾಠ ಕಲಿಸಲು ಅವರೆಲ್ಲ ಒಟ್ಟಾಗಿ ಪಾಂಡವರಿಗೆ ಸಹಕರಿಸಲು ಕೋರಿದ. ದ್ಯೂತದ ಸಮಯದಲ್ಲಿ ತಾನು ಇಲ್ಲದೆ ಹೋದುದಕ್ಕಾಗಿ ಪರಿತಪಿಸಿದ. ಭಾರವಾದ ಹೃದಯದಿಂದ ಪಾಂಡವರಿಂದ ಬೀಳ್ಕೊಂಡು ದ್ವಾರಕೆಗೆ ಹೋದ.

ಕೃಷ್ಣನನ್ನು ಕಳಿಸಿಕೊಟ್ಟ ಮೇಲೆ ಎಲ್ಲಾದರೂ ನಿರ್ಜನ ಪ್ರದೇಶದಲ್ಲಿ ವಾಸಿಸಬೇಕೆಂದುಕೊಂಡು ಕಾಮ್ಯಕ ವನವನ್ನು ಬಿಟ್ಟು ದ್ವೈತವನವನ್ನು ತಲುಪಿ, ಅಲ್ಲಿಯೇ ಉಳಿದುಕೊಳ್ಳಲು ನಿರ್ಧರಿಸಿದರು.

ದ್ರೌಪದಿಗೆ ಯಾವಾಗಲೂ ಕೃಷ್ಣನದೇ ಧ್ಯಾನ. ಅವನೇ ಅವರಿಗೆ ಸಮಾಧಾನ. ಅಧೀರರಾದಾಗಲೆಲ್ಲ ಕೃಷ್ಣ ಬಂದು ಧೈರ್ಯ ತುಂಬುತ್ತಿದ್ದ. ತಮ್ಮ ಗುರಿಯನ್ನು ಸಾಧಿಸಬೇಕಾದರೆ ಕಷ್ಟಗಳು ಅನಿವಾರ್ಯವೆಂದು ತಿಳಿಸುತ್ತಿದ್ದ. ಆದರೆ ದ್ರೌಪದಿಗೆ, ತನಗಾದ ಅವಮಾನ, ಹಿಂಸೆಗಳನ್ನು ಮರೆಯಲು ಸಾಧ್ಯವಾಗಿರಲಿಲ್ಲ. ತಾನು ಮಾಡಿದ ಅಪರಾಧಕ್ಕೆ, ಅನ್ಯಾಯಕ್ಕೆ ದುರ್ಯೋಧನ ಶಿಕ್ಷೆಯನ್ನು ಅನುಭವಿಸುವವರೆಗೆ ತಾನು ನೆಮ್ಮದಿಯಿಂದ ಇರಲು ಸಾಧ್ಯವಿಲ್ಲವೆಂದಳು.

ಯುಧಿಷ್ಠಿರನ ರೀತಿಯೇ ಬೇರೆ. ಅವನು ಯಾವುದಕ್ಕೂ, ಎಂದಿಗೂ ವಿಚಲಿತನಾಗುತ್ತಿರಲಿಲ್ಲ. ಶಾಂತ ಮನಸ್ಸಿನಿಂದಲೇ ಎಲ್ಲವನ್ನೂ ಸ್ವೀಕರಿಸುತ್ತಿದ್ದ.

ಒಮ್ಮೆ ಅಧ್ಯಾತ್ಮ ಚಿಂತನೆಯಲ್ಲಿ ಮಗ್ನನಾಗಿ ಇದ್ದಾಗ, ಇದ್ದಕ್ಕಿದ್ದಂತೆ ಅವನಲ್ಲಿ ಒಂದು ವಿಚಾರ ಹೊಳೆಯಿತು. ಒಂದು ವೇಳೆ ಯುದ್ಧ ಸಂಭವಿಸಿದರೆ, ಕೃಪ, ಕೃತವರ್ಮ, ಭೀಷ್ಮ ಮೊದಲಾದ ಅತಿರಥ ಮಹಾರಥರನ್ನು ಎದುರಿಸಲು ದಿವ್ಯಾಸ್ತ್ರಗಳ, ವಿಶೇಷವಾದ ಶಸ್ತ್ರಾಸ್ತ್ರಗಳ ಅವಶ್ಯಕತೆಯಿದೆ ಎನಿಸಿತು. ಇದನ್ನು ಸಾಧಿಸಲು ಅರ್ಜುನನೊಬ್ಬನೇ ಸಮರ್ಥ ಎನಿಸಿ, ಅವನನ್ನು ಕರೆದು ತನ್ನಾಶಯವನ್ನು ತಿಳಿಸಿದ.

ಅರ್ಜುನ ಕೂಡಲೇ ಅಣ್ಣನ ಮಾತಿಗೆ ತಲೆಬಾಗಿ, ಅವನಿಂದ ಆಶೀರ್ವಾದ ಪಡೆದು ತನ್ನ ಧ್ಯೇಯ ಸಾಧನಗೆಂದು ಹೊರಟ. ಉಳಿದ ಪಾಂಡವ ಸೋದರರೂ ತೀರ್ಥಯಾತ್ರೆಗೆಂದು ಹೊರಟರು.



## ಭೀಮ–ಹನುಮಂತರ ಭೇಟಿ

ಪಾಂಡವರು ಅನೇಕ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿದರು. ಪುಣ್ಯ ತೀರ್ಥಗಳಲ್ಲಿ ಸ್ನಾನ ಮಾಡಿದರು. ಕಡೆಗೆ ಬದರಿಕಾಶ್ರಮವನ್ನು ತಲುಪಿ ಅಲ್ಲಿ ಕೆಲದಿನಗಳು ಉಳಿಯಲು ಯೋಚಿಸಿದರು. ಹಾಗೆಯೇ ಅರ್ಜುನನ ಬರವನ್ನೂ ನಿರೀಕ್ಷಿಸಿದರು.

ಒಂದು ದಿನ ಅವರೆಲ್ಲ ಆರಾಮವಾಗಿ ಹೊರಗೆ ಕುಳಿತಿರಲು, ಎಲ್ಲಿಂದಲೋ ಹೂಕಂಪನ್ನು ಹೊತ್ತ ಗಾಳಿ ಬೀಸಿತು. ದ್ರೌಪದಿಗೆ ಹೂಗಂಪೆಂಬುದು ತಿಳಿಯಿತಾದರೂ ಯಾವ ಹೂವಿನದು, ಹೂವೆಲ್ಲಿದೆ ಎಂದು ಯೋಚಿಸುತ್ತಾ, ಆ ಕಡೆ ಈ ಕಡೆ ಕಣ್ಣಾಡಿಸಿದಾಗ ಸೌಗಂಧಿಕ ಪುಷ್ಪವೊಂದು ನೆಲದ ಮೇಲೆ ಬಿದ್ದಿರುವುದು ಗಮನಕ್ಕೆ ಬಂತು. ಅದನ್ನು ತೆಗೆದುಕೊಂಡು ಮತ್ತೆ ಮೂಸಿ ನೋಡಿ ಆನಂದಿಸಿದಳು. ಅವಳಿಗೆ ಇನ್ನಷ್ಟು ಹೂಗಳು ಬೇಕೆನಿಸಿ ಭೀಮನ ಬಳಿಗೆ ಹೋಗಿ ತನ್ನಾಸೆಯನ್ನು ಹೇಳಿಕೊಂಡಳು. ಭೀಮನಿಗಾದರೋ ದ್ರೌಪದಿಯೆಂದರೆ ಪಂಚಪ್ರಾಣ. ಈ ಒಂದು ಸಣ್ಣ ಕೋರಿಕೆಯನ್ನು ತೀರಿಸಲೇ ಬೇಕೆಂದುಕೊಂಡು, ಆ ಸೌಗಂಧಿಕ ಪುಷ್ಪವನ್ನು ಹುಡುಕುತ್ತಾ ಹೊರಟ. ಜೀವನದಲ್ಲಿ ಎಷ್ಟೊಂದು ನೋವನ್ನು ಅನುಭವಿಸಿದವಳಿಗೆ, ಈ ಸಣ್ಣ ಸಂತೋಷವನ್ನು ಹೇಗಾದರೂ ಪೂರೈಸಲೇಬೇಕೆಂಬ ನಿರ್ಧಾರದೊಂದಿಗೆ ಹೊರಬಿದ್ದನಾದ್ದರಿಂದ ಕಾಡು, ಮೇಡು, ಬೆಟ್ಟ ಗುಡ್ಡ ಯಾವುದನ್ನೂ ಲೆಕ್ಕಿಸದೆ ಅಲೆದ! ಅಲೆದ!! ಆದರೆ ಎಷ್ಟೇ ದೂರ ಅಲೆದಾಡಿದರೂ ಹೂವಿನ ಸುಳಿವೇ ಇರಲಿಲ್ಲ.

ಒಂದಷ್ಟು ದೂರ ಮತ್ತೆ ಪ್ರಯತ್ನಿಸುತ್ತಾ ನಡೆದ. ಆಶ್ಚರ್ಯ! ಇವನ ಹಾದಿಗೆ ಅಡ್ಡಲಾಗಿ ಬಾಲವೊಂದು ಕಾಣಿಸಿತು. ಈ ಬಾಲ ಯಾರದೆಂದು ನೋಡಿದಾಗ ಮುದಿಕೋತಿಯೊಂದು ನಿರಾಳವಾಗಿ ಒರಗಿ ಕುಳಿತಿತ್ತು.

ಭೀಮನಿಗೆ ಬಾಲದ ಆಚೆ ಬದಿಗೆ ಹೋಗಬೇಕಿತ್ತು. ಮನಸ್ಸು ಮಾಡಿದ್ದರೆ ಅದರ ಮೇಲೆ ಹೆಜ್ಜೆ ಇಟ್ಟೋ, ಅದನ್ನು ದಾಟಿಕೊಂಡೋ ಹೋಗಬಹುದಾಗಿತ್ತು. ಆದರೆ ಅವನು ಹಾಗೆ ಮಾಡಲಿಲ್ಲ. ಭೀಮ ಕಪಿಯನ್ನು ಕುರಿತು, "ಏ ಕಪಿಯೇ, ನಿನಗೆ ಅರ್ಥವಾಗುವುದಿಲ್ಲವೇನು? ಹೀಗೆ ಅಡ್ಡಲಾಗಿ ಬಾಲವನ್ನಿಟ್ಟರೆ ನಾವು ಹೋಗುವುದಾದರೂ ಹೇಗೆ? ದಯವಿಟ್ಟು ಬಾಲವನ್ನು ಮುದುರಿಕೋ. ನನಗೆ ಹೋಗಲು ಬಿಡು" ಎಂದ.

ಆ ಕಪಿ ಅದಕ್ಕೆ, "ಅಯ್ಯಾ ಕಾಣಿಸುತ್ತಿಲ್ಲವೇ ನನ್ನ ಆರೋಗ್ಯ ಸರಿ ಇಲ್ಲ; ಶಕ್ತಿಯೂ ಇಲ್ಲ. ಅಲ್ಲದೆ ನಾನೊಬ್ಬ ಮುದಿಜೀವ. ಇಲ್ಲಿಂದ ಕದಲುವುದಕ್ಕೇ ಸಾದ್ಯವಿಲ್ಲ. ನಿನಗೆ ಅಭ್ಯಂತರವಿಲ್ಲವಾದರೆ ನೀನೇ ನನ್ನ ಬಾಲವನ್ನು ಸ್ವಲ್ಪ ಬದಿಗೆ ಸರಿಸಿ ಮುಂದಕ್ಕೆ ಹೋಗು" ಎಂದು ಬಹಳ ಸುಸ್ತಾದವನಂತೆ ಹೇಳಿದ.

ಭೀಮನಿಗೆ ತನ್ನ ಬಲಾಬಲಗಳ ಮೇಲೆ ಬಹಳ ವಿಶ್ವಾಸ; ಹೆಮ್ಮೆ; ಅದಕ್ಕೆಂದೇ, ಈ ಬಾಲವನ್ನು ಪಕ್ಕಕ್ಕೆ ಸರಿಸುವುದು ಮಹಾ ಎಷ್ಟರ ಕೆಲಸ; ಅದು ತನಗೆ ಮಕ್ಕಳಾಟಿಕೆಯಷ್ಟೇ ಸುಲಭ ಎಂದುಕೊಂಡು ಬಾಲಕ್ಕೆ ಕೈ ಹಾಕಿ ಎತ್ತಲು ಪ್ರಯತ್ನಿಸಿದ. ಬಾಲ ಒಂದಂಗುಲವೂ ಅಲುಗಾಡಲಿಲ್ಲ. ಅವನಿಗೆ ಆಶ್ಚರ್ಯವಾಯಿತು. ಮತ್ತೊಮ್ಮೆ ಪ್ರಯತ್ನಿಸಿದ; ಮಗದೊಮ್ಮೆ ಪ್ರಯತ್ನಿಸಿದ. ಉಹುಂ! ಬಾಲ ಕದಲಲೇ ಇಲ್ಲ!! ಅವನಿಗೆ ಅರ್ಥವಾಯಿತು. ಇದು ಸಾಮಾನ್ಯ ಕಪಿಯಲ್ಲ; ಯಾವುದೋ ದೇವತೆ ಅಥವಾ ರಾಮಬಂಟ ಇರಬೇಕೆಂದುಕೊಂಡು ವಿನಯದಿಂದ, "ಕಪಿ ಶ್ರೇಷ್ಠ. ನೀನು ಸಾಮಾನ್ಯ ಕಪಿಯಲ್ಲ. ನಿನ್ನ ಶಕ್ತಿಯೇನೆಂದು ಅರ್ಥ ಮಾಡಿಕೊಂಡು ಇದ್ದೇನೆ. ದಯವಿಟ್ಟು ನೀನಾರೆಂಬುದನ್ನು ತಿಳಿಸು; ನನ್ನ ಉದ್ಧಟತನವನ್ನು ಕ್ಷಮಿಸು.".

ಹನುಮಂತನಿಗೆ ಸಂತೋಷವಾಯಿತು. ತನ್ನ ಅದ್ಭುತ ರೂಪವನ್ನು ತೋರಿದ. ಭೀಮನನ್ನು ಪ್ರೀತಿಯಿಂದ ಆಲಂಗಿಸಿಕೊಂಡ. "ಭೀಮ, ನೀನು ನಾನು ಇಬ್ಬರೂ ಸೋದರರು, ಒಬ್ಬನೇ ತಂದೆಗೆ ಹುಟ್ಟಿದವರು;

ವಾಯುಪುತ್ರರು. ನಾನು ಶ್ರೀರಾಮನ ಭಕ್ತನೂ ಹೌದು" ಎಂದು ತಮ್ಮಿಬ್ಬರ ಸಂಬಂಧವನ್ನು ವಿವರಿಸಿ ತಿಳಿಸಿದ.

ಹನುಮಂತನ ವಿಚಾರ ತಿಳಿದು ಭೀಮನಿಗೆ ಸಂತೋಷವಾಯಿತು. ಅವನ ಪಾದ ಮುಟ್ಟಿ ನಮಸ್ಕರಿಸಿದ. "ಸೋದರ ನಾನು ಇಲ್ಲಿಗೆ ಸೌಗಂಧಿಕ ಪುಷ್ಪವನ್ನು ಹುಡುಕುತ್ತಾ ಬಂದಿದ್ದೇನೆ. ನಿನಗೆ ತಿಳಿದಿದ್ದರೆ ಅದು ಇರುವ ಸ್ಥಳವನ್ನು ದಯಮಾಡಿ ತಿಳಿಸು" ಎಂದು ಪ್ರಾರ್ಥಿಸಿದ. ಹನುಮಂತ ಸೌಗಂಧಿಕ ಪರ್ವತದ ಮೇಲಿರುವ ಕುಬೇರನ ತೋಟದಲ್ಲಿ ಈ ಹೂಗಳು ದೊರೆಯುವುದನ್ನು ತಿಳಿಸಿ ಅಲ್ಲಿಗೆ ತಲುಪುವ ಮಾರ್ಗವನ್ನೂ ತೋರಿಸಿದ.

ಭೀಮ ಅಲ್ಲಿಗೆ ತಲುಪಿದ. ಸೌಗಂಧಿಕ ಹೂಗಳ ರಾಶಿಯನ್ನು ನೋಡಿ ಹಿಗ್ಗಿದ. ಕೆಲವನ್ನು ಕಿತ್ತುಕೊಳ್ಳಲು ಪ್ರಯತ್ನಿಸಿದ. ಅಷ್ಟರಲ್ಲಿ ಕುಬೇರನ ಸೇವಕರು, ರಕ್ಷಕರು ಅಲ್ಲಿಗೆ ಬಂದು ಅವನನ್ನು ತಡೆದರು. ಆದರೂ ಭೀಮ ಹೂ ಕೊಯ್ಯುವುದನ್ನು ನಿಲ್ಲಿಸಲಿಲ್ಲ. ಅದರಿಂದಾಗಿ ಅವರು ಹೋಗಿ ಕುಬೇರನಿಗೆ ತಿಳಿಸಿದರು. ಕುಬೇರನೇ ಸ್ವತಃ ಅಲ್ಲಿಗೆ ಬಂದ. ಭೀಮನಿಂದ ಎಲ್ಲ ಕೇಳಿದ ಮೇಲೆ ಅವನು ಹೂ ಕೊಯ್ದುಕೊಳ್ಳಲು ಅಪ್ಪಣೆ ಕೊಟ್ಟ ಅವನಿಗೆ ಬೇಕಾದಷ್ಟು ತೆಗೆದುಕೊಳ್ಳಬಹುದೆಂದು ಹೇಳಿ ಹೋದ.

ಭೀಮ ಸೌಗಂಧಿಕ ಹೂಗಳನ್ನು ತಂದು ದ್ರೌಪದಿಗೆ ನೀಡಿದ. ತನ್ನ ಹತ್ತಿರವಿದ್ದ ಹೂಸಂಪತ್ತಿಗಾಗಿ ಹಿರಿಹಿರಿ ಹಿಗ್ಗಿದಳು.



# ದೂರ್ವಾಸಾತಿಥ್ಯ

ಪಾಂಡವರು ಕಾಮ್ಯಕವನದಿಂದ ಹೊರಟು ದ್ವೈತವನದಲ್ಲಿ ವಾಸಿಸುತ್ತಿದ್ದರು. ಸೂರ್ಯದೇವ ಅವರ ಆಹಾರ ಸಮಸ್ಯೆಯನ್ನು ಹೋಗಲಾಡಿಸಿಕೊಳ್ಳಲು ಅವರಿಗೆ ಒಂದು ಅಕ್ಷಯ ಪಾತ್ರೆಯನ್ನು ನೀಡಿದ್ದ. ಇದು ಅವರಿಗೆ ಬಹುದೊಡ್ಡ ವರವಾಗಿತ್ತು.

ಇತ್ತ ಹಸ್ತಿನಾಪುರದಲ್ಲಿ ಕೌರವ ಸೋದರರು ಪಾಂಡವರ ವನವಾಸದಿಂದ ಸಂತೋಷಗೊಂಡಿದ್ದರು. ತಮ್ಮ ಸಿರಿ ಸಂಪತ್ತು ವೈಭವಗಳನ್ನು ಮೆರೆಸಲು ಯಾವುದಾದರೂ ಯಜ್ಞಮಾಡಿ, ಸೇಡು ತೀರಿಸಿಕೊಳ್ಳಬೇಕೆಂದು ಆಲೋಚಿಸಿದರು. ಅವರು ರಾಜಸೂಯ ಮಾಡಿದ್ದಕ್ಕಿಂತಲೂ ಅದ್ದೂರಿಯಾಗಿ ಮಾಡಿ ಅವರಲ್ಲಿ ಅಸೂಯೆಯುಂಟಾಗುವಂತೆ ಮಾಡಬೇಕೆಂದುಕೊಂಡರು. ಆದರೆ ಪಾಂಡವರು ವನವಾಸದಲ್ಲಿ ಇರುವುದರಿಂದ ಅವರಿಗೆ ನೋಡಲಾಗುವುದಿಲ್ಲವಲ್ಲ ಎಂದು ಪೇಚಾಡಿ ಸುಮ್ಮನಾದರು.

ಒಮ್ಮೆ ದೂರ್ವಾಸರು ತಮ್ಮ ಹತ್ತಿ ಸಾವಿರ ಶಿಷ್ಯರನ್ನು ಕರೆದುಕೊಂಡು ಹಸ್ತಿನಾಪುರಕ್ಕೆ ಬಂದರು. ದೂರ್ವಾಸರು ಬಹಳ ಮುಂಗೋಪಿಗಳಾಗಿದ್ದರು. ಯಾವುದೇ ಸಣ್ಣ ವಿಷಯಕ್ಕೂ ಸಿಟ್ಟಾಗಿ, ಯಾರೆಂದು ಗಮನಿಸದೆ ಶಾಪಕೊಟ್ಟು ಬಿಡುತ್ತಿದ್ದರು. ದುರ್ಯೋಧನನಿಗೆ ಅವರ ಈ ಸ್ವಭಾವ ಗೊತ್ತಿತ್ತು. ಆದ್ದರಿಂದ ದೂರ್ವಾಸರನ್ನು ಬಹಳ ಗೌರವ ಎಚ್ಚರಿಕೆಗಳಿಂದ ಸತ್ಕರಿಸಿ ಸಂತೋಷಗೊಳಿಸಿದ. ದೂರ್ವಾಸರಿಗೆ ದುರ್ಯೋಧನನ ಅತಿಥಿ ಸತ್ಕಾರ ಮೆಚ್ಚುಗೆಯಾಯಿತು. ಅದಕ್ಕಾಗಿ ಅವನಿಗೆ ವರಗಳನ್ನು ಕೊಡಬೇಕೆನಿಸಿ, ಅವನನ್ನು ಕರೆದು ವರಗಳನ್ನು ಕೇಳುವಂತೆ ಹೇಳಿದರು. ಅದಕ್ಕೆ ದುರ್ಯೋಧನ ಅತಿ ವಿನಯದಿಂದ "ಋಷಿವರ್ಯರೇ,

ನಿಮ್ಮ ಆಶೀರ್ವಾದ ಒಂದೇ ನನಗೆ ವರವಾಗಿದೆ. ನಿಮ್ಮಂಥವರ ಸೇವೆ, ಸತ್ಕಾರ ಮಾಡಲು ನನಗೆ ಅವಕಾಶ ಕೊಟ್ಟಿರುವುದೇ ದೊಡ್ಡದು. ನಿಜವಾಗಿಯೂ ನಿಮ್ಮ ಬರವಿನಿಂದ ನನ್ನ ಅಂತಸ್ತು ಬೆಳೆದಿದೆ. ನಿಜವಾಗಿಯೂ ನೀವು ವರವನ್ನು ನೀಡಬೇಕೆಂದರೆ ನಾನೇನೂ ಕೇಳುವುದಿಲ್ಲ. ವನವಾಸದಲ್ಲಿರುವ ನನ್ನ ದಾಯಾದಿ ಸೋದರರಾದ ಪಾಂಡವರ ಆತಿಥ್ಯವನ್ನು ಪಡೆದು ಅವರನ್ನು ಆಶೀರ್ವದಿಸಿದರೆ ಅದೇ ನನಗೆ ವರ" ಎಂದು ವಿನಯದಿಂದ ಕೇಳಿಕೊಂಡ. ಅಲ್ಲದೆ ದೂರ್ವಾಸರು ಯಾವ ವೇಳೆಗೆ ಅಲ್ಲಿಗೆ ಹೋಗಬೇಕೆಂದು ಹೇಳುವುದನ್ನೂ ಮರೆಯಲಿಲ್ಲ. ಪಾಂಡವರು ಊಟ ಮುಗಿಸಿದ ಮೇಲಾದರೆ ಅವರಿಗೆ, ಕೊಡಲು ಏನೂ ಇರುವುದಿಲ್ಲ. ಅಷ್ಟೊಂದು ಮಂದಿಗೆ ಆತಿಥ್ಯ ನೀಡಲು ಸಾಧ್ಯವಾಗದೆ ಋಷಿಗಳ ಕೋಪಕ್ಕೆ, ಶಾಪಕ್ಕೆ ಗುರಿಯಾಗುತ್ತಾರೆ ಎಂಬುದೇ ಅವನ ಲೆಕ್ಕಾಚಾರವಾಗಿತ್ತು. ದುರ್ಯೋಧನನ ಪ್ರಾರ್ಥನೆಯಂತೆ ದೂರ್ವಾಸರು ತಮ್ಮ ಶಿಷ್ಯಂದಿರನ್ನು ಕರೆದುಕೊಂಡು ಯುಧಿಷ್ಠಿರನಲ್ಲಿಗೆ ಹೋದರು. ಪಾಂಡವರು ಅಷ್ಟು ಹೊತ್ತಿಗೆ ಊಟ ಮಾಡಿ, ಪಾತ್ರೆಯನ್ನು ತೊಳೆದಿಟ್ಟು ವಿಶ್ರಾಂತಿ ಪಡೆಯುತ್ತಿದ್ದರು.

ಯುಧಿಷ್ಠರ ದೂರ್ವಾಸ ಮಹರ್ಷಿಗಳು ತಮ್ಮ ಶಿಷ್ಯರೊಂದಿಗೆ ಬಂದಿರುವುದನ್ನು ನೋಡಿ ಸಂತೋಷವೂ ಆಶ್ಚರ್ಯವೂ ಆಗಿದ್ದರೂ ಭಕ್ತಿಯಿಂದ ಗೌರವದಿಂದ ಅವರೆಲ್ಲರನ್ನೂ ಸ್ವಾಗತಿಸಿದ. ದೂರ್ವಾಸರಿಗೂ ಯುಧಿಷ್ಠಿರನನ್ನು ನೋಡಿ ಸಂತೋಷವಾಯಿತು. "ಯುಧಿಷ್ಠಿರ ನಿನ್ನ ಆತಿಥ್ಯವನ್ನು ಸ್ವೀಕರಿಸಲು ನಾವಿಲ್ಲಿ ಬಂದಿದ್ದೇವೆ. ನಾವು ನದೀ ತೀರಕ್ಕೆ ಹೋಗಿ ಸ್ನಾನಾದಿಗಳನ್ನು ಮುಗಿಸಿಕೊಂಡು ಬರುತ್ತೇವೆ. ನಂತರ ಊಟ ಮಾಡುತ್ತೇವೆ" ಎಂದು ಹೇಳಿ ಶಿಷ್ಯರೊಂದಿಗೆ ನದಿ ಕಡೆ ಹೊರಟರು.

ಊಟ, ಆತಿಥ್ಯ ಎಂದು ಕೇಳಿದ್ದೇ ಯುಧಿಷ್ಠಿರ ಕುಸಿದು ಹೋದ. ತಾವೆಲ್ಲರೂ ಊಟ ಮಾಡಿ ಅಕ್ಷಯ ಪಾತ್ರೆಯನ್ನು ತೊಳೆದಿಟ್ಟಾಗಿದೆ. ಒಮ್ಮೆ ಅದರಿಂದ ಆಹಾರ ಪಡೆದ ಮೇಲೆ ಮರು ದಿವಸದವರೆಗೆ ಅದನ್ನು ಬೇಡುವಂತಿಲ್ಲ. ದ್ರೌಪದಿಗೂ ಗಾಬರಿಯಾಯಿತು. ಏನು

ಮಾಡಬೇಕೆಂದು ತೋಚಲಿಲ್ಲ. ಈ ಸಂದಿಗ್ಧ ಸಮಯದಲ್ಲಿ ಕೃಷ್ಣನಲ್ಲದೆ ಬೇರೆ ಯಾರೂ ತಮ್ಮ ಸಮಸ್ಯೆಯನ್ನು ಪರಿಹರಿಸಲಾರರು ಎಂದು ಅವನನ್ನು ಸ್ಮರಿಸಿಕೊಂಡರು. ಕೂಡಲೇ ಕೃಷ್ಣ ಅಲ್ಲಿಗೆ ಬಂದು ವಿಷಯವೇನೆಂದು ವಿಚಾರಿಸಿದ. ಪಾಂಡವರು ತಮಗೆ ಬಂದ ಸಂಕಟವನ್ನು ವಿವರಿಸಿದರು. ಕೃಷ್ಣ ಒಂದರೆ ಕ್ಷಣವೂ ಯೋಚಿಸದೆ ಅವರನ್ನು ಅಕ್ಷಯಪಾತ್ರೆ ತಂದುಕೊಡಲು ಹೇಳಿದ. ಅವರಿಗೆ ಅರ್ಥವಾಗಲಿಲ್ಲ. ಅನುಮಾನಿಸುತ್ತಲೇ, "ಕೃಷ್ಣ ನಿನಗೂ ನಮ್ಮನ್ನು ಕಂಡರೆ ತಮಾಷೆಯೇ? ನಿನಗೂ ಗೊತ್ತಿದೆ ಅಕ್ಷಯ ಪಾತ್ರೆ ಒಮ್ಮೆ ನೀಡಿದ ಮೇಲೆ ಮತ್ತೆ ಅದರಿಂದ ಪಡೆಯಲು ಸಾಧ್ಯವಿಲ್ಲ. ಅಲ್ಲದೆ ಅದನ್ನು ಈಗಾಗಲೇ ಶುಭ್ರವಾಗಿ ತೊಳೆದು ಇರಿಸಿದ್ದೇನೆ. ಇನ್ನು ನಾಳೆಯವರೆವಿಗೂ ಅದನ್ನು ಆಹಾರಕ್ಕೆ ಬಳಸುವ ಹಾಗಿಲ್ಲ" ಎಂದು ದ್ರೌಪದಿ ಕೃಷ್ಣನಲ್ಲಿ ತನ್ನ ಅಸಹಾಯಕತೆಯನ್ನು ಹೇಳಿಕೊಂಡಳು. ಕೃಷ್ಣ ನಗುತ್ತಲೇ, "ಕೃಷ್ಣೇ ಹೋಗು, ಆ ಪಾತ್ರೆ ತೆಗೆದುಕೊಂಡು ಬಾ. ನೀನು ಹೇಗೆ ತೊಳೆದಿರುವಿ ಎಂದು ಪರೀಕ್ಷಿಸುತ್ತೇನೆ" ಎಂದ.

ದ್ರೌಪದಿಗೆ, ಪಾಂಡವರಿಗೆ ಕೃಷ್ಣನ ರೀತಿ ಅರ್ಥವಾಗಲಿಲ್ಲವಾದರೂ ಅವನ ಸಾಮರ್ಥ್ಯದ ಬಗ್ಗೆ, ಅವನ ದೈವಶಕ್ತಿಯ ಬಗ್ಗೆ ನಂಬಿಕೆ ಇತ್ತು. ತಮ್ಮೆಲ್ಲ ಕಷ್ಟದ ಕ್ಷಣಗಳಲ್ಲಿ ಅವನೇ ತಮ್ಮ ರಕ್ಷಕನಾಗಿದ್ದ. ಆದ್ದರಿಂದ ಮರು ಮಾತಾಡದೆ ಪಾತ್ರೆಯನ್ನು ತಂದುಕೊಟ್ಟಳು.

ಕೃಷ್ಣ ಪಾತ್ರೆಯನ್ನು ಪರೀಕ್ಷಿಸಿದ. ಅದರ ಯಾವುದೋ ಒಂದು ಮೂಲೆಯಲ್ಲಿ ಅಗುಳು ಇರುವುದನ್ನು ಗಮನಿಸಿ ಕೈಗೆತ್ತಿಕೊಂಡು ನೋಡಿ ಬಾಯಿಗೆ ಹಾಕಿಕೊಂಡ. ಅವರೆಲ್ಲರೂ ಮೌನವಾಗಿ ಕೃಷ್ಣನು ಮಾಡುವುದನ್ನು ನೋಡುತ್ತ ನಿಂತಿದ್ದರು.

ಸ್ನಾನ ಮಾಡಿ ಹಿಂತಿರುಗಿದ ದೂರ್ವಾಸರು, ಶಿಷ್ಯರು ದಾರಿಯಲ್ಲಿಯೇ ಹೊಟ್ಟೆಭಾರ ಅನುಭವಿಸಿದರು, ತೇಗಿದರು. ಅವರಿಗೆ ಊಟ ಮಾಡಬೇಕು ಎನಿಸಲಿಲ್ಲ. ಈ ವಿಚಿತ್ರ ಅನುಭವದಿಂದ ಬೆರಗಾದ ದೂರ್ವಾಸರು ತಮ್ಮ ದಿವ್ಯ ದೃಷ್ಟಿಯಿಂದ ಕಾರಣ ತಿಳಿದುಕೊಂಡರು. ಪಾಂಡವರಿದ್ದಲ್ಲಿಗೆ ಹಿಂತಿರುಗಿ ಬಂದಾಗ ಕೃಷ್ಣನು ಅಲ್ಲಿದ್ದುದನ್ನು ನೋಡಿದ ಮೇಲೆ ಕಾರಣ

ಇನ್ನಷ್ಟು ಸ್ಪಷ್ಟವಾಯಿತು. ಇದೆಲ್ಲವೂ ಕೃಷ್ಣನ ಕೈವಾಡವೆನಿಸಿತು. ಕೃಷ್ಣನಿಗೆ ಗೌರವ ಸೂಚಿಸಿ ಕೃಷ್ಣನಂತಹವನ ಅನುಗ್ರಹಕ್ಕೆ ಪಾತ್ರರಾದ ಪಾಂಡವರ ಅದೃಷ್ಟವನ್ನು ಕೊಂಡಾಡಿ, ಮನಸಾರೆ ಅವರನ್ನು ಆಶೀರ್ವದಿಸಿ ಹಿಂತಿರುಗಿದರು. ಪಾಂಡವರೂ ಆಪತ್ಬಂಧುವಾಗಿ ಬಂದ ತಮ್ಮನ್ನು ದೂರ್ವಾಸರ ಅನುಗ್ರಹದಿಂದ ತಪ್ಪಿಸಿದ್ದಕ್ಕೆ ಕೃತಜ್ಞತೆ ಹೇಳಿ ಕೃಷ್ಣನನ್ನು ಬೀಳ್ಕೊಟ್ಟರು.



## ಅರ್ಜುನ ದಿವ್ಯಾಸ್ತ್ರಗಳನ್ನು ಪಡೆದದ್ದು

ಅರ್ಜುನ ಆಶ್ರಮವನ್ನು ಬಿಟ್ಟು ಹೊರಟು ಹಲವು ದಿನಗಳು ನಡೆದು, ಕಡೆಗೆ ಹಿಮಾಲಯವನ್ನು ತಲುಪಿದ. ದೇವತೆಗಳನ್ನು ಒಲಿಸಿಕೊಳ್ಳಲು ತಪಸ್ಸಿಗೆ ಕುಳಿತ. ಹೇಗಾದರೂ ದೇವತೆಗಳನ್ನು ಸಂಪ್ರೀತಗೊಳಿಸಿ ಅವರಿಂದ ಶಸ್ತ್ರಾಸ್ತ್ರಗಳನ್ನು ಪಡೆಯುವುದು ಅವನ ಉದ್ದೇಶವಾಗಿತ್ತು.

ಮೊದಲು ಇಂದ್ರಕೀಲ ಪರ್ವತದೆಡೆಗೆ ನಡೆದ. ದಾರಿಯಲ್ಲಿ ಒಬ್ಬ ಬ್ರಾಹ್ಮಣ ಎದುರಾದ, ಅರ್ಜುನನೊಂದಿಗೆ ಮಾತಾಡಿ ತಾನು ಬಂದ ಉದ್ದೇಶ ತಿಳಿಸಿ, ತಾನು ಅವನ ತಂದೆ ಇಂದ್ರನೆಂಬುದನ್ನು ಪ್ರಕಟಪಡಿಸಿದ. ಮಗನಿಗೆ ಆಶೀರ್ವದಿಸಿ, ಮೊದಲು ಶಿವನನ್ನು ಕುರಿತು ತಪಸ್ಸು ಮಾಡುವಂತೆ ಹೇಳಿದ.

ಅರ್ಜುನ ತಂದೆ ಇಂದ್ರನ ಸಲಹೆಯಂತೆ ಶಿವನನ್ನು ಕುರಿತು ತಪಸ್ಸು ಮಾಡಿದ.

ಅರ್ಜುನನ ತಪಸ್ಸಿಗೆ ಶಿವ ಮೆಚ್ಚಿದ. ಪಾರ್ವತಿಯನ್ನು ಜೊತೆಯಾಗಿ ಕರೆದುಕೊಂಡು ಅರ್ಜುನ ತಪಸ್ಸು ಮಾಡುತ್ತಿದ್ದ ವನಪ್ರಾಂತಕ್ಕೆ ಬಂದ. ಅವರಿಬ್ಬರೂ ಬೇಡ ದಂಪತಿಗಳ ವೇಷದಲ್ಲಿದ್ದರು.

ಸ್ವಲ್ಪ ಹೊತ್ತಿನಲ್ಲಿ ಹಂದಿಯೊಂದು ಅರ್ಜುನನಿದ್ದೆಡೆಗೆ ಬಂದು ಅವನ ಮೇಲೆ ಆಕ್ರಮಣ ಮಾಡಿತು. ಎಚ್ಚೆತ್ತ ಅರ್ಜುನ ತಪೋಭಂಗ ಮಾಡಿದ್ದಕ್ಕಾಗಿ ಕೋಪಗೊಂಡು ಅದನ್ನು ಬಾಣದಿಂದ ಹೊಡೆದು ಬೀಳಿಸಿದ. ಅದೇ ಸಮಯಕ್ಕೆ ಎಲ್ಲಿಂದಲೋ ಬಾಣವೊಂದು ಬಂದು ಹಂದಿಗೆ ನಾಟಿತು. ಅದರ ಹಿಂದೆಯೇ ಬೇಡ ದಂಪತಿಗಳು ಬಂದರು. ಬೇಡ ಹಂದಿ ತನ್ನ

ಬಾಣದಿಂದ ಸತ್ತಿರುವುದಕ್ಕಾಗಿ ತಾನೇ ಅದನ್ನು ಒಯ್ಯುತ್ತೇನೆಂದಾಗ ಅರ್ಜುನ ವಿರೋಧಿಸಿದ. ಮೊದಲು ಹೊಡೆದದ್ದು ತಾನೇ ಆದ್ದುದರಿಂದ ಅದು ನನಗೆ ಸೇರಬೇಕೆಂದು ಅರ್ಜುನ ಹಠ ಹಿಡಿದ. ಮಾತಿಗೆ ಮಾತು ಬೆಳೆದು ಕಡೆಗೆ ಬಲಾಬಲ ಪರೀಕ್ಷೆಗೆ ಮುಂದಾದರು.

ಎಷ್ಟೋ ಹೊತ್ತು ಇಬ್ಬರೂ ಹೋರಾಡಿದರು. ಯಾರೂ ಸೋಲುವ ಹಾಗೆ ಕಾಣಲಿಲ್ಲ. ನಂತರ ಹೇಗೋ ಅರ್ಜುನ ಬೇಡನನ್ನು ಬೀಳಿಸಿ ಹತ್ತಿಕ್ಕಿ ಸೋಲಿಸಿದ. ಕಡೆಯಲ್ಲಿ ಅರ್ಜುನ ನೋಡ ನೋಡುತ್ತಿದ್ದಂತೆ ಬೇಡ ಶಿವನಾಗಿ ತನ್ನ ಮುಂದೆ ನಿಂತಿದ್ದ. ಅರ್ಜುನನಿಗೆ ಈಗ ಅರ್ಥವಾಯಿತು. ಇದೆಲ್ಲ ಶಿವನ ಆಟ ಎಂದು. ಅರ್ಜುನ ತಪಸ್ಸು ಮಾಡುತ್ತಿರುವ ಉದ್ದೇಶ ತಿಳಿದು ಅವನಿಗೆ ಶಿವ ಪಾಶುಪತಾಸ್ತ್ರವನ್ನು ಕರುಣಿಸಿದ. ಉಳಿದ ದೇವತೆಗಳೂ ಪ್ರತ್ಯಕ್ಷರಾಗಿ ಅರ್ಜುನನಿಗೆ ದಿವ್ಯಾಸ್ತ್ರಗಳನ್ನು ನೀಡಿ ಮುಂದೆ ಸಂಭವಿಸಲಿರುವ ಯುದ್ಧದಲ್ಲಿ ಪಾಂಡವರಿಗೆ ಜಯವಾಗಲೆಂದು ಹರಸಿದರು.

ಅರ್ಜುನ ಅಲ್ಲಿಂದ ಹೊರಟು ಇಂದ್ರಲೋಕವನ್ನು ಸೇರಿದ. ತಂದೆಯನ್ನು ಮಾತಾಡಿಸಿಕೊಂಡು ವಿಷಯ ತಿಳಿಸಿ ಹೋಗೋಣವೆಂಬ ಉದ್ದೇಶದಿಂದ ಬಂದಿದ್ದ. ಇಂದ್ರನಿಗೆ ಸಂತೋಷವಾಯಿತು. ಹಾಗೆಯೇ ದುಷ್ಟ ದುರ್ಯೋಧನನ ವಿಚಾರವೆಲ್ಲ ತಿಳಿದು, ಊರ್ವಶಿಯಿಂದ ಸಂಗೀತ ನೃತ್ಯಗಳನ್ನು ಕಲಿಯಬೇಕೆಂದು ಮುಂದೆ ಅಜ್ಞಾತವಾಸ ಸಂದರ್ಭದಲ್ಲಿ ಅದು ಬಹಳ ಪ್ರಯೋಜನಕ್ಕೆ ಬರುತ್ತದೆಂದೂ ತಿಳಿಸಿದ.

ಅಪ್ಸರೆಯರಲ್ಲೆಲ್ಲ ಅತ್ಯಂತ ಸುಂದರಿಯಾದ ಊರ್ವಶಿ. ಅರ್ಜುನನಿಗೆ ವಿದ್ಯೆ ಕಲಿಸುತ್ತಲೇ ಅವನ ಮೇಲೆ ಮೋಹಗೊಂಡು ತನ್ನನ್ನು ಮದುವೆಯಾಗೆಂದು ಅರ್ಜುನನ್ನು ಒತ್ತಾಯ ಮಾಡಿದಳು. ಆದರೆ ಅರ್ಜುನ, ತನಗೆ ಅವಳು ವಿದ್ಯಾಗುರುವಾಗಿರುವುದರಿಂದ ತಾಯಿ ಸಮಾನಳು. ಇಂತಿರುವಾಗ ವಿವಾಹವಾಗುವುದು ಸರಿಯಲ್ಲವೆಂದು ಹೇಳಿ ನಿರಾಕರಿಸಿದಾಗ, ಊರ್ವಶಿ ಕೋಪಗೊಂಡು ಅರ್ಜುನನನ್ನು ನಪುಂಸಕ

ನಾಗೆಂದು ಶಾಪ ನೀಡಿದಳು. ಈ ಶಾಪ ಒಂದು ವರ್ಷ ಮಾತ್ರ. ಈ ಶಾಪವೇ ಮುಂದೆ ಅಜ್ಞಾತವಾಸದ ಸಮಯದಲ್ಲಿ ವರವಾಗಿ ಪರಿಣಮಿಸಿತು. ಬೃಹನ್ನಳೆ ಎಂದು ಕರೆಸಿಕೊಂಡು ವಿರಾಟನ ಪುತ್ರಿ ಉತ್ತರೆಯ ನಾಟ್ಯ ಗುರುವಾದ.

ಅರ್ಜುನ ಬಂದ ಉದ್ದೇಶ ನೆರವೇರಿತ್ತು. ಅತ್ಯಂತ ಮಹಿಮೆಯುಳ್ಳ ದಿವ್ಯಾಸ್ತ್ರಗಳನ್ನೂ ದೇವರುಗಳ ಆಶೀರ್ವಾದವನ್ನೂ ಪಡೆದು ಸೋದರರಿದ್ದ ಪ್ರದೇಶಕ್ಕೆ ಹೊರಟ. ಈಗ ಅರ್ಜುನ ಯಾರಿಂದಲೂ ಗೆಲ್ಲಲಾಗದ ಅಜೇಯನೆನಿಸಿಕೊಂಡ.



## ದುರ್ಯೋಧನ ಗಂಧರ್ವರ ಸೆರೆಯಲ್ಲಿ

ಪಾಂಡವರಿಗೆ ಕೊಡಬಾರದ ಕಷ್ಟವನ್ನೆಲ್ಲ ಕೊಟ್ಟು, ವನವಾಸಕ್ಕೆ ಕಳಿಸಿದರೂ. ದುರ್ಯೋಧನನಿಗೆ ಶಾಂತಿಯೇ ಇರಲಿಲ್ಲ. ಒಂದಲ್ಲ ಒಂದು ವಿಧದಲ್ಲಿ ಅವರನ್ನು ಹಿಂಸಿಸಲು, ಅವಮಾನಿಸಲು ಯೋಚಿಸುತ್ತಿದ್ದ. ಈ ಬಾರಿ ತನ್ನ ಶ್ರೀಮಂತಿಕೆ, ರಾಜವೈಭವವನ್ನು ಪಾಂಡವರಿಗೆ ಕಾಣಿಸಿ, ತಮ್ಮ ಬಡತನ, ಅಸಹಾಯಕತೆಗಳಿಗಾಗಿ ಮರುಗಿ ದುಃಖಿಸುವಂತೆ ಮಾಡಬೇಕೆಂದು, ಅವರಿದ್ದ ಕಾಮ್ಯಕವನಕ್ಕೆ ರಾಜಪರಿವಾರದೊಡನೆ ಬಂದು ಬೀಡುಬಿಟ್ಟ. ಅಲ್ಲಿ ಅತಿಥಿಗಳಿಗಾಗಿ, ತಮಗಾಗಿ ಅದ್ದೂರಿಯಾಗಿ ಶಿಬಿರಗಳನ್ನು ಹಾಕಿಸಿದ. ಸಂಗೀತ, ನೃತ್ಯಗಳ ವ್ಯವಸ್ಥೆ ಮಾಡಿದ. ವನವಿಹಾರ, ಆಮೋದಗಳಲ್ಲಿ ಕಾಲ ಕಳೆಯಲೆಂದೇ ಬಂದಿಳಿದಿದ್ದ.

ದುರ್ಯೋಧನಾದಿಗಳು ಇಳಿದುಕೊಂಡಿದ್ದ ಜಾಗದಿಂದ ಸ್ವಲ್ಪ ದೂರದಲ್ಲಿಯೇ ಗಂಧರ್ವರೂ ಬೀಡುಬಿಟ್ಟಿದ್ದರು. ದುರ್ಯೋಧನನ ಕೆಲವು  ಸೇವಕರು, ಸೈನಿಕರು ಇದನ್ನು ಗಮನಿಸಿ ಗಂಧರ್ವರ ಬಳಿಗೆ ಹೋಗಿ ಜಾಗ ಖಾಲಿ ಮಾಡುವಂತೆ ಹೇಳಿದರು. ಗಂಧರ್ವರಿಗೆ ಸಿಟ್ಟು ಬಂತು. ಅವರು ಅಲ್ಲಿಂದ ಕದಲುವುದಿಲ್ಲವೆಂದರು. ಮಾತಿಗೆ ಮಾತು ಬೆಳೆಯಿತು. ವಿಷಯ ತಿಳಿದ ಚಿತ್ರಸೇನ (ಗಂಧರ್ವನಾಯಕ) ಅಲ್ಲಿಗೆ ಬಂದು ದುರ್ಯೋಧನನ ಕಡೆಯವರ ಅಸಭ್ಯ ವರ್ತನೆಯನ್ನು ನೋಡಿ, ದುರ್ಯೋಧನನಿಗೆ ಪಾಠ ಕಲಿಸಬೇಕೆಂದುಕೊಂಡ. ದುರ್ಯೋಧನನೂ ಸುಮ್ಮನಿರದೆ ಚಿತ್ರಸೇನನನ್ನು ಯುದ್ಧಕ್ಕೆ ಆಹ್ವಾನಿಸಿದ. ಇಬ್ಬರ ನಡುವೆಯೂ ಯುದ್ಧವಾಗಿ ಕಡೆಗೆ ದುರ್ಯೋಧನ, ಚಿತ್ರಸೇನನಿಗೆ ಸೆರೆಯಾದ. ದುರ್ಯೋಧನನ ಕಡೆಯವರಿಗೆ ಹೆದರಿಕೆಯಾಯಿತು. ಗಂಧರ್ವರನ್ನು

ಎದುರಿಸುವ ಸಾಮರ್ಥ್ಯ ಅವರಲ್ಲಿ ಯಾರಿಗೂ ಇರಲಿಲ್ಲ. ದುರ್ಯೋಧನನನ್ನು ಹೇಗೆ ಸೆರೆಯಿಂದ ಬಿಡಿಸಬೇಕೆಂದು ತಿಳಿಯದೆ ಚಡಪಡಿಸಿದರು.

ದುರ್ಯೋಧನಾದಿಗಳು ಬೀಡುಬಿಟ್ಟಿದ್ದ ಸರೋವರದ ಮತ್ತೊಂದು ಭಾಗದಲ್ಲಿ ಪಾಂಡವರ ಆಶ್ರಮ ಇದೆಯೆಂಬುದನ್ನು ದುರ್ಯೋಧನನ ಕಡೆಯ ಕೆಲವರಿಗೆ ವ್ಯಾಪಾರಿಗಳಿಗೆ ತಿಳಿದಿತ್ತು. ಅವರು ಓಡಿ ಹೋಗಿ ಯುಧಿಷ್ಠಿರನನ್ನು ಕಂಡು ಮಾತಾಡಿಸಿ, ತಮಗೆ ತಮ್ಮ ರಾಜನಿಗೆ ಬಂದಿರುವ ವಿಪತ್ತನ್ನು ವಿವರಿಸಿ, ಹೇಗಾದರೂ ತಮ್ಮನ್ನು ಕಾಪಾಡಬೇಕೆಂದು ಬೇಡಿಕೊಂಡರು. ಯುಧಿಷ್ಠಿರನ ಹೊರತಾಗಿ ಬೇರೆ ಯಾರಿಗೂ ಕೌರವರಿಗೆ ಸಹಾಯ ಮಾಡುವ ಮನಸ್ಸಿರಲಿಲ್ಲ. ದುರ್ಯೋಧನನ ಸ್ಥಿತಿಗೆ ಅವರು ಸಂತೋಷಿಸಿದ್ದರು. ಆದರೆ ಕಡೆಗೆ ಅಣ್ಣನ ಮಾತಿಗೆ ಕಟ್ಟುಬಿದ್ದು ಹೋಗಬೇಕಾಯಿತು. ಯುಧಿಷ್ಠಿರ ಅವರನ್ನು, "ಪ್ರಿಯ ಸೋದರರೇ ನನ್ನ ಮಾತನ್ನು ನಡೆಸಿ ಕೊಡುವುದಕ್ಕೆ ನಿಮಗೆ ಮನಸ್ಸಿಲ್ಲವೆಂದು ನನಗೆ ಗೊತ್ತು. ಅವರು ನಮ್ಮ ಶತ್ರುಗಳೆಂಬುದು ನಿಜ, ಹಾಗೆಯೇ ನಮ್ಮ ದಾಯಾದಿ ಸೋದರರೆಂಬುದು ನಿಜ. ಅವರು ಕಷ್ಟದಲ್ಲಿ ಇರುವಾಗ ಸಹಾಯ ಮಾಡಬೇಕಾದ್ದು ನಮ್ಮ ಕರ್ತವ್ಯ. ಕ್ಷಾತ್ರಧರ್ಮವೇನೆಂಬುದು ಬಹಶಃ ನಿಮಗೆ ನೆನಪಿರಬೇಕು. ಅದು ಏನು ಹೇಳುತ್ತದೆ ಗೊತ್ತೆ? ಆಪತ್ತಿನಲ್ಲಿದ್ದವನು ಆರ್ತನಾಗಿ ಬೇಡಿದರೆ ರಕ್ಷಿಸಬೇಕೆಂದು ಹೇಳುತ್ತದೆ" ಎಂದು ಹೇಳಿ ಮನವೊಲಿಸಿ ಕಳಿಸಿಕೊಟ್ಟನು.

ಪಾಂಡವ ಸೋದರರು ಪ್ರತಿಯಾಡದೆ ಕೌರವರ ರಕ್ಷಣೆಗೆ ಹೊರಟು ಬಂದರು. ಚಿತ್ರಸೇನನನ್ನು ಕಂಡು ದುರ್ಯೋಧನನನ್ನು ಬಿಟ್ಟು ಬಿಡಲು ಕೇಳಿದರು. ಆದರೆ ಚಿತ್ರಸೇನ ಒಪ್ಪಲಿಲ್ಲ. ಯುದ್ಧ ಮಾಡಿದರು. ಆದರೆ ಸ್ವಲ್ಪ ಹೊತ್ತಿನ ನಂತರ ಚಿತ್ರಸೇನನನಿಗೆ, ನಮಗೆ ಶತ್ರುಗಳಲ್ಲದೆ ಪಾಂಡವರೊಂದಿಗೆ ಯುದ್ಧ ಮಾಡುವುದರಲ್ಲಿ ಅರ್ಥವಿಲ್ಲವೆನಿಸಿತು. ಶಸ್ತ್ರಗಳನ್ನು ಕೆಳಗಿಟ್ಟು ಅರ್ಜುನನಿಗೆ, "ಅರ್ಜುನಾ, ಪ್ರಿಯಮಿತ್ರ ಅನವಶ್ಯಕವಾಗಿ ನಮ್ಮ ನಮ್ಮ ನಡುವೆ ಯುದ್ಧವೇಕೆ? ನಾವೇನು ಶತ್ರುಗಳಲ್ಲ.

ದುರ್ಯೋಧನ ನಿಮಗೆ ಕೊಟ್ಟ ಕಷ್ಟಗಳನ್ನು ನಾನು ಕೇಳಿ ಅವನಿಗೆ ಪಾಠ ಕಲಿಸಬೇಕೆಂಬುದು ನನ್ನ ಉದ್ದೇಶ ಅಷ್ಟೇ!" ಎಂದ.

"ಚಿತ್ರಸೇನ, ಗೆಳೆಯಾ ನಿನ್ನ ಉದ್ದೇಶ ಏನೆಂಬುದು ನನಗೆ ಗೊತ್ತು. ಆದರೆ ನಮ್ಮಣ್ಣ ದುರ್ಯೋಧನನನ್ನು ಬಿಡಿಸಲು ಹೇಳಿದ್ದಾನೆ. ಈಗ ಸಧ್ಯಕ್ಕೆ ಕುರುವಂಶದ ಮರ್ಯಾದೆ ಉಳಿಸಬೇಕಾಗಿದೆ. ನೀನು ಅವನನ್ನು ಅವನ ಕಡೆಯವರನ್ನು ಬಿಟ್ಟುಬಿಡು. ಆಮೇಲೆ ನಾವೇ ಅವರಿಗೆ ಹೇಗೆ ಬುದ್ಧಿ ಹೇಳಿ ಪಾಠ ಕಲಿಸಬೇಕೋ ನೋಡಿಕೊಳ್ಳುತ್ತೇವೆ" ಎಂದು ಅರ್ಜುನನು ಹೇಳಿ ಚಿತ್ರಸೇನನನ್ನು ಒಪ್ಪಿಸಿದ.

ಚಿತ್ರಸೇನ ಮರುಮಾತಿಲ್ಲದೆ ದುರ್ಯೋಧನ ಮತ್ತು ಅವನ ಕಡೆಯವರನ್ನು ಮುಕ್ತಗೊಳಿಸಿದ. ದುರ್ಯೋಧನ ನಾಚಿಕೆಯಿಂದ ತಲೆತಗ್ಗಿಸಿ ಬಾಲಸುಟ್ಟುಕೊಂಡ ನರಿಯಂತೆ ಅಲ್ಲಿಂದ ಜಾರಿಕೊಂಡು ಹಿಂತಿರುಗಿದ. ತನ್ನ ವೈಭವ ವಿಲಾಸಗಳನ್ನು ಪಾಂಡವರ ಮುಂದೆ ಮೆರೆದು ಅವರಿಗೆ ನೋವುಂಟು ಮಾಡುವ ಲೆಕ್ಕಚಾರ ತಪ್ಪಿ, ತಾನೇ ಅವರ ಸಹಾಯ ಪಡೆದು ಬದುಕಿ ಉಳಿಯಬೇಕಾದದ್ದು ಅವನಿಗೆ ಸಹಿಸಲಾಗದಷ್ಟು ಅವಮಾನವೆನಿಸಿತ್ತು.



# ವೈಷ್ಣವ ಯಾಗ

ಗಂಧರ್ವರ ಕೈಯಿಂದ ದುರ್ಯೋಧನಾದಿಗಳಿಗೆ ಏನಾಯಿತೆಂಬುದೂ ಪಾಂಡವರೇ ಅವರನ್ನು ಕಾಪಾಡಿದರೆಂಬುದೂ ತಿಳಿದು ಬಂತು. ಮತ್ತೊಮ್ಮೆ ಕೌರವ ಪಾಂಡವರನ್ನು ಒಟ್ಟುಗೂಡಿಸುವ ಆಲೋಚನೆ ಭೀಷ್ಮರಿಗೆ ಬಂತು. ಅವರಿಬ್ಬರೂ ಒಟ್ಟಾದರೆ ಶತ್ರು ಭಾಧೆಯಿಲ್ಲದೆ ರಾಜ್ಯಭಾರ ಮಾಡಬಹುದಲ್ಲ ಎನಿಸಿತು. ದುರ್ಯೋಧನನನ್ನು ಕರೆದು ಹಿತವಚನಗಳನ್ನು ಹೇಳಿದರು.

ಆದರೆ ಅವನು ಹಠಮಾರಿ, ಅವರ ಯಾವ ಮಾತುಗಳನ್ನೂ ಕೇಳಿಸಿಕೊಳ್ಳಲಿಲ್ಲ. ಶಕುನಿ, ಕರ್ಣರ ಪ್ರಚೋದನೆ, ಒತ್ತಾಸೆಗಳು ಧಾರಾಳವಾಗಿ ದೊರೆಯುತ್ತಿತ್ತು. "ದುರ್ಯೋಧನ ನೀನು ಯಾವುದಕ್ಕೂ ಯೋಚಿಸಬೇಡ. ನಮ್ಮ ಶಕ್ತಿ ಸಾಮರ್ಥ್ಯಗಳಲ್ಲಿ ನಂಬಿಕೆ ಇಡು. ದಿಗ್ವಿಜಯ ಯಾತ್ರೆಗೆ ಹೊರಟು ರಾಜ್ಯಗಳನ್ನು ಗೆದ್ದು ನಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿಕೊಳ್ಳೋಣ. ಹಾಗೆಯೇ ಅವರಂತೆಯೇ ರಾಜಸೂಯವನ್ನು ಮಾಡೋಣ" ಎಂದು ದುರ್ಯೋಧನನನ್ನು ಹುರಿದುಂಬಿಸಿದರು.

ಪುರೋಹಿತರನ್ನು ಕರೆಸಿ ಇದರ ಬಗ್ಗೆ ಮಾತನಾಡಿದಾಗ ಅವರು ದುರ್ಯೋಧನನನ್ನು ಎಚ್ಚರಿಸಿ, ರಾಜಕುಮಾರ ದುರ್ಯೋಧನ ರಾಜಸೂಯವನ್ನು ಈಗಾಗಲೇ ಯುಧಿಷ್ಠಿರ ಮಾಡಿದ್ದಾನೆ. ವಂಶದಲ್ಲಿ ಒಬ್ಬರು ಮಾತ್ರ. ಅದೂ ಒಂದೇ ಸಲ ಮಾಡಬೇಕು. ಮತ್ತೆ ಮತ್ತೆ ಮಾಡುವ ಹಾಗಿಲ್ಲ. ನಿನಗೆ ಮಾಡಲೇಬೇಕೆಂದೆನಿಸಿದರೆ ವೈಷ್ಣವ ಯಾಗವನ್ನು ಮಾಡು" ಎಂದು ಪರ್ಯಾಯವೊಂದನ್ನು ಸೂಚಿಸಿದರು. ದುರ್ಯೋಧನನಿಗೆ ಸ್ವಲ್ಪ ನಿರಾಶೆಯಾದರೂ ಹೇಗೋ ಒಪ್ಪಿಕೊಳ್ಳಬೇಕಾಯಿತು.

ಅದ್ದೂರಿಯಾಗಿ ಸಿದ್ಧತೆಗಳು ನಡೆದವು. ದೇಶದ ಎಲ್ಲ ಕಡೆಗೆ ಆಹ್ವಾನ ಪತ್ರಿಕೆಗಳನ್ನು ಕಳಿಸಲಾಯಿತು. ಅತಿಥಿಗಳಿಗೆ ಅದ್ಭುತವಾದ ವ್ಯವಸ್ಥೆ ಮಾಡಲಾಗಿತ್ತು. ಬೇರೆಡೆಗಳಿಂದ ಬಂದ ರಾಜರಿಗೆ, ಪಾಂಡವರು ಕಟ್ಟಿಸಿದ ಅರಮನೆಗಳ ಮಾದರಿಯಲ್ಲಿಯೇ ಅತಿಥಿ ಗೃಹಗಳನ್ನು ನಿರ್ಮಿಸಲಾಗಿತ್ತು. ದುರ್ಯೋಧನನಿಗೆ ವೈಭವ ವಿಲಾಸಗಳನ್ನು, ಭರ್ಜರಿ ವ್ಯವಸ್ಥೆಯನ್ನು ನೋಡಿ ಹೆಮ್ಮೆ ಎನಿಸಿತು. ಇನ್ನು ತನಗೆ ಸಾಟಿಯಿಲ್ಲವೆಂದು ಹಿಗ್ಗಿದ. ಆದರೆ ಪಾಂಡವರು ಇದನ್ನೆಲ್ಲ ನೋಡಲಾಗಲಿಲ್ಲವಲ್ಲ ಎಂಬ ಕೊರಗೊಂದು ಅವನನ್ನು ಕಾಡುತ್ತಿತ್ತು.

ಯಾಗವನ್ನು ಪೂರ್ಣಗೊಳಿಸಿದ. ಬಂದವರಿಗೆಲ್ಲ ಕೈತುಂಬ ಉಡುಗೊರೆಗಳನ್ನು ಕೊಟ್ಟು ಕಳುಹಿಸಿದ. ಬ್ರಾಹ್ಮಣರಿಗೆ ಧಾರಾಳವಾಗಿ ದಾನ ದಕ್ಷಿಣೆಗಳನ್ನು ನೀಡಿದ. ಧೃತರಾಷ್ಟ್ರನಿಗೆ ಮಗನ ವೈಭವವನ್ನು ನೋಡಲು ದೃಷ್ಟಿ ಇಲ್ಲವಾಗಿದ್ದರೂ ಬಂದಿದ್ದವರೆಲ್ಲ ಹೊಗಳುವುದನ್ನು ಕೇಳಿ ಹಿಗ್ಗಿ ಹೋದ.



## ಜಯದ್ರಥನಿಂದ ದ್ರೌಪದಿಯ ಅಪಹರಣ

ಸಿಂಧು ದೇಶದ ಅರಸನೂ ದುರ್ಯೋಧನನ ಭಾವನೂ ಆದ ಜಯದ್ರಥ, ಒಂದು ದಿನ ತನ್ನಕುಟುಂಬದವರೊಂದಿಗೆ ಕಾಡಿನ ಮಾರ್ಗವಾಗಿ ಹಾದು ಬರುತ್ತಿದ್ದ. ದಾರಿಯಲ್ಲಿ ಒಂದು ಕುಟೀರದ ಮುಂದೆ ಹೆಂಗಸೊಬ್ಬಳು ನಿಂತಿದ್ದದ್ದು ಕಾಣಿಸಿತು. ನೋಡಲು ಬಲು ಚೆಲುವೆಯಾಗಿದ್ದಳು. ಅವಳು ಬೇರಾರೂ ಅಲ್ಲದೆ ಪಾಂಡವ ಪತ್ನಿ ದ್ರೌಪದಿಯಾಗಿದ್ದಳು. ಪಾಂಡವರು ಬೇಟೆಗೆಂದು ಹೋಗಿದ್ದಾಗ, ಇವಳು ಒಬ್ಬಳೇ ಇರಬೇಕಾಯಿತು.

ಜಯದ್ರಥ ಅವಳನ್ನು ನೋಡಿದ್ದೇ ಮಂತ್ರಮಗ್ಧನಾಗಿ ಬಿಟ್ಟಿದ್ದ. ತನ್ನ ಕುಟುಂಬದ ಕೆಲವರನ್ನು ಅಲ್ಲಿಗೆ ಕಳಿಸಿ ಅವರ ವಿವರಗಳನ್ನು ತಿಳಿದು ಬರಲು ಹೇಳಿದ. ಹಾಗೆಯೇ ಅವಳು ಒಪ್ಪುವುದಾದರೆ ತಾನು ಅವಳನ್ನು ಮದುವೆಯಾಗುತ್ತೇನೆ ಎಂಬುದನ್ನು ತಿಳಿಸಲೂ ಸೂಚಿಸಿದ.

ದ್ರೌಪದಿ ತನ್ನ ಮನೆಯ (ಕುಟೀರದ) ಮುಂದೆ ಒಬ್ಬ ಅಪರಿಚಿತ ವ್ಯಕ್ತಿ ನಿಂತಿರುವುದನ್ನು ಗಮನಿಸಿದಳು. "ಎಲೈ ಪುರುಷ, ಯಾರು ನೀನು? ಹೀಗೇಕೆ ನನ್ನ ಕುಟೀರದ ಮುಂದೆ ನನ್ನತ್ತ ನೋಡುತ್ತಾ ನಿಂತಿರುವಿ?" ಎಂದು ವಿಚಾರಿಸಿದಳು.

ಅಪರಿಚಿತ ವ್ಯಕ್ತಿ, "ಎಲೈ ಹೆಣ್ಣೇ ನಾನು ಕೋಟಕಾಸದ ರಾಜ. ಸಿಂಧುರಾಜ ಜಯದ್ರಥ ನನ್ನನ್ನು ಇಲ್ಲಿಗೆ ಕಳಿಸಿದ್ದಾನೆ. ಅವನಿಗೆ ನಿನ್ನ ಮೇಲೆ ಪ್ರೀತಿಯುಂಟಾಗಿದೆ. ನಿನ್ನನ್ನು ಮದುವೆಯಾಗಲು ಮುಂದಾಗಿದ್ದಾನೆ" ಎಂದು ತಿಳಿಸಿದ.

ಅವನ ಮಾತುಗಳನ್ನು ಕೇಳಿ ದ್ರೌಪದಿ ಕಿಡಿಕಿಡಿಯಾದಳು. "ಏನಯ್ಯಾ ಏನೆಂದುಕೊಂಡೆ? ನಾನು ಯಾರು ಇಲ್ಲದವಳೆಂದುಕೊಂಡೆಯಾ?

ನಿನ್ನಂಥವನಿಗೆ ಈ ರೀತಿ ಮಾತಾಡುವುದು ಸರಿಯಲ್ಲ. ಪರಪುರುಷ ನೊಂದಿಗೆ ಮಾತಾಡುವುದು ನನಗಿಷ್ಟವಿಲ್ಲವಾದರೂ ನನ್ನ ಬಗ್ಗೆ ನಾನು ಹೇಳಲೇಬೇಕು. ಹೋಗಿ ಅದನ್ನು ನಿನ್ನ ದೊರೆಗೆ ಹೇಳಲೇಬೇಕು. ನಾನು ದ್ರೌಪದಿ, ದ್ರುಪದ ರಾಜನ ಮಗಳು, ಪಾಂಡವರ ಪತ್ನಿ" ಎಂದು ಹೇಳಿ ತಟ್ಟನೆ ಒಳಗೆ ಹೋಗಿ ಬಾಗಿಲು ಮುಚ್ಚಿದಳು.

ಜಯದ್ರಥ ಎಲ್ಲವನ್ನು ತಿಳಿದು ತಾನೇ ಸ್ವತಃ ಅಲ್ಲಿಗೆ ಬಂದ. ದ್ರೌಪದಿಯನ್ನು ಬಗೆಬಗೆಯಾಗಿ ಪ್ರಾರ್ಥಿಸಿದ. ಮದುವೆಯಾಗೆಂದು ಅನೇಕ ಆಮಿಷಗಳನ್ನು ಮುಂದಿಟ್ಟ. "ದ್ರೌಪದಿ, ಹೇ ಸುಂದರಿ, ನಿನ್ನ ಯೋಗ್ಯತೆಗೆ ತಕ್ಕಂತಹ ನನ್ನಂಥವನನ್ನು ಮದುವೆಯಾಗು. ಭಿಕಾರಿಗಳಾದ ಆ ಪಾಂಡವರಿಗೆ ಹೆಂಡತಿಯಾಗಿ ನಿನ್ನ ಬದುಕನ್ನೇಕೆ ಈ ನಿರ್ಜನ ಪ್ರದೇಶದಲ್ಲಿ ಹಾಳು ಮಾಡಿಕೊಳ್ಳುತ್ತಿ?" ಎಂದು ಒತ್ತಾಯಿಸಿದನು.

"ಸಿಂಧುರಾಜನೆ, ಇಂಥ ಮಾತುಗಳು ನಿನ್ನಿಂದ ಬರಬಾರದಿತ್ತು. ಏಕೆಂದರೆ ನಿನ್ನ ಅಂತಸ್ತಿನವರಿಗೆ ಇವು ಶೋಭಿಸುವುದಿಲ್ಲ. ಇದೇ ರೀತಿ ಮಾತು ಮುಂದುವರಿಸಿದರೆ ಬಹು ದೊಡ್ಡ ಬೆಲೆ ತರಬೇಕಾಗುತ್ತದೆ" ಎಂದು ಸಿಟ್ಟಿನಿಂದ ನುಡಿದಳು.

ದ್ರೌಪದಿಯ ಬೆದರಿಕೆಯಿಂದ ಅವನಿಗೆ ಏನೂ ಎನಿಸಲಿಲ್ಲ. ಮತ್ತೆ ಮಾತನ್ನು ಮುಂದುವರಿಸಿದ. ಮದುವೆಯಾಗೆಂದು ಒತ್ತಾಯ ಮಾಡಿದ. "ದ್ರೌಪದಿ, ಪಾಂಡವರಿಗೆ ಮನೆಯಾಗಲೀ, ರಾಜ್ಯವಾಗಲೀ ಇಲ್ಲ. ಕಡೆಗೆ ನಿನಗೆ ಅನ್ನ ಹಾಕುವುದಕ್ಕೂ ಗತಿಯಿಲ್ಲ. ರಾಜ್ಯವನ್ನು ಕಳೆದುಕೊಂಡು ಪೂರ್ತಿಯಾಗಿ ಸತ್ತಂತಾಗಿದ್ದಾರೆ" ಎಂದು ಪಾಂಡವರ ಬಗ್ಗೆ ಲಘುವಾಗಿ ಮಾತನಾಡಿದ.

ಇನ್ನು ದ್ರೌಪದಿಗೆ ಸುಮ್ಮನಿರಲಾಗಲಿಲ್ಲ. "ಜಯದ್ರಥ ನನ್ನ ಗಂಡಂದಿರ ಬಗ್ಗೆ ಮಾತಾಡಲು ನಿನಗೆ ಹಕ್ಕೂ ಇಲ್ಲ, ಯೋಗ್ಯತೆಯೂ ಇಲ್ಲ. ಅವರು ಧರ್ಮಿಷ್ಠರು, ಪರಾಕ್ರಮಶಾಲಿಗಳು. ಅವರ ಸಾಮರ್ಥ್ಯವನ್ನು, ಧೈರ್ಯವನ್ನು ಎದುರಿಸಲು, ಅವರಿಗೆ ಸಮಾನರಾದವರೊಬ್ಬರೂ ಇಲ್ಲ. ಸುಮ್ಮನೆ ನನ್ನನ್ನು ರೇಗಿಸಬೇಡ. ಅವರು ಬರುವುದಕ್ಕೆ ಮೊದಲು ಇಲ್ಲಿಂದ ಹೊರಟು

ಹೋಗು. ಇಲ್ಲವಾದಲ್ಲಿ ನಿನ್ನನ್ನು ಚೆಂಡಾಡಿ ಬಿಡುತ್ತಾರೆ" ಎಂದು ರೋಷದಿಂದ ನುಡಿದಳು ದ್ರೌಪದಿ.

ಜಯದ್ರಥನಿಗೂ ಸಿಟ್ಟೇರಿತು. "ದ್ರೌಪದಿ ನನ್ನನ್ನು ಮಗುವೆಂದು ತಿಳಿಯಬೇಡ. ಪಾಂಡವರೆಂದರೆ ನನಗೇನೂ ಭಯವಿಲ್ಲ. ಕೊನೆಯ ಬಾರಿ ಕೇಳುತ್ತಿದ್ದೇನೆ. ನೀನಾಗಿ ನನ್ನ ಜೊತೆ ಬಂದರೆ ಸರಿ, ಇಲ್ಲವಾದಲ್ಲಿ ಬಲವಂತದಿಂದ ನಾನೇ ಎಳೆದೊಯ್ಯುತ್ತೇನೆ" ಎಂದ.

ದ್ರೌಪದಿ ತನ್ನ ಜಾಗದಿಂದ ಕದಲಲಿಲ್ಲ. ಆದ್ದರಿಂದ ಜಯದ್ರಥನೇ ಅವಳನ್ನು ಸಮೀಪಿಸಿ ಹಿಡಿದೆಳೆದ. ದ್ರೌಪದಿಗೆ ದಿಕ್ಕು ತೋಚಲಿಲ್ಲ. ನೋವಿನಿಂದ ಅವಮಾನದಿಂದ ಕೂಗಿದಳು. ಜಯದ್ರಥ ಅವಳನ್ನೆಳೆದು ರಥದಲ್ಲಿ ಕೂರಿಸಿಕೊಂಡು ಓಡಿದ.

ಸ್ವಲ್ಪ ಹೊತ್ತಿನ ನಂತರ ಪಾಂಡವರು ಮರಳಿದರು. ದ್ರೌಪದಿಗಾಗಿ ಹುಡುಕಾಡಿದರು. ಎಲ್ಲಿಯೂ ಕಾಣಲಿಲ್ಲ. ಹೊರಗೆ ಬಂದು ನೋಡಿದರೆ ರಥದ ಚಕ್ರಗಳ ಗುರುತು ಕಾಣಿಸಿತು. ಅದನ್ನೇ ಅನುಸರಿಸಿ ಹೊರಟಾಗ ಅಸಹಾಯಕತೆಯಿಂದ ಕೂಗುತ್ತಿದ್ದ ದ್ರೌಪದಿ, ರಥ ನಡೆಸುತ್ತಿದ್ದ ಜಯದ್ರಥ ಕಾಣಿಸಿದರು.

ಪಾಂಡವರು ರಥವನ್ನು ಹಿಂಬಾಲಿಸಿ ಓಡಿ ರಥವನ್ನು ನಿಲ್ಲಿಸಿದರು. ಜಯದ್ರಥ ಪ್ರಾಣ ಭೀತಿಯಿಂದ ರಥದಿಂದ ಧುಮುಕಿ ಓಡತೊಡಗಿದ. ಪಾಂಡವರು ಬಿಡಲಿಲ್ಲ. ಬೆನ್ನಟ್ಟಿ ಹೋಗಿ ಹಿಡಿದು ಪಾಠ ಕಲಿಸಿದರು. ಕೊಲ್ಲಬಹುದಾಗಿದ್ದರೂ ತಂಗಿ ದುಶ್ಯಲೆ ವಿಧವೆಯಾಗುತ್ತಾಳಲ್ಲ ಎಂದು ಕನಿಕರಿಸಿ, ಪ್ರಾಣ ತೆಗೆಯದೆ, ತಲೆ ಬೋಳಿಸಿ ವಿಕಾರಗೊಳಿಸಿ ಬಿಟ್ಟುಬಿಟ್ಟರು.

ಮಾಡಲು ದಾರಿಯಿಲ್ಲದೆ ಜಯದ್ರಥ ಆದ ಅವಮಾನವನ್ನೆಲ್ಲ ಸಹಿಸಿಕೊಂಡ. ಆದರೆ ಒಳಗೆ ಅವರ ಮೇಲೆ ಸೇಡು ತೀರಿಸಿಕೊಳ್ಳಲೇ ಬೇಕೆಂದು ನಿರ್ಧರಿಸಿದ.



# ಯಕ್ಷನ ಪರೀಕ್ಷೆ

ಜಯದ್ರಥನ ಪ್ರಸಂಗದ ನಂತರ ಯಾಕೋ ಕಾಮ್ಯಕವನ ಬೇಡವಾಯಿತು. ದ್ವೈತವನಕ್ಕೆ ಮರಳಿ ಮತ್ತೆ ಸಂತೋಷದಿಂದ ಕೆಲಕಾಲ ಕಳೆದರು.

ಒಂದು ದಿನ ವಿಶ್ರಾಂತಿ ತೆಗೆದುಕೊಳ್ಳುತ್ತ ಲೋಕಾಭಿರಾಮವಾಗಿ ಮಾತನಾಡುತ್ತ ಕುಳಿತಿರಲು ಒಬ್ಬ ಬ್ರಾಹ್ಮಣನು ಗಾಬರಿಯಿಂದ ಅವರಲ್ಲಿಗೆ ಬಂದ. "ಅಯ್ಯೋ ನನ್ನ ಅರಣಿಯನ್ನು ಎಳೆದುಕೊಂಡು ಜಿಂಕೆ ಓಡುತ್ತಿದೆ. ಯಜ್ಞಾಗ್ನಿಗೆ ನಾನೇನು ಮಾಡಲಿ?' ಎಂದು ಹೇಳಿ ಜಿಂಕೆ ಓಡಿದ ದಿಕ್ಕನ್ನು ತೋರಿಸಿದ. ಪಾಂಡವರು ಕೂಡಲೇ ಅದರ ಬೆನ್ನಟ್ಟಿ ಓಡಿದರು. ಪ್ರಯೋಜನವಾಗಲಿಲ್ಲ. ಇದರಿಂದ ಅವರೆಲ್ಲ ಸಪ್ಪೆ ಮೊರೆ ಹಾಕಿಕೊಂಡು, ಒಂದು ಆಲದ ಮರದ ನೆರಳಲ್ಲಿ ಹತಾಶರಾಗಿ ಕುಳಿತರು. ಯುಧಿಷ್ಠಿರ ಅವರ ಬೇಸರವನ್ನು ನೋಡಿದ. ಪಾಪ ಎನಿಸಿತು. ಅವರಿಗೆ ಏನಾದರೂ ಕೆಲಸ ಹೇಳಿ, ಬೇಸರ ಮರೆಯುವ ಹಾಗೆ ಮಾಡಬೇಕೆಂದುಕೊಂಡು ನಕುಲನಿಗೆ ಎಲ್ಲಿಯಾದರೂ ಕುಡಿಯಲು ನೀರಿನ ತಾಣಗಳಿವೆಯೇನೋ ಮರಹತ್ತಿ ನೋಡೆಂದು ಹೇಳಿದ. ನಕುಲ ಅಂತೆಯೇ ಮರ ಹತ್ತಿ ಸುತ್ತಲೂ ಕಣ್ಣಾಡಿಸಿದಾಗ ಒಂದು ಕೊಳ ಹತ್ತಿರದಲ್ಲಿಯೇ ಇರುವುದನ್ನು ಗಮನಿಸಿ, ಯುಧಿಷ್ಠಿರನಿಗೆ ತಿಳಿಸಿದ. ಯುಧಿಷ್ಠಿರ ನಕುಲನಿಗೆ ಹೋಗಿ ತನಗಾಗಿ ಸ್ವಲ್ಪ ನೀರನ್ನು ತರಲು ಹೇಳಿದ.

ನಕುಲ ನೀರನ್ನು ತರಲೆಂದು ಕೊಳದ ದಿಕ್ಕಿನತ್ತ ಹೊರಟ. ಕೊಳವನ್ನು ತಲುಪಿದ ಮೇಲೆ, ಅಲ್ಲಿನ ತಣ್ಣನೆಯ ಶುಭ್ರವಾದ ನೀರನ್ನು ಕಾಣುತ್ತಿದ್ದಂತೆ ಅವನಿಗೆ ಪ್ರಾಣಬಂದಂತಾಯಿತು. ತಣ್ಣನೆಯ ನೀರಿನಲ್ಲಿ ಇಳಿದು ಕೈಕಲು

ಮುಖ ತೊಳೆದ ನಂತರ ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು ಇನ್ನೇನು ಕುಡಿಯಬೇಕು. ಅಷ್ಟರಲ್ಲಿ, "ನಕುಲ ನಿಲ್ಲು, ನೀರನ್ನು ಕುಡಿಯಬೇಡ, ಈ ಕೊಳ ನನಗೆ ಸೇರಿದ್ದು, ನನ್ನ ಪ್ರಶ್ನೆಗಳಿಗೆ ಉತ್ತರ ಕೊಟ್ಟು ನಂತರ ಕುಡಿ' ಎಂದು ಅದೃಶ್ಯವಾಣಿಯೊಂದು ಕೇಳಿಸಿತು.

ಈ ಎಚ್ಚರಿಕೆಯ ಮಾತುಗಳಿಗೆ ನಕುಲ ಲಕ್ಷ್ಯ ಕೊಡದೆ ನೀರನ್ನು ಕುಡಿದ. ಕುಡಿಯುತ್ತಿದ್ದಂತೆ ಕೆಳಗೆ ಬಿದ್ದು ಪ್ರಾಣ ಕಳೆದುಕೊಂಡ.

ಸಹದೇವನೂ ಅದೇ ಕೊಳವನ್ನು ತಲುಪಿದ. ಬಿದ್ದಿದ್ದ ನಕುಲನನ್ನು ನೋಡಿದನಾದರೂ ಮೊದಲು ಬಾಯಾರಿಕೆ ತೀರಿಸಿಕೊಳ್ಳಲು ಮುಂದಾದ. ಸಹದೇವನಿಗೂ ಇದೇ ರೀತಿಯ ಎಚ್ಚರಿಕೆ ಮಾತುಗಳು ಕೇಳಿಸಿದವು. ಅವನೂ ಅದನ್ನು ಲೆಕ್ಕಿಸದೆ ಕೆಳಗುರುಳಿದ.

ಮತ್ತೆ ಯುಧಿಷ್ಠರ ಅರ್ಜುನನನ್ನು, ಭೀಮನನ್ನು ಒಬ್ಬೊಬ್ಬರನ್ನೇ ಕಳಿಸಿದ. ಎಲ್ಲರದೂ ಇದೇ ಹಣೆ ಬರಹವಾಯಿತು.

ಯುಧಿಷ್ಠಿರನಿಗೆ ತನ್ನ ಸೋದರರ ಬಗ್ಗೆ ತುಂಬ ಚಿಂತೆಯಾಯಿತು. ಕಡೆಗೆ ತಾನೇ ಅವರನ್ನು ಹುಡುಕುತ್ತಾ ಅದೇ ಕೊಳದ ಬಳಿ ಬಂದು ತನ್ನ ನಾಲ್ಕೂ ಸೋದರರು ಸಾವನ್ನಪ್ಪಿರುವುದನ್ನು ಕಂಡು ದುಃಖಿಸಿದ. ಆದರೆ ಅದಕ್ಕೆ ಮುಂಚೆ ದಾಹ ತೀರಿಸಿಕೊಳ್ಳಲು ಪ್ರಯತ್ನಿಸಿದಾಗ ಅವನಿಗೂ ಅದೃಶ್ಯವಾಣಿಯ ಎಚ್ಚರಿಕೆಯ ಮಾತುಗಳು ಕೇಳಿಸಿದವು. ಯುಧಿಷ್ಠಿರ ಸುತ್ತಲೂ ನೋಡಿದ ಯಾರೂ ಕಾಣಿಸಲಿಲ್ಲ. "ಮಹಾನುಭಾವ ನೀನು ಯಾರೆಂದು ತಿಳಿಸುವವನಾಗು. ನನ್ನ ತಮ್ಮಂದಿರನ್ನು ಯಾವ ತಪ್ಪಿಗಾಗಿ ಹೀಗೆ ಸಾಯಿಸಿದ್ದೀಯೆ? ಅವರು ಧೈರ್ಯವಂತರು, ಬಲಶಾಲಿಗಳು, ಅಜೇಯರು, ಹೀಗಿದ್ದೂ ಅವರನ್ನು ನೀನು ಕೊಂದಿರುವಿ ಎಂದರೆ ಸಾಮಾನ್ಯನಲ್ಲ, ನಿನಗೆ ನನ್ನ ನಮಸ್ಕಾರಗಳು. ಆಯಿತು ನೀನು ಹೇಳಿದಂತೆ ನಿನ್ನ ಪ್ರಶ್ನೆಗಳನ್ನು ಉತ್ತರಿಸುವವರೆಗೂ ನಾನು ಒಂದು ಹನಿಯನ್ನೂ ಮುಟ್ಟುವುದಿಲ್ಲ. ನಿನ್ನ ಪ್ರಶ್ನೆಗಳೇನು ಕೇಳು" ಎಂದು ಹೇಳಿ, ಅವನು ಕೇಳುವ ಪ್ರಶ್ನೆಗಳಿಗಾಗಿ ಎದುರು ನೋಡಿದ.

ಆ    ಅದೃಶ್ಯವಾಣಿ ಯಕ್ಷನದಾಗಿತ್ತು. ಅವನು ಪ್ರಶ್ನೆಗಳನ್ನು ಪ್ರಾರಂಭಿಸಿದ.

ಪ್ರ : "ಸೂರ್ಯೋದಯ ಸೂರ್ಯಾಸ್ತವಾಗಲು ಯಾರು ಕಾರಣರು?"

ಉ : "ಬ್ರಹ್ಮ, ಸೃಷ್ಟಿಕರ್ತನಾದ ಅವನೇ ಸೂರ್ಯ ಹುಟ್ಟಲು, ಮುಳುಗಲು ಕಾರಣನಾಗಿದ್ದಾನೆ."

ಪ್ರ : "ಬ್ರಾಹ್ಮಣನು ಹೇಗೆ ಆಗುತ್ತಾನೆ? ಎರಡನೇ ಜನ್ಮ ಅವನಿಗೆ ಯಾವಾಗ ಲಭಿಸುತ್ತದೆ?"

ಉ : ವೇದಶಾಸ್ತ್ರಗಳ ಅಧ್ಯಯನದಿಂದ ಬ್ರಾಹ್ಮಣನಾಗುತ್ತಾನೆ. ಮಗನಾಗಿ ಹುಟ್ಟಿ ಬುದ್ಧಿವಂತನಾಗಿ, ಪೂಜೆ ಮಾಡುತ್ತ, ಗುರುಸೇವೆ ಮಾಡಿದಾಗ ಎರಡನೆ ಜನ್ಮ ಪಡೆಯುತ್ತಾನೆ."

ಪ್ರ : ಅಪಾಯದಲ್ಲಿ ಮನುಷ್ಯನನ್ನು ರಕ್ಷಿಸುವುದು ಯಾವುದು?

ಉ : "ಧೈರ್ಯ".

ಪ್ರ : "ಭೂಮಿಗಿಂತ ದೊಡ್ಡದು ಯಾವುದು?"

ಉ : "ತಾಯಿ"

ಪ್ರ : "ಕ್ಷತ್ರಿಯನ ಕೀರ್ತಿ ಯಾವುದರಿಂದ?"

ಉ : "ಯುದ್ಧದಲ್ಲಿ ಶಸ್ತ್ರಾಸ್ತ್ರ ಪ್ರಯೋಗದಿಂದ ಮತ್ತು ಯುದ್ಧ ಭೂಮಿಯಲ್ಲಿನ ಸಾವಿನಿಂದ."

ಪ್ರ : ಆಕಾಶಕ್ಕಿಂತ ಎತ್ತರದ್ದು ಯಾವುದು?

ಉ : "ತಂದೆ ಆಕಾಶಕ್ಕಿಂತ ಎತ್ತರ."

ಪ್ರ : ಗಾಳಿಗಿಂತ ವೇಗವಾದ್ದು ಯಾವುದು?"

ಉ : "ಮನಸ್ಸು ಗಾಳಿಗಿಂತ ವೇಗವಾದ್ದು."

ಪ್ರ : "ಪ್ರಯಾಣಿಕನ ಸ್ನೇಹಿತ ಯಾರು?"

ಉ : "ಕಲಿಕೆ ಪ್ರಯಾಣಿಕನ ಸ್ನೇಹಿತ."

ಪ್ರ : "ಮನೆಯಲ್ಲಿ ಇರುವವರಿಗೆ ಸ್ನೇಹಿತರು ಯಾರು?"

ಉ : "ಮನೆಯಲ್ಲಿ ಇರುವ ಹೆಂಡತಿಯೇ ಸ್ನೇಹಿ."

ಪ್ರ : "ಸಾವಿನಲ್ಲಿ ಜೊತೆ ಬರುವುದು ಯಾವುದು?"

ಉ : "ಧರ್ಮ."

ಪ್ರ : **ಬಹುದೊಡ್ಡ ಪಾತ್ರೆ ಯಾವುದು?**

ಉ : ಭೂಮಿ

ಪ್ರ : **ಸಂತೋಷವೆಂದರೇನು?**

ಉ : ಒಳ್ಳೆಯ ನಡತೆಯ ಪರಿಣಾಮ

ಪ್ರ : **ಏನನ್ನು ಬಿಟ್ಟರೆ ಎಲ್ಲರಿಗೂ ಪ್ರಿಯನಾಗುತ್ತಾನೆ?"**

ಉ : ಅಹಂಕಾರವನ್ನು ಬಿಟ್ಟರೆ ಎಲ್ಲರಿಗೂ ಪ್ರಿಯನಾಗುತ್ತಾನೆ.

ಪ್ರ : **ಮನುಷ್ಯನ ಬಹು ದೊಡ್ಡ ಶತ್ರು ಯಾವುದು?**

ಉ : ಕೋಪ. ಕೋಪವೇ ಮನುಷ್ಯನ ಪರಮಶತ್ರು

ಪ್ರ : **ಏನನ್ನು ಬಿಟ್ಟರೆ ಮನುಷ್ಯ ಶ್ರೀಮಂತನಾಗುತ್ತಾನೆ?**

ಉ : ಆಸೆ. ಆಸೆಯನ್ನು ಬಿಡುವುದರಿಂದ ಮನುಷ್ಯ ನಿಜವಾದ ಶ್ರೀಮಂತನಾಗುತ್ತಾನೆ.

ಪ್ರ : **ನಿಜವಾದ ಬ್ರಾಹ್ಮಣನಾಗುವುದು ಯಾವುದರಿಂದ? ಹುಟ್ಟಿನಿಂದಲೇ? ಒಳ್ಳೆಯ ನಡತೆಯಿಂದಲೇ ಅಥವಾ ಜ್ಞಾನ ಸಂಪಾದನೆಯಿಂದಲೇ?"**

ಉ : ಒಳ್ಳೆಯ ನಡತೆಯಿಂದ ಮಾತ್ರವೇ ನಿಜವಾದ ಬ್ರಾಹ್ಮಣನಾಗುತ್ತಾನೆ. ವೇದಶಾಸ್ತ್ರಗಳನ್ನು ಓದಿದ ಮಾತ್ರಕ್ಕೆ ಅವನು ಬ್ರಾಹ್ಮಣ ಆಗುವುದಿಲ್ಲ.

ಪ್ರ : **ಮನುಷ್ಯನ ಪರಮ ಮಿತ್ರ ಯಾರು?**

ಉ : ಸಹನೆ, ಸಹನೆಯೇ ಮನುಷ್ಯನ ಪರಮ ಮಿತ್ರ.

ಪ್ರ : **ಭೂಮಿಗಿಂತ ಭಾರವಾದ್ದು ಯಾವುದು?**

ಉ : ತಾಯಿ ಋಣ. ಇದೇ ಭೂಮಿಗಿಂತ ಭಾರವಾದ್ದು

ಪ್ರ : **ಕಣ್ಣು ಬಿಟ್ಟುಕೊಂಡು ಮಲಗುವವರು ಯಾರು?**

ಉ : ಮೀನುಗಳು. ಇವು ಕಣ್ಣು ಮುಚ್ಚದೆ ಮಲಗುತ್ತವೆ.

ಪ್ರ : **ಶ್ರೇಷ್ಠ ಸಂಪತ್ತು ಯಾವುದು?**

ಉ : ಜ್ಞಾನವೇ ಶ್ರೇಷ್ಠ ಸಂಪತ್ತು

ಪ್ರ : **ಶ್ರೇಷ್ಠವಾದ ಲಾಭ ಯಾವುದು?**

ಉ : ಆರೋಗ್ಯವೇ ಶ್ರೇಷ್ಠ ಲಾಭ

ಪ್ರ : **ಕೃತಜ್ಞತೆ ಗಳಿಸುವುದು ಯಾವುದು?**

ಉ : ಬುದ್ಧಿ ಕೃತಜ್ಞತೆಯನ್ನು ಗಳಿಸುತ್ತದೆ

**ಪ್ರ : ಯಾವುದು ಪರಮ ಸುಖ?**

ಉ : ತೃಪ್ತಿಯೇ ಪರಮ ಸುಖ

**ಪ್ರ : ಪ್ರತಿದಿನದ ಅತಿಥಿ ಯಾರು?**

ಉ : ಅಗ್ನಿಯೇ ಪ್ರತಿದಿನದ ಅತಿಥಿ

**ಪ್ರ : ಮನುಷ್ಯನಿಗೆ ಶ್ರೇಷ್ಠ ಧರ್ಮ ಯಾವುದು?**

ಉ : "ದಯೆಯೇ ಮನುಷ್ಯನ ಶ್ರೇಷ್ಠ ಧರ್ಮ."

**ಪ್ರ : ಯಾವುದರಿಂದ ಕೀರ್ತಿ ಬರುತ್ತದೆ?**

ಉ : ಔದಾರ್ಯದಿಂದ ಕೀರ್ತಿ ಬರುತ್ತದೆ

**ಪ್ರ : ಸ್ವರ್ಗಕ್ಕೆ ದಾರಿ ಯಾವುದು?**

ಉ : ಸತ್ಯವೇ ಸ್ವರ್ಗಕ್ಕೆ ದಾರಿ

**ಪ್ರ : ಸಂತೋಷ ಯಾವುದರಿಂದ**

ಉ : ಚಾರಿತ್ರ್ಯದಿಂದ, ನಡತೆಯಿಂದ ಸಂತೊಷ ದೊರೆಯುತ್ತದೆ

**ಪ್ರ : ಯಾವುದನ್ನು ಅಮೃತವೆನ್ನುತ್ತೇವೆ?**

ಉ : ಹಸುವಿನ ಹಾಲನ್ನು ಅಮೃತವೆನ್ನುತ್ತೇವೆ

**ಪ್ರ : ಸತ್ತವನಿಗೆ ಸಮಾನವಾದ್ದು ಯಾವುದು?**

ಉ : ಕಾಸಿಲ್ಲದವನು ಸತ್ತವನಿಗೆ ಸಮಾನ

**ಪ್ರ : ಸುಖವಾಗಿರುವ ವ್ಯಕ್ತಿ ಯಾರು?**

ಉ : ಸಾಲವೇ ಇಲ್ಲದವನು ಸುಖವಾದ ವ್ಯಕ್ತಿ

**ಪ್ರ : ಒಂಟಿಯಾಗಿ ಚಲಿಸುವವರು ಯಾರು?**

ಉ : ಸೂರ್ಯ ಒಂಟಿಯಾಗಿ ಚಲಿಸುತ್ತಾನೆ.

**ಪ್ರ : ಯುಧಿಷ್ಠಿರ, ನಾನು ನಿನಗೆ ಯಾರನ್ನು ಬದುಕಿಸಲೆಂದು ಕೇಳಿದರೆ, ನಿನ್ನ ಆಯ್ಕೆ ಯಾವುದು?**

ಉ : ಮಹಾನುಭಾವ, ನನ್ನ ತಮ್ಮಂದಿರಲ್ಲಿ ಯಾರನ್ನಾದರೂ ಒಬ್ಬರನ್ನು ಮಾತ್ರವೇ ಬದುಕಿಸುವೆನೆಂದರೆ, ನನ್ನ ತಮ್ಮ ನಕುಲನನ್ನು ಬದುಕಿಸು.

**ಪ್ರ : ನಕುಲನೇ ಏಕೆ ಬದುಕಬೇಕು? ಅರ್ಜುನ, ಭೀಮ ಇಬ್ಬರೂ ಇಲ್ಲವೇ? ಅವರು ನಿನಗೆ ಪ್ರಿಯರಲ್ಲವೇ?**

ಉ : ಅವರೆಂದರೆ ನನಗೆ ಪ್ರಾಣ, ನಿಜ. ಆದರೆ ನನ್ನ ಅಮ್ಮನನ್ನು ಪ್ರತಿನಿಧಿಸಲು ನಾನಿನ್ನೂ ಬದುಕಿದ್ದೇನೆ. ನನಗೆ ಎರಡನೆ ತಾಯಿಯೂ ಇದ್ದಾಳೆ. ಅವಳಿಂದ ಹುಟ್ಟಿದವನು ನಕುಲ. ಅವಳ ಹೆಸರು ಹೇಳಲು, ಪ್ರತಿನಿಧಿಸಲು ನಕುಲ ಬದುಕುಳಿಯಬೇಕು. ಆಗ ಇಬ್ಬರು ತಾಯಂದಿರಿಗೂ ನ್ಯಾಯ ಸಂದಂತೆ ಆಗುತ್ತದೆ.

ಯುಧಿಷ್ಠಿರನ ಉತ್ತರಗಳನ್ನು ಕೇಳಿ ಯಕ್ಷ ರೋಮಾಂಚಿತನಾದ. ಒಂದು ಕ್ಷಣವೂ ಯೋಚಿಸಲು ತಡೆಯದೆ, ತತ್ಕ್ಷಣವೇ ಸಮರ್ಥವಾಗಿ ಉತ್ತರಿಸಿದ ಅವನ ಬುದ್ಧಿ ಮೇಧಾಶಕ್ತಿಗಳಿಗೆ ಸೋತು ಕೂಡಲೇ ಅವನ ಎಲ್ಲ ತಮ್ಮಂದಿರನ್ನೂ ಬದುಕಿಸಿದ. ತನ್ನ ಸಂತೋಷ, ಮೆಚ್ಚುಗೆಯ ಪ್ರತೀಕವಾಗಿ ಏನನ್ನಾದರೂ ವರವನ್ನು ಕೇಳಿಕೊಳ್ಳುವಂತೆ ಸೂಚಿಸಿದ.

ಯುಧಿಷ್ಠಿರ ತಮಗಾಗಿ ಏನನ್ನೂ ಕೇಳಲಿಲ್ಲ. ಬ್ರಾಹ್ಮಣನ ಅರಣಿಯನ್ನು ಹಿಂದಕ್ಕೆ ಕೊಡುವಂತೆ ಕೇಳಿದ. ಜಿಂಕೆಯೊಂದು ಮರಕ್ಕೆ ಮೈ ಉಜ್ಜುವಾಗ ಅದರ ಕೊಂಬೆಗಳಿಗೆ ಸಿಕ್ಕುಹಾಕಿಕೊಂಡಿತ್ತೆಂದು ತಿಳಿಸಿದ.

ಯಕ್ಷ ಇದನ್ನು ಕೇಳಿ ನಕ್ಕು ಹೇಳಿದ, "ಯುಧಿಷ್ಠಿರ ಆ ಜಿಂಕೆ ಬೇರೆ ಯಾರೂ ಅಲ್ಲ ನಾನೇ! ನಾನು ಯಕ್ಷನೂ ಅಲ್ಲ. ನಾನು ಯಮಧರ್ಮ, ನಿನ್ನ ತಂದೆ. ನಿನ್ನನ್ನು ಇಲ್ಲಿಗೆ ಬರಮಾಡಿ ಕೊಳ್ಳಬೇಕೆಂದು, ನಿನ್ನ ಬುದ್ಧಿಶಕ್ತಿ ಪರೀಕ್ಷಿಸಬೇಕೆಂದು ಇದನ್ನೆಲ್ಲ ಮಾಡಿದೆ.... ಮಗು ಇನ್ನೇನು ಹನ್ನೆರಡು ವರ್ಷ ವನವಾಸ ಮುಗಿಯುತ್ತಾ ಬಂದಿದೆ. ಇನ್ನು ಒಂದು ವರ್ಷ ಮಾತ್ರ ಉಳಿದಿದೆ. ಅಜ್ಞಾತವಾಸದ ಆ ಅವಧಿಯನ್ನೂ ಇಷ್ಟರಲ್ಲಿಯೇ ಪೂರೈಸುತ್ತೀರಿ. ಆ ಅವಧಿಯಲ್ಲಿ ಯಾರಿಗೂ ನಿಮ್ಮ ಗುರುತು ಸಿಗದಿರಲಿ ಎಂದು ವರ ಕೊಡುತ್ತೇನೆ. ನಿಮಗೆಲ್ಲ ಯಶಸ್ಸು ಸಿಗಲಿ" ಎಂದು ಸಂತೋಷದಿಂದ ಹಾರೈಸಿದ. ಅದೃಶ್ಯನಾದ.

ಸತ್ತು ಬಿದ್ದಿದ್ದ ಪಾಂಡವ ಸೋದರರು ನಿದ್ದೆ ತಿಳಿದವರಂತೆ ಎದ್ದು ಅಚ್ಚರಿಪಟ್ಟು ಅಣ್ಣ ಯುಧಿಷ್ಠಿರನಿಂದ ಎಲ್ಲವನ್ನೂ ಕೇಳಿ ತಿಳಿದು, ತಮ್ಮ ಕುಟೀರದತ್ತ ಯುಧಿಷ್ಠಿರನೊಂದಿಗೆ ಹೆಜ್ಜೆ ಹಾಕಿದರು.



## ವಿರಾಟನಗರದಲ್ಲಿ ಪಾಂಡವರು

ಪಾಂಡವರು ಹನ್ನೆರಡು ವರ್ಷದ ವನವಾಸವನ್ನು ಮುಗಿಸಿ ಒಂದು ವರ್ಷದ ಅಜ್ಞಾತವಾಸಕ್ಕೆ ಸಜ್ಜಾಗುತ್ತಿದ್ದರು. ಹೇಗೆ ತಮ್ಮನ್ನು ಗುರುತಿಸಲಾಗದಂತೆ, ಪತ್ತೆ ಹಚ್ಚಲಾಗದಂತೆ ಇರಿಸಿಕೊಳ್ಳಬೇಕೆಂದು ಯೋಚಿಸುತ್ತಿದ್ದರು.

ಕಡೆಗೆ ವಿರಾಟನಗರವನ್ನು ತಮ್ಮ ಅಜ್ಞಾತವಾಸಕ್ಕೆ ಯೋಗ್ಯವೆಂದು, ಸರಿಯಾದ ಸ್ಥಳವೆಂದು ನಿರ್ಧರಿಸಿದರು. ಅದೇ ಅವರಿಗೆ ಸುರಕ್ಷಿತ ಸ್ಥಳವೆನಿಸಿತು. ಕೂಡಲೇ ಅವರು ವಿರಾಟನಗರಕ್ಕೆ ಪ್ರಯಾಣ ಬೆಳೆಸಿದರು.

ವಿರಾಟನಗರವನ್ನು ತಲುಪಿದ ಮೇಲೆ ರಾಜನನ್ನು ಕಂಡು ತಮಗೆ ಅವರಲ್ಲಿ ಯಾವುದಾದರೂ ಸೂಕ್ತ ಕೆಲಸಗಳನ್ನು ನೀಡಬೇಕೆಂದು ಕೋರಿದರು. ವಿರಾಟ ಕೂಡಲೇ ಒಪ್ಪಿ, ಅವರು ಯಾವ ಯಾವ ಕೆಲಸಗಳನ್ನು ಮಾಡಬಲ್ಲರೆಂದು ವಿಚಾರಿಸಿದ.

ಯುಧಿಷ್ಠಿರ ತನಗೆ ಧರ್ಮಶಾಸ್ತ್ರಗಳ ಪರಿಚಯ. ಜೂಜಾಟದಲ್ಲಿ ಪರಿಣತಿ, ಆಡಳಿತದಲ್ಲಿ ಆಸಕ್ತಿ, ಹಸ್ತಸಾಮುದ್ರಿಕ, ಜ್ಯೋತಿಷ್ಯ ಮೊದಲಾದವುಗಳು ತಿಳಿದಿವೆಯಲ್ಲದೆ ದೊರೆಗೆ ಹತ್ತಿರದವನಾಗಿದ್ದು ಸಹಕರಿಸುತ್ತೇನೆಂದು ಹೇಳಿದ. ತನ್ನನ್ನು ಕಂಕಭಟ್ಟನೆಂದು ಪರಿಚಯಿಸಿಕೊಂಡ. ಹಾಗೆಯೇ ಪ್ರತಿಯೊಬ್ಬರೂ ತಾವು ಮಾಡಬಲ್ಲ ಕೆಲಸಗಳ ಬಗ್ಗೆ ಹೇಳಿ ವಿರಾಟನ ಅರಮನೆಯಲ್ಲಿ ಆಶ್ರಯ ಪಡೆದರು.

ಭೀಮ ವಲಲನೆಂಬ ಹೆಸರಿನಲ್ಲಿ ಅಡಿಗೆ ಮನೆ ವ್ಯವಹಾರವನ್ನು ನೋಡಿಕೊಂಡ. ಅರ್ಜುನ ಬೃಹನ್ನಳೆ ಹೆಸರಿನಲ್ಲಿ ವಿರಾಟನ ಮಗಳಾದ ಉತ್ತರೆಗೆ ನಾಟ್ಯ ಗುರುವಾದ. ನಕುಲ, ಸಹದೇವರು ಕುದುರೆಗಳನ್ನು, ಹಸುಗಳನ್ನು ನೋಡಿಕೊಳ್ಳುವ ಜವಾಬ್ದಾರಿ ಹೊತ್ತರು. ಕಡೆಯದಾಗಿ

ದ್ರೌಪದಿ ವಿರಾಟನ ರಾಣಿ ಸುದೇಷ್ಣೆಯ ಸೇವೆಯಲ್ಲಿ, ಸೈರಂಧ್ರಿ ಎಂಬ ಹೆಸರಿನಲ್ಲಿ ಉಳಿದಳು.

ಒಟ್ಟಿನಲ್ಲಿ ಪಾಂಡವರೆಲ್ಲರೂ ಬೇರೆ ಬೇರೆ ಹೆಸರುಗಳಲ್ಲಿ ಒಂದೇ ಕಡೆ ಇದ್ದರು. ಆದರೆ ಅವರು ಪಾಂಡವರು ಎಂಬ ಸತ್ಯ ಒಂದಿಷ್ಟೂ ತಿಳಿಯದಂತೆ ಎಚ್ಚರಿಕೆ ವಹಿಸಿದರು. ಒಂದು ವೇಳೆ ತಮ್ಮ ಗುರುತು ಇವರಿಗೆ ಹತ್ತಿ, ದುರ್ಯೋಧನನಿಗೆ ತಲುಪಿದರೆ ಕೆಲಸ ಕೆಡುತ್ತದೆ ಎಂಬ ಭೀತಿ ಅವರನ್ನು ಜಾಗರೂಕತೆಯಿಂದ ಇರಲು ಎಚ್ಚರಿಸುತ್ತಿತ್ತು.

ಅಜ್ಞಾತದಲ್ಲಿ ಇರುವ ಪಾಂಡವರಿಗೆ ವಿರಾಟನ ಅರಮನೆಯಲ್ಲಿ ಯಾವುದೇ ತೊಂದರೆಯಿಲ್ಲದೆ ಇದ್ದರಾದರೂ ದ್ರೌಪದಿಗೆ ಮಾತ್ರ ಸಮಸ್ಯೆಗಳು ಕಾಡಿದವು. ವಿರಾಟನ ರಾಣಿ ಸುದೇಷ್ಣೆಯ ತಮ್ಮ ಕೀಚಕ, ವಿರಾಟನ ಸೇನಾಪತಿಯಾಗಿದ್ದ. ವಯಸ್ಸಾಗಿದ್ದ ವಿರಾಟ, ಈ ಕೀಚಕನ ಶಕ್ತಿ, ಸಾಮರ್ಥ್ಯಗಳನ್ನೇ ನೆಚ್ಚಿಕೊಂಡಿದ್ದ. ಕೀಚಕನಾದರೋ ಎಷ್ಟು ಪ್ರಬಲನಾಗಿದ್ದನೆಂದರೆ, ಜನ ಅವನನ್ನೇ ರಾಜನೆಂದು ನಂಬುವಂತಾಗಿತ್ತು. ವಿರಾಟ ಕೇವಲ ಹೆಸರಿಗೆ ಮಾತ್ರ ರಾಜನಾಗಿದ್ದ. ಆದ್ದರಿಂದ ಕೀಚಕನನ್ನು ಪ್ರಶ್ನಿಸುವವರೇ ಇರಲಿಲ್ಲ. ಸುದೇಷ್ಣೆಗೆ ಸೋದರನೆಂದರೆ ಪ್ರಾಣ. ಅವನು ಏನೇ ಬೇಡಿದರೂ ಅದನ್ನು ಪೂರೈಸಿ ಕೊಡುತ್ತಿದ್ದಳು.

ಒಂದು ದಿನ ದ್ರೌಪದಿ ಸುದೇಷ್ಣೆಯ ಅಂತಃಪುರದ ಕಡೆಗೆ ಹೋಗುತ್ತಿದ್ದುದನ್ನು ಕೀಚಕ ನೋಡಿದ. ಈ ಹೊಸ ಮುಖ ನೋಡಿ ಅವನಿಗೆ ಆಶ್ಚರ್ಯವಾಯಿತು. ಇಂತಹ ಸೌಂದರ್ಯವತಿ ಹೆಣ್ಣು ಯಾರು? ಅಕ್ಕನ ಅಂತಃಪುರದ ಕಡೆ ಯಾಕೆ ಹೋಗುತ್ತಿದ್ದಾಳೆ? ಎನ್ನುವ ಕುತೂಹಲ ಉಂಟಾಯಿತು. ಅಲ್ಲದೆ ಮೊದಲ ನೋಟದಲ್ಲೆ ಅವಳ ಸೌಂದರ್ಯಕ್ಕೆ ಮಾರು ಹೋಗಿದ್ದ. ಅವಳ ಬಗ್ಗೆ ಬಯಕೆಯುಂಟಾಯಿತು.

ಅಕ್ಕನನ್ನು ಕಂಡು ಅವಳ ಬಗ್ಗೆ ತಿಳಿದುಕೊಂಡ. ಹಾಗೆಯೇ ತನ್ನ ಬಯಕೆಯನ್ನೂ ತಿಳಿಸಿದ. ಸುದೇಷ್ಣೆಗೆ ತಮ್ಮನ ಈ ಮಾತುಗಳು ಹಿಡಿಸಲಿಲ್ಲ. ಆದರೂ ಅವನಿಗೆ ಏನು ಹೇಳಲೂ ಮನಸ್ಸು ಒಪ್ಪಲಿಲ್ಲ. "ಸೋದರ ಆ ಪವಿತ್ರ ಹೆಣ್ಣಿನ ಬಗ್ಗೆ ಕಣ್ಣು ಹಾಕಬೇಡ. ಅವಳು ಸಾಮಾನ್ಯ ಹೆಣ್ಣಲ್ಲ.

ಅವಳಿಗೆ ಐದು ಜನ ಗಂಧರ್ವ ಪತಿಗಳಿದ್ದಾರೆ. ಯಾರಾದರೂ ಅವಳ ತಂಟೆಗೆ ಹೋದರೆ, ಅವಮಾನ ಮಾಡಿದರೆ ಅವರು ಸುಮ್ಮನೆ ಬಿಡುವುದಿಲ್ಲ. ಅಲ್ಲದೆ ಅವಳು ಸುಲಭವಾಗಿ ಒಪ್ಪುವುದೂ ಇಲ್ಲ" ಎಂದು ಎಚ್ಚರಿಕೆ ನೀಡುವುದನ್ನು ಮರೆಯಲಿಲ್ಲ.

ಕೀಚಕ ಇದ್ಯಾವುದನ್ನೂ ಲೆಕ್ಕಿಸಲಿಲ್ಲ. ದ್ರೌಪದಿಯನ್ನು ಒಮ್ಮೆ ಕಂಡಾಗ, "ಎಲೈ ಸುಂದರಿಯೆ ನಾನು ನಿನಗೆ ಮೋಹಿತನಾಗಿದ್ದೇನೆ. ಅವರಿವರ ಸೇವೆ ಮಾಡುತ್ತ ನಿನ್ನ ಸೌಂದರ್ಯವನ್ನೇಕೆ ಹಾಳು ಮಾಡಿಕೊಳ್ಳುತ್ತಿರುವಿ? ನನ್ನ ಹೆಂಡತಿಯಾಗಲು ಒಪ್ಪಿಗೆ ನೀಡು. ನಿನ್ನನ್ನು ರಾಣಿಯನ್ನಾಗಿ ಮಾಡುತ್ತೇನೆ. ಒಳ್ಳೆ ರಾಜಭೋಗ ನಿನ್ನದಾಗುತ್ತದೆ" ಎಂದು ಹೇಳಿದನು.

ದ್ರೌಪದಿ ಕೋಪಗೊಂಡು ಎಚ್ಚರಿಕೆಯ ದನಿಯಲ್ಲಿ, "ಈ ರೀತಿ ಮಾತಾಡಲು ನೀನು ಯಾರು? ಎಷ್ಟು ಧೈರ್ಯ? ನನ್ನ ಗಂಡಂದಿರಿಗೆ ನಿನ್ನ ವಿಚಾರ ತಿಳಿಸಿದರೆ ನಿನ್ನನ್ನು ಮುಗಿಸಿ ಬಿಡುತ್ತಾರೆ. ಇಲ್ಲ ನಿನ್ನ ಕೈಕಾಲು ಮುರಿದು ಮೂಲೆ ಕೂರಿಸುತ್ತಾರೆ" ಎಂದು ಉತ್ತರಿಸಿದಳು.

ಅವಳ ಬೆದರಿಕೆಯ ಮಾತುಗಳು ಕೀಚಕನ ಮೇಲೆ ಯಾವುದೇ ಪ್ರಭಾವ ಬೀರಲಿಲ್ಲ. ಅವಳ ಮೇಲೆ ಅತ್ಯಾಚಾರ ಮಾಡಲು ಪ್ರಯತ್ನಿಸಿದ. ದ್ರೌಪದಿ ಕೂಗುತ್ತ ಅಲ್ಲಿಂದ ಓಡಿ ಹೇಗೋ ಪಾರಾದಳು.

ಆದರೆ ಕೀಚಕ ಮಾತ್ರ ಪ್ರತಿದಿನ ಅವಳ ಬೆನ್ನು ಬಿದ್ದು ಕಾಡುತ್ತಿದ್ದ. ದ್ರೌಪದಿಯ ಪಾಲಿಗೆ ಅವನು ದುಃಸ್ವಪ್ನವಾಗಿದ್ದ.

ದ್ರೌಪದಿ ಪ್ರತಿಭಟಿಸುತ್ತಿದ್ದರೂ ಪ್ರತಿ ದಿನಾ ಅವಳನ್ನು ಒಲಿಸಿಕೊಳ್ಳಲು ಹೊಸ ಹೊಸ ಉಪಾಯಗಳನ್ನು ಯೋಚಿಸುತ್ತಿದ್ದ. ಒಂದು ಸಲ ಸುದೇಷ್ಣೆಯನ್ನು ಕಂಡು ಯಾವುದಾದರೂ ಕೆಲಸ ಕೊಟ್ಟು ತನ್ನ ಬಳಿಗೆ ಅವಳನ್ನು ಕಳಿಸಿಕೊಡೆಂದು ಒತ್ತಾಯ ಮಾಡಿದ. ಸುದೇಷ್ಣೆಗೆ ಏನು ಹೇಳಬೇಕೊ ತಿಳಿಯಲಿಲ್ಲ. ಆದರೂ ತಮ್ಮನ ಮೇಲಿನ ಪ್ರೀತಿ ಅವನ ಒತ್ತಾಯಗಳಿಗೆ ಕಟ್ಟು ಬಿದ್ದು, ದ್ರೌಪದಿಯನ್ನು ಯಾವುದೋ ಒಂದು ಕೆಲಸ ಹೇಳಿ ಕೀಚಕನಲ್ಲಿಗೆ ಹೋಗೆಂದಳು.

ವಿಧಿಯಿಲ್ಲದೆ ಒಲ್ಲದ ಮನಸ್ಸಿನಿಂದ ದ್ರೌಪದಿ ಕೀಚಕನಲ್ಲಿಗೆ ಹೋದಳು. ಅವಳಿಗಾಗಿ ಕಾತರದಿಂದ ಕಾಯುತ್ತಿದ್ದವನು ಒಮ್ಮೆಲೇ ಉತ್ಸಾಹದಿಂದ

ಎದ್ದು ಅವಳ ಬಳಿಗೆ ಬಂದು ತನ್ನನ್ನು ಪ್ರೀತಿಸಲು ಒತ್ತಾಯಿಸಿದ. ದ್ರೌಪದಿ ಅವನ ಬಿಗಿ ಹಿಡಿತದಿಂದ ಬಿಡಿಸಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಾ ಓಡುತ್ತಾ ವಿರಾಟರಾಜನ ಬಳಿಗೆ ಬಂದಳು. ಪಗಡೆಯಾಟದಲ್ಲಿ ಮಗ್ನರಾಗಿದ್ದ ವಿರಾಟನಾಗಲೀ ಕಂಕಭಟ್ಟನಾಗಲಿ ಅವಳ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. ತಮ್ಮ ಆಟದಲ್ಲಿ ಮಗ್ನರಾಗಿದ್ದರು. ನಿರಾಶೆಗೊಂಡ ದ್ರೌಪದಿ ಉಳಿದ ಪಾಂಡವರ ಬಳಿಗೆ ಹೋದಳು. ಆದರೆ ಯಾರೊಬ್ಬರೂ ಅವಳ ಸಹಾಯಕ್ಕೆ ಮುಂದಾಗಲಿಲ್ಲ. ಕಾರಣ ಅವರ ರಹಸ್ಯ ಎಲ್ಲಿ ಬಯಲಾಗುವುದೋ ಎಂದು ಹೆದರಿದ್ದರು.

ಕಡೆಗೆ ದ್ರೌಪದಿ ಒಂದು ದಿನ ಯಾರೂ ಇಲ್ಲದ ಸಮಯ ನೋಡಿ ಭೀಮನನ್ನು ಕಾಣಲು ಅಡಿಗೆ ಮನೆಗೆ ಹೋದಳು. ಭೀಮನನ್ನು ಕಂಡು ತನ್ನ ದುಃಖವನ್ನು ತೋಡಿಕೊಂಡಳು. ಅವಳ ದುಃಖದಿಂದ ಭೀಮ ಕರಗಿಹೋದ. ಕೀಚಕನಿಗೆ ಬುದ್ಧಿ ಕಲಿಸುವುದಾಗಿ ಭರವಸೆ ನೀಡಿದ. "ನನ್ನ ಅಣ್ಣಂದಿರ ಚಿಂತೆ ನನಗಿಲ್ಲ. ನೀನು ಹೀಗೆ ದುಃಖಿಸುವುದನ್ನು ನಾನು ನೋಡಲಾರೆ. ಈಗ ನೀನು ಹೋಗು. ನಾನು ಏನಾದರೂ ಉಪಾಯವನ್ನು ಯೋಚಿಸುತ್ತೇನೆ" ಎಂದು ಹೇಳಿ ಸಮಾಧಾನ ಪಡಿಸಿ ಕಳಿಸಿದ.

ಮಾರನೆಯ ದಿನ ದ್ರೌಪದಿ ರಹಸ್ಯವಾಗಿ ಭೀಮನನ್ನು ಭೇಟಿಯಾದಳು. ಅವನು ಅವಳಿಗೆ, "ದ್ರೌಪದಿ, ನೀನು ಕೀಚಕನಿಗೆ ಒಲಿದಂತೆ ನಟಿಸು. ನರ್ತನ ಶಾಲೆಗೆ ಒಬ್ಬನನ್ನೇ ಬರಲು ಹೇಳು. ನಿನ್ನ ವೇಷದಲ್ಲಿ ನಾನು ಹೋಗುತ್ತೇನೆ. ಮುಂದೆ ಏನಾಗುವುದೋ ನೀನೇ ನೋಡುತ್ತಿರು" ಎಂದು ಉಪಾಯವನ್ನು ಹೇಳಿಕೊಟ್ಟು ಕಳಿಸಿದ.

ದ್ರೌಪದಿಯ ಮನಸ್ಸಿಗೆ ಇದರಿಂದ ಸಂತೋಷವಾಯಿತು. ನೆಮ್ಮದಿ ಯಾಯಿತು. ಮರುದಿನ ಕೀಚಕನನ್ನು ಭೇಟಿಯಾದಳು. ಬಹಳ ಗೆಲುವಾಗಿ ಇರುವಂತೆ ಕಾಣಿಸಿಕೊಂಡಳು. "ಕೀಚಕನೇ ನೀನು ಏನೆಂಬುದು ನನಗೀಗ ಅರ್ಥವಾಗಿದೆ. ನಿನ್ನ ಪ್ರೀತಿಯ ಒತ್ತಾಯಕ್ಕೆ ಸೋತಿದ್ದೇನೆ. ಆದರೆ ನಮ್ಮಿಬ್ಬರ ಸಂಬಂಧ ನನ್ನವರಿಗಾಗಲೀ ನಿನ್ನವರಿಗಾಗಲೀ ತಿಳಿಯಬಾರದಲ್ಲ! ಅದಕ್ಕಾಗಿ

ಈ ರಾತ್ರಿ ನೀನೊಬ್ಬನೇ ನರ್ತನ ಶಾಲೆಗೆ ಬಾ. ನಾನು ನಿನಗಾಗಿ ಕಾದಿರುತ್ತೇನೆ" ಎಂದು ವಿಶ್ವಾಸ ಬರುವಂತೆ ಮಾತನಾಡಿದಳು.

ಕೀಚಕನಿಗೆ ಸ್ವರ್ಗ ಮೂರೇ ಗೇಣು ಎನಿಸಿತು. ದ್ರೌಪದಿಯೊಂದಿಗೆ ಕಳೆಯುವ ಸುಖದ ಕ್ಷಣಗಳ ಕನಸು ಕಾಣುತ್ತ ಮರುದಿನಕ್ಕಾಗಿ ಕಾದು ಕುಳಿತ.

ಹೇಳಿದಂತೆ ಮಾರನೆ ದಿನ ನರ್ತನಶಾಲೆಗೆ ಸರ್ವಾಲಂಕೃತನಾಗಿ, ಪಾನಮತ್ತನಾಗಿ ಬಂದ. ಬರುತ್ತಿದ್ದಂತೆ ದ್ರೌಪದಿಗಾಗಿ ಅತ್ತ ಇತ್ತ ಹುಡುಕಾಡಿದ. ತನಗಿಂತ ಸ್ವಲ್ಪ ದೂರದಲ್ಲಿ ಮಂಚದ ಮೇಲೆ ಕುಳಿತಿದ್ದ ಹೆಣ್ಣಿನ ಆಕಾರವೊಂದು ಕಾಣಿಸಿತು. ದ್ರೌಪದಿಯೇ ತನಗಾಗಿ ಕಾಯುತ್ತಿದ್ದಾಳೆಂದು ಸಂಭ್ರಮದಿಂದ ಬಳಿಗೆ ಹೋದ. ಪ್ರೀತಿಯ ಮಾತುಗಳಾಡಿದ. ಮೆಲ್ಲಗೆ ಅವಳ ಮುಸುಕನ್ನು ಸರಿಸಲು ಪ್ರಯತ್ನಿಸಿದ. ಆದರೆ ಅಲ್ಲಿ ದ್ರೌಪದಿಗೆ ಬದಲಾಗಿ ಬೇರೆ ಯಾರೋ ಇದ್ದಂತೆನಿಸಿ ದಿಗ್ಭ್ರಮೆಗೊಂಡ. ಥಂಗನೆ ಎದ್ದು ಭೀಮ, ತಾನುಟ್ಟ ಸೀರೆಯನ್ನು ಬಿಸುಟು ಕೀಚಕನ ಮೇಲೆ ಬಿದ್ದ. ಕೀಚಕ ಇಂತಹ ಸನ್ನಿವೇಶ ಬರಬಹುದೆಂದು ಊಹಿಸಿರಲಿಲ್ಲವಾದ ಕಾರಣ ಅಸಹಾಯಕನಾಗಿ, ಏನು ಮಾಡಬೇಕೆಂದು ಯೋಚಿಸುತ್ತಿರುವಷ್ಟರಲ್ಲಿಯೇ ಭೀಮ ಅವನನ್ನೆತ್ತಿ ಗಿರಗಿರನೆ ತಿರುಗಿಸಿ ಕೆಳಗೆ ಒಗೆದ. ಮೇಲೆ ಏಳಲು ಕೂಡಾ ಸಾಧ್ಯವಾಗದಷ್ಟು ಏಟು ತಿಂದಿದ್ದ. ಅವನೆದೆ ಮೇಲೆ ಸವಾರಿ ಮಾಡಿ ಕತ್ತು ಹಿಸುಕಿ ಕೊಲ್ಲುವವರೆಗೂ ಭೀಮ ಸುಮ್ಮನಿರಲಿಲ್ಲ.

ಕೀಚಕನ ಸಾವಿನ ಸುದ್ದಿ ಕಾಳ್ಗಿಚ್ಚಿನಂತೆ ಹರಡಿತು. ಪ್ರಜೆಗಳು ಇಂತಹ ಶಕ್ತಿಶಾಲಿ ಸತ್ತದ್ದು ಹೇಗೆಂದು ಆಶ್ಚರ್ಯಪಟ್ಟರು.

ಯಾವುದೇ ಬಗೆಯ ಅನುಮಾನಕ್ಕೆ ದಾರಿಯಾಗಬಾರದೆಂದು, ತನ್ನ ಗಂಧರ್ವ ಪತಿಗಳಿಂದ ಕೀಚಕ ಸತ್ತನೆಂಬ ಸುದ್ದಿ ಹಬ್ಬಿಸಿದಳು. ತನ್ನನ್ನು ಕೆಡಿಸಲು ಪ್ರಯತ್ನಿಸಿ ತಾನಾಗಿಯೇ ಸಾವನ್ನು ಬರಮಾಡಿಕೊಂಡನೆಂದು ಪ್ರಚಾರ ಮಾಡಿದಳು. ಇದೆಲ್ಲ ತಿಳಿದ ಮೇಲೆ ಸುದೇಷ್ಣೆ ಹೌಹಾರಿದಳು. ದ್ರೌಪದಿಯಂಥವಳ ಸಹವಾಸವೇ ಬೇಡ ಎಂದುಕೊಂಡಳು. ಇವತ್ತು

ತಮ್ಮನಿಗಾದ ಗತಿ ನಾಳೆ ಇನ್ಯಾರಿಗಾದರೂ ಆಗಬಹುದೆಂದು ಹೆದರಿದಳು. ಅದಕ್ಕಾಗಿ ಇನ್ನು ಮುಂದೆ ಅವಳು ತನ್ನಲ್ಲಿ ಇರುವುದು ಬೇಡವೆನಿಸಿ, "ಸೈರಂಧ್ರಿ ದಯವಿಟ್ಟು ಇನ್ನು ಮುಂದೆ ನೀನು ಇಲ್ಲಿರಬೇಡ. ನಿನ್ನನ್ನು ನನ್ನ ಸೇವೆಯಲ್ಲಿ ಮುಂದುವರೆಸುವ ಧೈರ್ಯ ನನಗಿಲ್ಲ. ನಿನ್ನ ಗಂಧರ್ವ ಪತಿಗಳು ಯಾವಾಗ, ಹೇಗೆ ಬಂದು ಶಿಕ್ಷಿಸುತ್ತಾರೋ ತಿಳಿಯುವುದಿಲ್ಲ. ನಿನ್ನನ್ನು ಕಂಡರೆ ನನಗೆ ಅಭಿಮಾನವಿದೆ, ನಿಜ. ಆದರೆ ನಿನ್ನಿಂದ ಬರುವ ಅಪಾಯಗಳಿಗೆ ಹೆದರಿರುವುದರಿಂದ ನಿನ್ನನ್ನು ಇಲ್ಲಿ ಇರು ಎಂದು ಹೇಳಲು ಅಸಮರ್ಥಳಾಗಿದ್ದೇನೆ" ಎಂದು ವಿನಂತಿಸಿಕೊಂಡಳು.

ಆದರೆ ದ್ರೌಪದಿ, ತನ್ನನ್ನು ಇನ್ನೊಂದು ಹದಿಮೂರು ದಿವಸ ಮಾತ್ರ ಇರಿಸಿಕೊಳ್ಳೆಂದು ಪ್ರಾರ್ಥಿಸಿದಳು. ಕೇವಲ ಹದಿಮೂರು ದಿವಸ ಮಾತ್ರ ಯಾಕೆಂಬುದು ಸುದೇಷ್ಣೆಗೆ ಅರ್ಥವಾಗಲಿಲ್ಲ. ಅದಕ್ಕೆ ದ್ರೌಪದಿಯನ್ನೇ ಹದಿಮೂರು ದಿವಸಕ್ಕೆ ಮಾತ್ರ ಇರಲು ಕೇಳುತ್ತಿರುವೆಯೇಕೆ ಎಂದು ಪ್ರಶ್ನಿಸಿದಾಗ ದ್ರೌಪದಿ ಸಮಯ ಬಂದಾಗ ತಿಳಿಸುವುದಾಗಿ ಹೇಳಿ ಸುಮ್ಮನಾಗಿಸಿದಳು. ಸುದೇಷ್ಣೆ ಮತ್ತೆ ಪ್ರಶ್ನಿಸಲಿಲ್ಲ. ಆದರೆ ಅವಳು ಕೇಳಿದಷ್ಟು ದಿನ ಇರಲು ಅವಕಾಶವನ್ನು ನೀಡಿದಳು.



## ಮತ್ಸ್ಯ ದೇಶದ ಮೇಲೆ ಆಕ್ರಮಣ

ಹದಿಮೂರನೇ ವರ್ಷದ ಪ್ರಾರಂಭದಿಂದಲೇ ದುರ್ಯೋಧನ ಚಡಪಡಿಸಲು ಪ್ರಾರಂಭಿಸಿದ. ಪಾಂಡವರು ಹಿಂತಿರುಗಿ ಬರುತ್ತಾರೆ ಎಂಬುದೇ ಅವನ ಅಸಮಾಧಾನಕ್ಕೆ ದಾರಿಯಾಗಿತ್ತು. ಬಂದರೆ ಕಸಿದುಕೊಂಡ ರಾಜ್ಯವನ್ನು ಮರಳಿ ಕೊಡಬೇಕಾಗುವುದಲ್ಲ! ಎಂದು ಕೈ ಕೈ ಹಿಸುಕಿಕೊಂಡ. ಎಲ್ಲೆಲ್ಲೂ ಗುಪ್ತಚರರನ್ನು ನೇಮಿಸಿ ಅಜ್ಞಾತದಲ್ಲಿರುವ ಪಾಂಡವರನ್ನು ಹುಡುಕಿ ತೆಗೆಯಲು ಆದೇಶಿಸಿದ್ದ. ಆದರೆ ಕಡೆಗಳಿಗೆವರೆಗೂ ಪಾಂಡವರ ಬಗ್ಗೆ ಎಳ್ಳಷ್ಟು ಸುದ್ದಿ ತಿಳಿದು ಬರಲಿಲ್ಲ.

ಇದ್ದಕ್ಕಿದ್ದಂತೆ ಒಂದು ದಿನ ಕೀಚಕನು ಸತ್ತ ಸುದ್ದಿ ಬಂತು. ಅವನಿಗೆ ಆಶ್ಚರ್ಯವಾಯಿತು. ಕೀಚಕನನ್ನು ಯಾರಿಂದಲೂ ಕೊಲ್ಲುವುದು ಸಾಧ್ಯವಿರಲಿಲ್ಲ. ಅಂಥಾದ್ದರಲ್ಲಿ ಅವನನ್ನು ಕೊಂದು ಸಾಯಿಸಿದ್ದಾರೆಂದರೆ!! ಅವನಿಗೆ ಭೀಮನ ಮೇಲೆ ಅನುಮಾನ ಉಂಟಾಯಿತು. ಪಾಂಡವರು ವಿರಾಟ ನಗರದಲ್ಲಿ ಇರಬಹುದೆನಿಸಿ ಅದನ್ನು ಖಚಿತಪಡಿಸಿಕೊಳ್ಳಲು ವಿರಾಟನಗರದ ಮೇಲೆ ದಾಳಿ ಮಾಡಿ ಗೋವುಗಳನ್ನು ಸೆರೆಹಿಡಿದು ಕೊಂಡೊಯ್ಯಲು ಯೋಚಿಸಿದ. ಒಂದು ವೇಳೆ ಅವರು ರಾಜನಲ್ಲಿ ಆಶ್ರಯ ಪಡೆದಿದ್ದರೆ, ಗೋವುಗಳನ್ನು ಬಿಡಿಸಿಕೊಳ್ಳಲು ಬಂದೇ ಬರುತ್ತಾರೆಂಬ ದೂರಾಲೋಚನೆ ಅವನನ್ನು ಈ ಕೆಲಸಕ್ಕೆ ಪ್ರೇರೇಪಿಸಿತು. ದುರ್ಯೋಧನನ ಈ ಆಲೋಚನೆ ಎಲ್ಲರಿಗೂ ಹಿಡಿಸಿತು. ಜೊತೆಗೆ ವಿರಾಟರಾಜನ ಆಗರ್ಭಶತ್ರುವಾದ ತ್ರಿಗರ್ತದ ರಾಜನೂ ಸೇಡು ತೀರಿಸಿಕೊಳ್ಳಲು ಒಳ್ಳೆಯ ಅವಕಾಶವೆಂದು ಯೋಚಿಸಿ ಅವನೂ ದುರ್ಯೋಧನನೊಂದಿಗೆ ಸೇರಿಕೊಂಡ. ಕೀಚಕನಿಂದ ಬಹಳ ಹಿಂಸೆ

ಅನುಭವಿಸಿದ್ದ ಅವನು ವಿರಾಟ ರಾಜ್ಯದ ಮೇಲೆ ಆಕ್ರಮಣಕ್ಕೆ ಪೂರ್ತಿಯಾಗಿ ಸಹಕರಿಸಿದ.

ನಿಶ್ಚಿತ ದಿನದಂದು ದಕ್ಷಿಣಭಾಗದಿಂದ ಸುಶರ್ಮನ ಸೈನ್ಯವೂ ಉತ್ತರ ಭಾಗದಿಂದ ದುರ್ಯೋಧನನ ಸೈನ್ಯವೂ ಮತ್ಸ್ಯ ದೇಶದ ಮೇಲೆ ಆಕ್ರಮಣ ಮಾಡಿತು. ಗೋಶಾಲೆಗಳಲ್ಲಿ ಇದ್ದ ಹಸುಗಳನ್ನೆಲ್ಲಾ ಅಟ್ಟಿಸಿಕೊಂಡು ಜೊತೆಗೊಯ್ದರು. ವಿರಾಟರಾಜನಿಗೆ ಚಿಂತೆಯಾಯಿತು. ಕೀಚಕನು ಬದುಕಿದ್ದರೆ ಚೆನ್ನಾಗಿತ್ತು ಎಂದುಕೊಂಡ. ತನ್ನ ಕಷ್ಟವನ್ನು ಆಪ್ತನೂ ಸ್ನೇಹಿತನೂ ಆಗಿದ್ದ ಕಂಕನೊಂದಿಗೆ ಹೇಳಿಕೊಂಡ. ಅವನು ರಾಜನನ್ನು ಸಮಾಧಾನಪಡಿಸುತ್ತ, "ಗೆಳೆಯ ನೀನೇನೂ ಚಿಂತಿಸಬೇಡ. ನಾನು ಬ್ರಾಹ್ಮಣನೇ ಇರಬಹುದು, ಆದರೂ ಕ್ಷತ್ರಿಯರಿಗೆ ಇರುವಷ್ಟೇ ಧೈರ್ಯವಿದೆ; ಬಲವಿದೆ. ನಾನು ನನ್ನ ಗೆಳೆಯರಾದ ವಲಲ, ತಂತ್ರಿಪಾಲ ನಿನ್ನ ಜೊತೆಗೆ ಬರುತ್ತೇವೆ" ಎಂದು ಹೇಳಿದ ಮತ್ತು ಅಂತೆಯೇ ವಿರಾಟನ ಜೊತೆಗೆ ಯುದ್ಧ ಭೂಮಿಗೆ ನಡೆದರು. ಬಹಳ ಸಾಹಸದಿಂದ ಹೋರಾಡಿದರು. ಸುಶರ್ಮನ ಸೈನ್ಯವನ್ನು ಸೋಲಿಸಿದರು. ರಾಜನಿಗೆ ಬಹಳ ಸಂತೋಷವಾಯಿತು. ಈ ಗೆಲುವಿನ ಸಂತೋಷವನ್ನು ಆಚರಿಸುತ್ತಿರುವಾಗ ಸುಶರ್ಮ ಮತ್ತೊಮ್ಮೆ ಸೈನ್ಯದೊಂದಿಗೆ ಬಂದು ಇವರ ಮೇಲೆ ಬಿದ್ದು ರಾಜನನ್ನು ಸೆರೆಹಿಡಿದು ಒಯ್ದರು.

ಯುಧಿಷ್ಠಿರನಿಗೆ ರಾಜನು ಸೆರೆಯಾದ ವಿಷಯ ತಿಳಿದು, ಭೀಮನನ್ನು ರಕ್ಷಿಸಲು ಕಳಿಸಿಕೊಟ್ಟ. ರಾಜನನ್ನೂ ರಕ್ಷಿಸಿ ತರುವುದೇ ಈಗ ತಮ್ಮ ಮೊದಲ ಕರ್ತವ್ಯವೆಂದು ತಿಳಿಸಿ ಹೇಳಿದ. ತಮಗೆ ಆಶ್ರಯ, ಅನ್ನ ಕೊಟ್ಟ ಆತನನ್ನು ರಕ್ಷಿಸಲೇಬೇಕೆಂದುಕೊಂಡರು. ಯುಧಿಷ್ಠಿರನ ಅಪ್ಪಣೆಯಂತೆ ಭೀಮ ಹೋಗಿ ಸುಶರ್ಮನನ್ನು ಸೋಲಿಸಿ ಅರಸನನ್ನು ಬಿಡಿಸಿಕೊಂಡು ಬಂದ. ಸೈನ್ಯದ ಜೊತೆ ಬಂದಿದ್ದ ದುಶ್ಯಾಸನನೂ ಸೋಲನ್ನು ಅನುಭವಿಸಿದ.

ಪದೇ ಪದೇ ಸೋಲುತ್ತಿರುವ ಸುದ್ದಿ ಕರ್ಣ, ದುರ್ಯೋಧನರು ಕೇಳಿ, ಕರ್ಣನು ಸೈನ್ಯದೊಂದಿಗೆ ಹೋಗಿ ಹಸುಗಳನ್ನು ಅಟ್ಟಿಸಿಕೊಂಡು

ಹಸ್ತಿನಾಪುರದ ಕಡೆಗೆ ಹೊರಟ. ಗೋವಳರು ಇದನ್ನು ನೋಡಿ ಹೆದರಿ ಹೌಹಾರಿ ನಡುಗುತ್ತಾ ಅರಮನೆ ಕಡೆ ಓಡಿ ಬಂದು ಉತ್ತರ ಕುಮಾರನನ್ನು ಕಂಡು ಪರಿಸ್ಥಿತಿಯನ್ನು ವಿವರಿಸಿದ.

ತ್ರಿಗರ್ತದ ಸೈನ್ಯವನ್ನು ಹಿಂಬಾಲಿಸಿ ರಾಜನೂ ಹೊರಟು ಹೋಗಿರುವುದರಿಂದ ತಮ್ಮ ರಕ್ಷಣೆಗೆ ಯಾರೂ ಇಲ್ಲವೆಂದು ಮೊರೆಯಿಟ್ಟ.

ಉತ್ತರಕುಮಾರ ಗೋವಳನ ಮಾತುಗಳನ್ನು ಶಾಂತಚಿತ್ತನಾಗಿ ಕೇಳಿಸಿಕೊಂಡ. ನಂತರ ಒಂದು ದೀರ್ಘ ನಿಟ್ಟುಸಿರುಬಿಟ್ಟು ಹೇಳಿದ. "ಎಲೈ ಗೋಪಾಲಕನೇ, ಎಂಥ ಕೆಲಸವಾಯಿತಲ್ಲಾ? ಹಿಂದಿನ ಯುದ್ಧದಲ್ಲಿ ನನ್ನ ಸಾರಥಿ ಸಾವನ್ನಪ್ಪಿದ. ಈಗ ನಾನೇ ಯುದ್ಧ ಮಾಡಲು ಬರೋಣವೆಂದರೆ ಸಾರಥಿಯೇ ಇಲ್ಲವಲ್ಲ. ಯುದ್ಧ ಮಾಡಲು ಖಂಡಿತ ನನಗೆ ಹೆದರಿಕೆಯಿಲ್ಲ ನನ್ನ ಧೈರ್ಯ ಸಾಹಸದ ಮುಂದೆ ಕೌರವರಾಗಲೀ, ಅವರ ಸೈನ್ಯವಾಗಲಿ ಏನು ಮಹಾ? ಭೀಷ್ಮ, ದ್ರೋಣ, ಕರ್ಣರು ಯಾವ ಲೆಕ್ಕ?" ಎಂದು ಬಡಬಡಿಸಿದ. ಸ್ವಭಾವದಲ್ಲಿ ಹೇಡಿಯಾದರೂ ಅವಕಾಶ ಸಿಕ್ಕರೆ ಮಾತ್ರ ಬಡಾಯಿಕೊಚ್ಚುತ್ತಿದ್ದ. ಅದರಲ್ಲಿಯೂ ಅಂತಃಪುರದ ಹೆಂಗಸರ ಮುಂದೆ ಇನ್ನೂ ಸ್ವಲ್ಪ ಹೆಚ್ಚಾಗಿಯೇ ಕೊಚ್ಚಿಕೊಳ್ಳುತ್ತಿದ್ದ.

ಬೃಹನ್ನಳೆಯ ವೇಷಾಂತರದಲ್ಲಿದ್ದ ಅರ್ಜುನ ಇದನ್ನೆಲ್ಲ ಕೇಳಿಸಿಕೊಂಡ. ದ್ರೌಪದಿಯನ್ನು ಗುಟ್ಟಾಗಿ ಮಾತಾಡಿಸಿ ಉತ್ತರೆಯನ್ನು, ಅವಳ ಅಣ್ಣನಿಗೆ ತನ್ನನ್ನು ಸಾರಥಿ ಮಾಡಿಕೊಳ್ಳುವಂತೆ ಒಪ್ಪಿಸು ಎಂದ. ದ್ರೌಪದಿ ಹಾಗೆಯೇ ಮಾಡಿದಳು. ಬೃಹನ್ನಳೆ ಸಾರಥ್ಯ ಮಾಡುವಲ್ಲಿ ಬಹಳ ಕುಶಲಿ ಎಂದು ಉತ್ತರೆಗೆ ಮನವರಿಕೆ ಮಾಡಿದಳು.

ಉತ್ತರ ಬೃಹನ್ನಳೆಯನ್ನು ಸಾರಥಿ ಮಾಡಿಕೊಳ್ಳಲು ಒಪ್ಪಿದ. ಅವರು ಕರ್ಣನನ್ನು ಎದುರಿಸಬೇಕಿತ್ತು.

ಬೃಹನ್ನಳೆಯಾಗಿದ್ದ ಅರ್ಜುನ ರಥವನ್ನು ಯುದ್ಧ ಭೂಮಿಯತ್ತ ನಡೆಸಿದ. ದಾರಿಯಲ್ಲಿ ಕಾಡಿನ ಒಂದು ಜಾಗದಲ್ಲಿ ರಥ ನಿಲ್ಲಿಸಿ, ಅಲ್ಲಿಯೇ ಸ್ವಲ್ಪ ದೂರದಲ್ಲಿದ್ದ ಆಲದ ಮರವನ್ನು ಹತ್ತಿ, ಮೇಲಿಂದ ಏನನ್ನೋ ಇಳಿಸಿ, ಅದರೊಳಗಿಂದ ಶಸ್ತ್ರಾಸ್ತ್ರಗಳನ್ನು ಹೊರತೆಗೆದ. ಉತ್ತರ ಇನ್ನೂ

ಆಶ್ಚರ್ಯದಿಂದ ಹೊರ ಬಂದಿರಲಿಲ್ಲ. ಅರ್ಜುನ ದಿವ್ಯಾಸ್ತ್ರಗಳನ್ನು ತೆಗೆದುಕೊಂಡು ಮತ್ತೆ ರಥದೆಡೆಗೆ ಮರಳಿದ. ರಥವನ್ನು ಮುಂದಕ್ಕೆ ನಡೆಸಿದ. ಯುದ್ಧ ಭೂಮಿ ಹತ್ತಿರವಾದಂತೆ ಉತ್ತರನ ಎದೆ ಬಡಿತ ಶುರುವಾಯಿತು. ಅವನು ದಿಗ್ಭ್ರಾಂತನಾದ. ಸಮುದ್ರೋಪಾದಿಯಲ್ಲಿದ್ದ ಸೈನ್ಯ. ಭೀಷ್ಮ, ದ್ರೋಣ, ಕೃಪ, ಕೃತವರ್ಮ, ಕರ್ಣ, ಅಶ್ವತ್ಥಾಮರಂಥ ಮಹಾರಥಿಗಳು!! ತಾನೇನಾದರೂ ಯುದ್ಧಕ್ಕಿಳಿದರೆ, ಕ್ಷಣಮಾತ್ರದಲ್ಲಿ ಸಾವನ್ನಪ್ಪುವುದರಲ್ಲಿ ಸಂದೇಹವಿಲ್ಲ ಎನಿಸಿ ದಿಢೀರನೆ ಬೃಹನ್ನಳೆಯ ಕಾಲಿಗೆ ಬಿದ್ದ. ತನ್ನನ್ನು ಅರಮನೆಯತ್ತ ಕರೆದೊಯ್ಯುವಂತೆ ಬೇಡಿಕೊಂಡ. ಆದರೆ ಅರ್ಜುನ ಅವನ ಮಾತುಗಳಿಗೆ ಕಿವಿಗೊಡಲಿಲ್ಲ. ಇನ್ನು ತನಗೆ ಸಾವು ತಪ್ಪಿದ್ದಲ್ಲ ಎಂಬ ಭಾವನೆ ಬಲವಾದಾಗ, ಉತ್ತರ ರಥದಿಂದ ಜಿಗಿದು, ಧುಮ್ಮಿಕ್ಕಿ ಓಡತೊಡಗಿದ. ಅರ್ಜುನ ಅವನನ್ನು ಬಿಡದೆ ಹಿಂಬಾಲಿಸಿ ಜುಟ್ಟು ಹಿಡಿದು ಎಳೆದು ತಂದು ರಥ ಹತ್ತಿಸಿದ. ಅವನ ಹೆದರಿಕೆಯನ್ನು ನೋಡಲಾಗದೆ, ನಕ್ಕು ತನಗೆ ಸಾರಥಿಯಾಗೆಂದು ಆದೇಶಿಸಿದ. ತಾನು ಅರ್ಜುನನೆಂಬುದನ್ನು ತಿಳಿಸಿ, "ಧೈರ್ಯದಿಂದ ರಥ ನಡೆಸು, ಯುದ್ಧ ಮಾಡುವ ಕೆಲಸವನ್ನು ನಾನು ವಹಿಸಿಕೊಳ್ಳುತ್ತೇನೆ" ಎಂದು ಧೈರ್ಯ ತುಂಬಿದ.

ಉತ್ತರನ ಹೇಡಿತನ, ಅವನು ಬೆನ್ನುಕೊಟ್ಟು ಓಡಿದ್ದು, ಮತ್ತೆ ಅವನನ್ನು ಎಳೆದು ತಂದದ್ದು ಶತ್ರು ಸೈನಿಕರಿಗೆ ಮನರಂಜನೆಯಾಗಿ ಅವರೆಲ್ಲ ನಗುತ್ತಿದ್ದರು. ಯುದ್ಧ ಭೂಮಿಯ ಮಧ್ಯಕ್ಕೆ ಹೋದಾಗ ಆ ಸೈನಿಕರಿಗೆ ಅರ್ಜುನನನ್ನು ಕಂಡಂತೆನಿಸಿ ಆಶ್ಚರ್ಯವಾಯಿತು. ಆದರೆ ಅಷ್ಟು ಹೊತ್ತಿಗೆ ಅಜ್ಞಾತದ ಅವಧಿ ಮುಗಿದದ್ದರಿಂದ ಯಾವ ಭಯವೂ ಇರಲಿಲ್ಲ. ದುರ್ಯೋಧನ, ಅಜ್ಞಾತವಾಸದ ಅವಧಿ ಮುಗಿದಿರುವುದನ್ನು ಮರೆತು, ಬೃಹನ್ನಳೆ ಅರ್ಜುನನೆಂದು ಖಚಿತವಾದರೆ, ಸತ್ಯವಾದರೆ ಮತ್ತೆ ವನವಾಸಕ್ಕೆ ಕಳಿಸಬಹುದಲ್ಲ ಎಂದು ಲೆಕ್ಕಚಾರ ಹಾಕುತ್ತ ಖುಷಿ ಪಡುತ್ತಿದ್ದ. ಆದರೆ ದುರಾದೃಷ್ಟವಶಾತ್ ಅವನ ಊಹೆ, ಬಯಕೆ ಎಲ್ಲಾ ತಲೆಕೆಳಗಾಯಿತು. ಭೀಷ್ಮಾದಿಗಳು ಪಾಂಡವರ ಅಜ್ಞಾತವಾಸದ ಗಡುವು ಮುಗಿದಿದೆಯೆಂದು ಘೋಷಿಸಿದರು.

ನಿರಾಶರಾಗಿ ದುರ್ಯೋಧನ, ಕರ್ಣ ಮತ್ತು ಇತರರು ಅರ್ಜುನನ ವಿರುದ್ಧ ಯುದ್ಧ ಮಾಡಿದರು. ದುರ್ಯೋಧನ ಸೋತು ಓಡುತ್ತಿದ್ದಾಗ, ಅರ್ಜುನ ಅವನನ್ನು ಹಿಂಬಾಲಿಸಿ ಹಿಡಿಯಲು ಉತ್ತರನಿಗೆ ಹೇಳಿದ. ಕರ್ಣ ದುರ್ಯೋಧನನ ರಕ್ಷಣೆಗೆ ಬಂದ. ಆದರೂ ಅರ್ಜುನ ಎಲ್ಲ ಅಡೆತಡೆಗಳನ್ನು ದಾಟಿಕೊಂಡು ಯುದ್ಧ ಜಯಿಸಿದ.

ಗೆಲುವಿನ ಸುದ್ದಿಯನ್ನು ತಿಳಿಸಲು ಉತ್ತರನನ್ನು ಮೊದಲೇ ಕಳಿಸಿದ. ವಿರಾಟರಾಜ ಮತ್ತು ಪಾಂಡವರು ಈ ಗೆಲುವಿನ ಸುದ್ದಿಯಿಂದ ಸಂತೋಷಪಟ್ಟರು. ವಿರಾಟರಾಜನು ತನ್ನ ಮಗ ಉತ್ತರ, ಏಕಾಂಗಿಯಾಗಿ ಯುದ್ಧವನ್ನು ಗೆದ್ದನೆಂಬ ಭ್ರಮೆಯಲ್ಲಿ ಹಿಗ್ಗಿ ಹೋದ. ಈ ಗೆಲುವನ್ನು ನಗರದಲ್ಲಿ ವಿಜೃಂಭಣೆಯಿಂದ ಆಚರಿಸಬೇಕೆಂದು ಆದೇಶ ಕೊಟ್ಟ. ಇದೆಲ್ಲವನ್ನು ಗಮನಿಸಿದ ಕಂಕ ತಾನೂ ಈ ಸಂಭ್ರಮದಲ್ಲಿ ಭಾಗಿಯಾದುದನ್ನು ತೋರಿಸಿಕೊಳ್ಳಲು "ಗೆಳೆಯಾ ಬೃಹನ್ನಳೆಯಂಥ ಸಾರಥಿ ಜೊತೆಗಿದ್ದರೆ ಯಾರನ್ನು ಬೇಕಾದರೂ ಗೆಲ್ಲಬಹುದು" ಎಂದ. ಇದರಿಂದ ವಿರಾಟನಿಗೆ ಸಂತೋಷವಾಗುವುದಕ್ಕೆ ಬದಲು ಸಿಟ್ಟು ಬಂತು. ಮಗನ ಗೆಲುವಿನಲ್ಲಿ ಇನ್ನೊಬ್ಬರು ಪಾಲುದಾರರಾಗುವುದು ಅವನಿಗೆ ಇಷ್ಟವಿರಲಿಲ್ಲ. ಆದ್ದರಿಂದಲೇ ಕಂಕನ ಮಾತಿನಿಂದ ಸಿಟ್ಟಿನ ಆವೇಶಕ್ಕೆ ಒಳಗಾದ ಮತ್ತು ಸಿಟ್ಟಿನಲ್ಲಿನ ಅಸಹನೆಯಿಂದ ಕೈಯಲ್ಲಿದ್ದ ದಾಳವೊಂದನ್ನು ಕಂಕನೆಡೆಗೆ ಎಸೆದ. ಕಂಕನ ಹಣೆಗೆ ಜೋರಾಗಿ ಬಡಿದು ರಕ್ತ ಸುರಿಯಿತು. ಅಲ್ಲಿಯೇ ಇದ್ದ ದ್ರೌಪದಿ ಆತುರವಾಗಿ ಬಂದು ಕೈಲಿದ್ದ ಚಿನ್ನದ ಬಟ್ಟಲನ್ನು ಹಿಡಿದು ಅದರಲ್ಲಿ ಬೀಳುತ್ತಿದ್ದ ರಕ್ತವನ್ನು ಶೇಖರಿಸಿದಳು.

ವಿರಾಟ ರಾಜನಿಗೆ ಅವಳ ಈ ರೀತಿಯನ್ನು ನೋಡಿ ವಿಚಿತ್ರವೆನಿಸಿತು. ಅದಕ್ಕೆಂದೇ ದ್ರೌಪದಿಯನ್ನು ಅದೇಕೆ ಹಾಗೆ ಮಾಡುತ್ತಿರುವೆ ಎಂದು ಪ್ರಶ್ನಿಸಿದ. ಅದಕ್ಕೆ ದ್ರೌಪದಿ, "ದೊರೆಯೇ ಅವನು ಬ್ರಾಹ್ಮಣ, ಬ್ರಾಹ್ಮಣ ರಕ್ತ ಕೆಳಗೆ ಬಿದ್ದರೆ ದೇಶಕ್ಕೆ ಕ್ಷಾಮ, ಮಳೆ, ಬೆಳೆ ಇರುವುದಿಲ್ಲ" ಎಂದಳು.

ಅಷ್ಟರಲ್ಲಿ ಕಾವಲುಗಾರ, ಉತ್ತರ, ಬೃಹನ್ನಳೆ ಬರುತ್ತಿರುವ ವಿಷಯವನ್ನು ತಿಳಿಸಿದ. ಯುದಧಿಷ್ಠಿರ ಗುಟ್ಟಾಗಿ, ಕಾವಲುಗಾರನನ್ನು ಪಕ್ಕಕ್ಕೆ ಕರೆದು,

"ನೋಡು ಯಾವುದೇ ಕಾರಣಕ್ಕೂ ನೀನು ಅರ್ಜುನನನ್ನು ಮೊದಲು ಒಳಗೆ ಬಿಡಬೇಡ. ಅವನು ಬರುತ್ತಿದ್ದಂತೆ ನನ್ನ ಹಣೆಯಲ್ಲಿನ ರಕ್ತ ನೋಡಿದರೆ ಅನಾಹುತ ಮಾಡುತ್ತಾನೆ. ಕೋಪ ತಂದುಕೊಳ್ಳುತ್ತಾನೆ. ಇದರಿಂದ ಪರಿಣಾಮ ಕೆಟ್ಟದ್ದಾಗುತ್ತದೆ" ಎಂದು ಎಚ್ಚರ ಕೊಟ್ಟು ಕಳಿಸಿದ.

ಉತ್ತರ, ಮೊದಲು ಒಳಗೆ ಪ್ರವೇಶಿಸಿ ತಂದೆಗೆ ಗೌರವ ಸೂಚಿಸಿ ಪಕ್ಕಕ್ಕೆ ತಿರುಗಿದ. ಕಂಕನ ಹಣೆಯ ಮೇಲಿನ ಗಾಯ ನೋಡಿ ಹೌಹಾರಿದ. ಅಷ್ಟು ಹೊತ್ತಿಗೆ ಉತ್ತರನಿಗೆ ತಮ್ಮ ಅರಮನೆಯಲ್ಲಿ ಬೇರೆ ಬೇರೆ ಹೆಸರುಗಳಲ್ಲಿ ಇರುವವರು ಯಾರೆಂದು ತಿಳಿದಿತ್ತು. ಕಂಕ ಬೇರೆ ಯಾರೂ ಆಗಿರದೆ ಸಾಕ್ಷಾತ್ ಯುಧಿಷ್ಠಿರನಾಗಿದ್ದ. ತಂದೆಯ ಕಡೆ ತಿರುಗಿ, 'ತಂದೆಯೇ ಏನಿದೆಲ್ಲ? ಯಾರು ಹೀಗೆ ಮಾಡಿದವರು? ಪಾಂಡವರ ಹಿರಿಯನಾದ ಯುಧಿಷ್ಠಿರನಿಗೆ ಈ ರೀತಿ ಮಾಡಬಹುದೇ?' ಎಂದು ಬಹಳ ವ್ಯಥೆಯಿಂದ ಕೇಳಿದ.

ರಾಜ ಅಪರಾಧಿಭಾವದಿಂದ ಎಲ್ಲವನ್ನು ವಿವರಿಸಿ ತಿಳಿಸಿದ. ಉತ್ತರನೂ ನಡೆದುದೆಲ್ಲವನ್ನೂ ವಿವರಿಸಿ, "ಯುದ್ಧ ಗೆದ್ದವನು ಅರ್ಜುನನೇ ಹೊರತು ನಾನಲ್ಲ" ಎಂದು ಸತ್ಯವನ್ನು ನುಡಿದ. ವಿರಾಟ ರಾಜನಿಗೆ ಈಗ ನಾಚಿಕೆಯಾಯಿತು. ತಾನು ಎಂತಹ ಕೆಲಸ ಮಾಡಿದೆ ಎಂದು ಪೇಚಾಡಿದ. ಕಂಕ ಅಂದರೆ ಯುಧಿಷ್ಠಿರಾದಿ ಪಾಂಡವರನ್ನು ಕ್ಷಮೆ ಕೇಳಿದ. ಆದರೆ ಪಾಂಡವರು ನಮ್ರತೆಯಿಂದ, "ಇಲ್ಲ ದೊರೆಯೇ ಕ್ಷಮೆ ನೀಡಬೇಕಾದ್ದು ನಾವಲ್ಲ, ನೀನು, ನಿನ್ನಲ್ಲಿ ಸತ್ಯವನ್ನು ಮರೆಮಾಚಿ ಆಶ್ರಯ ಪಡೆದು, ನಿನ್ನ ಅನ್ನವನ್ನು ತಿಂದಿದ್ದೇವೆ. ನಮ್ಮ ಅಜ್ಞಾತವಾಸ ಯಶಸ್ವಿಯಾಗಿ ಪೂರ್ತಿಯಾಗಲು ನೀನೇ ಕಾರಣ. ಆದ್ದರಿಂದ ನಿನಗೆ ನಮ್ಮ ಕೃತಜ್ಞತೆಗಳು" ಎಂದು ಹೇಳಿದ.

ಪರಸ್ಪರರಲ್ಲಿ ಮೆಚ್ಚುಗೆ, ಹೊಗಳಿಕೆ, ಕ್ಷಮಾಯಾಚನೆಯ ಕೆಲಸ ಮುಗಿಯಿತು. ವಿರಾಟರಾಜ ತಮ್ಮ ನಡುವಿನ ಸ್ನೇಹ, ಪ್ರೀತಿಗಳು ಗಟ್ಟಿಗೊಳ್ಳಲು ತನ್ನ ಮಗಳಾದ ಉತ್ತರೆಯನ್ನು ಅರ್ಜುನನಿಗೆ ಕೊಡುವುದಾಗಿ ಹೇಳಿದ. ಆದರೆ ಅರ್ಜುನ ಉತ್ತರೆಗೆ ತಾನು ಗುರುವಾಗಿರುವುದರಿಂದ

ತಂದೆಯ ಸಮಾನವಾದ್ದರಿಂದ ಮದುವೆ ಸಾಧ್ಯವಿಲ್ಲವೆಂದು ನಿರಾಕರಿಸಿದ. ಆದರೆ ತನ್ನ ಮಗ ಅಭಿಮನ್ಯುವಿಗೆ ಉತ್ತರೆಯನ್ನು ತಂದುಕೊಳ್ಳುವುದಾಗಿ ಹೇಳಿದ. ಈ ಸಂಬಂಧದ ಸಲಹೆ ಎಲ್ಲರಿಗೂ ಸಂತೋಷವಾಯಿತು.

ಈಗ ಪಾಂಡವರ ವನವಾಸ, ಅಜ್ಞಾತವಾಸಗಳು ಮುಗಿದಿದ್ದವು. ಅಭಿಮನ್ಯು ಮತ್ತು ಉತ್ತರೆಯ ವಿವಾಹವನ್ನು ಬಹಳ ವಿಜೃಂಭಣೆಯಿಂದ ಮಾಡಿದರು. ರಾಜ್ಯದ ಮೂಲೆ ಮೂಲೆಗಳಿಂದ ಬಹುದೊಡ್ಡ ಸಂಖ್ಯೆಯಲ್ಲಿ ಆಹ್ವಾನಿತರು ಆಗಮಿಸಿದ್ದರು. ಕೃಷ್ಣನಿಗಂತೂ ಈ ವಿವಾಹ ಹೆಚ್ಚಿನ ಸಂತೋಷವನ್ನು ಕೊಟ್ಟಿತ್ತು. ಜೊತೆಗೆ ಪಾಂಡವರ ಕಷ್ಟಗಳು ತೀರಿದ್ದವು. ಇದೂ ಅವನ ಸಂತೋಷಕ್ಕೆ ಮತ್ತೊಂದು ಕಾರಣವಾಗಿತ್ತು.

ಬಂದವರೆಲ್ಲರೂ ವಧೂವರರನ್ನು ಆಶೀರ್ವದಿಸಿದರು. ವನವಾಸ ಮುಗಿದಿದ್ದಕ್ಕೆ ಪಾಂಡವರನ್ನು ಅಭಿನಂದಿಸಿ ಅವರಿಗೆ ಶುಭ ಕೋರಿದರು.



# ರಾಜ್ಯಪ್ರಾಪ್ತಿಗಾಗಿ ಮಂತ್ರಾಲೋಚನೆ

ಅಭಿಮನ್ಯು ಉತ್ತರೆಯರ ವಿವಾಹದ ಗದ್ದಲ ಮುಗಿದ ಮೇಲೆ ಇನ್ನು ಪಾಂಡವರು ತಮ್ಮ ರಾಜ್ಯವನ್ನು ಹೇಗೆ ಹಿಂತಿರುಗಿ ಪಡೆಯಬೇಕೆಂಬ ವಿಚಾರವನ್ನು ಚರ್ಚಿಸಲು ಕೃಷ್ಣನ ನೇತೃತ್ವದಲ್ಲಿ ಒಂದು ಮಂತ್ರಾಲೋಚನಾ ಸಭೆಯನ್ನು ಕರೆಯಲಾಯಿತು.

ಕೃಷ್ಣ, ದ್ರುಪದ, ಬಲರಾಮ ಮತ್ತು ಇನ್ನೂ ಕೆಲವರು ಈ ಸಭೆಯಲ್ಲಿ ಭಾಗವಹಿಸಿದ್ದರು. ಮೊದಲಿಗೆ ಕೃಷ್ಣನೇ ಎದ್ದು ಸಭೆಯನ್ನು ಉದ್ದೇಶಿಸಿ ಮಾತನಾಡಿಸಿದ. ದುರ್ಯೋಧನ ನಿಂದಾಗಿ ಪಾಂಡವರು ಎಷ್ಟೆಲ್ಲಾ ಕಷ್ಟಗಳನ್ನು ಅನುಭವಿಸಿದರೆಂಬುದನ್ನು ಅವರಿಂದ ಹೇಗೆ ಮೋಸಕ್ಕೆ ಒಳಗಾದರೆಂಬುದನ್ನು ಅಲ್ಲಿ ನೆರೆದಿದ್ದವರೆಲ್ಲರಿಗೂ ವಿಸ್ತಾರವಾಗಿ ತಿಳಿಸಿ ಹೇಳಿದ. "ಅವರೇ (ದುರ್ಯೋಧನಾದಿಗಳು) ವಿಧಿಸಿದ ಷರತ್ತಿನಂತೆ ಈಗ ಪಾಂಡವರು ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸವನ್ನು ಮುಗಿಸಿ ಹಿಂತಿರುಗಿದ್ದಾರೆ. ನ್ಯಾಯಬದ್ಧವಾಗಿ ಅವರ ರಾಜ್ಯ ಅವರಿಗೆ ಸಲ್ಲಬೇಕು. ಆದರೆ, ನನಗೆ ದುರ್ಯೋಧನನ ಮೇಲೆ ಅನುಮಾನವಿದೆ. ಅವನು ರಜ್ಯವನ್ನು ಕೊಡಲು ಒಪ್ಪುವುದಿಲ್ಲವೆನಿಸುತ್ತದೆ. ಒಂದು ವೇಳೆ, ಯಾವುದೇ ವಿರೋಧವಿಲ್ಲದೆ ಕೊಟ್ಟರೆ ಬಹಳ ಒಳ್ಳೆಯದು. ಇಲ್ಲವಾದಲ್ಲಿ, ಯುದ್ಧ ಮಾಡಿ ತೆಗೆದುಕೊಳ್ಳಬೇಕು. ಯಾವುದನ್ನೂ ನಿರ್ಣಯಿಸುವ ಮೊದಲು ನಾವು ಅವರ ಬಳಿಗೆ ಯಾರನ್ನಾದರೂ ಕಳಿಸಿ ಅವರ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಯಾರಾದರೂ ಸಮರ್ಥರಾದವರನ್ನು ಕಳಿಸಿ ಪಾಂಡವರ ಪಾಲಿನ ರಾಜ್ಯವನ್ನು ಕೊಡುವಂತೆ ಹೇಳಬೇಕು" ಎಂದು ತಿಳಿಸಿದನು.

ದ್ರುಪದನು ಎದ್ದು ನಿಂತು ಹೇಳಿದನು. "ಕೃಷ್ಣನ ಮಾತುಗಳನ್ನು ನಾನು ಒಪ್ಪುತ್ತೇನೆ. ಅವನ ಆಲೋಚನೆಯ ಕ್ರಮ ಸರಿಯಾಗಿದೆ. ರಾಜ್ಯದ

ಒಂದಂಗುಲದಷ್ಟು ಜಾಗವನ್ನೂ ದುರ್ಯೋಧನ ಪಾಂಡವರಿಗೆ ಕೊಡುವುದಿಲ್ಲ. ನಾನು ತಿಳಿದುಕೊಂಡಂತೆ ಯುದ್ಧ ಅನಿವಾರ್ಯವೇ ಆಗುತ್ತದೆ."

ಕೃಷ್ಣನ ಅಣ್ಣನಾದ ಬಲರಾಮ ದುರ್ಯೋಧನನ ಆಪ್ತಮಿತ್ರ, ದ್ರುಪದನ ಮಾತಿನ ರೀತಿ ಅವನಿಗೆ ಇಷ್ಟವಾಗಲಿಲ್ಲ. ತನ್ನ ತಮ್ಮ ಪಾಂಡವರ ಪಕ್ಷಪಾತಿ ಎಂದು ಭಾವಿಸಿದ. ಆದ್ದರಿಂದ ಅವನು ಕೌರವರ ಪರವಾಗಿ ಮಾತನಾಡಿದ ಮತ್ತು ಅವರು ಮಾಡಿದುದರಲ್ಲಿ ತಪ್ಪಿಲ್ಲವೆಂದ. ಅವನ ಪ್ರಕಾರ ವಿಚಿತ್ರವೀರ್ಯನ ಮೊಮ್ಮಗನಾಗಿ ದುರ್ಯೋಧನನೇ ಸಿಂಹಾಸನಕ್ಕೆ ಉತ್ತರಾಧಿಕಾರಿ. ಧೃತರಾಷ್ಟ್ರ ಕುರುಡನಾಗಿದ್ದ ಕಾರಣ ಪಾಂಡುವಿಗೆ ರಾಜ್ಯಭಾರವನ್ನು ವಹಿಸಲಾಗಿತ್ತು. ಪಾಂಡುವಿನ ಸಾವಿನ ನಂತರ ಧೃತರಾಷ್ಟ್ರ ಸಮಸ್ತ ರಾಜ್ಯವನ್ನೂ ದುರ್ಯೋಧನನಿಗೆ, ಕೊಡಬಹುದಾಗಿತ್ತು. ಅವನು ರಾಜ್ಯವಾಳುವಷ್ಟು ಸಮರ್ಥನಾಗಿದ್ದ. ಆದರೆ ಅವನ ಒಳ್ಳೆತನ, ತಮ್ಮನ ಮಕ್ಕಳ ಮೇಲಿನ ಪ್ರೀತಿಯಿಂದಾಗಿ ಅರ್ಧ ರಾಜ್ಯವನ್ನು ಪಾಂಡವರಿಗೆ ನೀಡಿದ್ದ. ಆದ್ದರಿಂದ ಪಾಂಡವರು ರಾಜ್ಯವನ್ನು ಹಕ್ಕಿನಿಂದ ಕೇಳುವ ಹಾಗಿಲ್ಲ. ಬೇಕಾದರೆ ಪ್ರಾರ್ಥಿಸಿ ಪಡೆಯಬಹುದು.

ಬಲರಾಮನ ಮಾತಿನಿಂದ ಅವನು ದುರ್ಯೋಧನನ ಕಡೆಗಿದ್ದಾನೆಂಬುದು ಸ್ಪಷ್ಟವಾಯಿತು. ಯಾದವರ ಮುಖಂಡನಾದ ಸಾತ್ಯಕಿ, ಬಲರಾಮನ ಮಾತುಗಳನ್ನು, ಅವನ ವಿಚಾರಗಳನ್ನು ಒಪ್ಪಲಿಲ್ಲ. ಯುಧಿಷ್ಠಿರನು ಹೋಗಿ ದುರ್ಯೋಧನನನ್ನು ಬೇಡಿಕೊಳ್ಳುವುದೇ?! ಅವನು ಎದ್ದು ನಿಂತು ಸಭೆಗೆ, "ಯುಧಿಷ್ಠಿರನೇಕೆ ರಾಜ್ಯವನ್ನು ಬೇಡಬೇಕು? ಕೌರವರು ಮೋಸದಿಂದ ಅವರ ರಾಜ್ಯವನ್ನು ಕಿತ್ತುಕೊಂಡಿದ್ದಾರೆ. ಆದರೂ ಪಾಂಡವರು ಒಂದಿಷ್ಟೂ ಗೊಣಗಾಟವಿಲ್ಲದೆ ಷರತ್ತಿನಂತೆ ವನವಾಸ, ಅಜ್ಞಾತವಾಸಗಳನ್ನು ಮುಗಿಸಿ ಹಿಂತಿರುಗಿದ್ದಾರೆ. ಕೌರವರೂ ಮಾತಿನಂತೆ ಪಾಂಡವರ ರಾಜ್ಯ, ಸಂಪತ್ತುಗಳನ್ನು ಹಿಂತಿರುಗಿಸಬೇಕಾದ್ದು ನ್ಯಾಯವೇ? ನ್ಯಾಯದಿಂದ ಕೊಡದಿದ್ದಲ್ಲಿ, ನಾನು ಅವರನ್ನು ಸುಮ್ಮನೆ ಬಿಡುವುದಿಲ್ಲ." ಎಂದು ತನ್ನ ಸಿಟ್ಟನ್ನು, ಅಭಿಪ್ರಾಯವನ್ನು ಸೂಚಿಸಿದ.

ಸಾತ್ಯಕಿಯ ಮಾತುಗಳಿಂದ ದ್ರುಪದ ಸಂತಸಪಟ್ಟ. ಮತ್ತೆ ಅವನು ಎದ್ದು ನಿಂತು ಸಾತ್ಯಕಿಯನ್ನು ಸಮರ್ಥಿಸಿದ ಮತ್ತು ಇಲ್ಲಿ ನಡೆದದ್ದನ್ನು

ಶಲ್ಯ, ಕೇಕಯಿ ಮತ್ತು ಜಯತ್ಸೇನರಿಗೆ ತಿಳಿಸಬೇಕೆಂದ. ಹಾಗೆಯೇ ಯುದ್ಧ ಸಿದ್ಧತೆಗಳನ್ನೂ ಮಾಡಿಕೊಳ್ಳಲು ಹೇಳಬೇಕೆಂದ.

ಯುದ್ಧವನ್ನು ಘೋಷಿಸುವುದಕ್ಕೆ ಮೊದಲು, ಯಾರನ್ನಾದರೂ ಭೀಷ್ಮ, ದ್ರೋಣ, ಧೃತರಾಷ್ಟ್ರರೊಂದಿಗೆ ಮಾತಾಡಲು ಕಳಿಸಬೇಕೆಂಬ ಎಲ್ಲರ ಅಭಿಪ್ರಾಯವನ್ನು ಕೃಷ್ಣನು ಒಪ್ಪಿದ. ತಾನೇ ಹೋಗಲು ಸಾಧ್ಯವಿಲ್ಲ. ಯಾಕೆಂದರೆ ಪಾಂಡವರು, ಕೌರವರು ಇಬ್ಬರೂ ತನಗೆ ಬೇಕಾದವರೇ ಆದ್ದರಿಂದ ಬಹಿರಂಗವಾಗಿ ತಾನು ಯಾರ ಕಡೆಗೆಂದು ತಿಳಿಸಲಾರ. ಆದ್ದರಿಂದ ಸಭೆಯ ನಂತರ ದ್ವಾರಕೆಗೆ ಹೊರಟು ಹೋದ.

ಇತ್ತ ಕೌರವರೂ ಹಸ್ತಿನಾಪುರದಲ್ಲಿ, ಪಾಂಡವರಿಗೆ ರಾಜ್ಯ ಕೊಡುವ ವಿಚಾರದಲ್ಲಿ ಏನು ಮಾಡಬೇಕೆಂದು ಯೋಚಿಸುತ್ತಿದ್ದರು. ದುರ್ಯೋಧನನಿಗೆ ರಾಜ್ಯವನ್ನು ಬಿಟ್ಟುಕೊಡಲು ಇಷ್ಟವಿರಲಿಲ್ಲ. ರಾಜ್ಯ ಕೊಡದಿದ್ದರೆ ಯುದ್ಧವು ಖಂಡಿತವೆಂದು ತಿಳಿದು ಯುದ್ಧ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದ.

ದುರ್ಯೋಧನನೂ ಎಚ್ಚರದಿಂದಲೇ ಇದ್ದ. ಅವನಿಗೆ ಮತ್ತು ಪಾಂಡವರಿಗೆ, ಶಾಂತಿಯಿಂದ ತೀರ್ಮಾನವಾಗುವುದಿಲ್ಲವಾದ ಕಾರಣ ಯುದ್ಧ ಅನಿವಾರ್ಯ ಎನ್ನುವ ವಿಷಯ ತಿಳಿದೇ ಇತ್ತು. ಆದ್ದರಿಂದ ಎರಡೂ ಕಡೆ ಯುದ್ಧ ಸಿದ್ಧತೆಗಳು ಭರದಿಂದ ಸಾಗಿದವು. ಪಾಂಡವರೂ ಕೌರವರೂ ಇಬ್ಬರೂ ತಮ್ಮ ಕಡೆಯ ಸ್ನೇಹಿತ ರಾಜರಿಗೆ ಯುದ್ಧ ಸಹಾಯವನ್ನು ಬೇಡಿ ಪತ್ರಗಳನ್ನು ಕಳಿಸಲಾಯಿತು. ಕೃಷ್ಣನಿಂದಲೂ ಪಾಂಡವ ಕೌರವರು ಸಹಾಯವನ್ನು ಯಾಚಿಸಿದರು.

ಒಂದು ದಿನ ಕೃಷ್ಣ ಗಾಢ ನಿದ್ದೆಯಲ್ಲಿದ್ದ. ದುರ್ಯೋಧನ, ಅರ್ಜುನ ಇಬ್ಬರೂ ತಮ್ಮ ತಮ್ಮ ಸ್ಥಳಗಳಿಂದ ಒಂದೇ ಸಮಯಕ್ಕೆ ಬಂದರು. ಕೃಷ್ಣ ಮಲಗಿದ್ದರೂ ಅವರಿಬ್ಬರೂ ಅವನ ನೆಂಟರಾದ್ದರಿಂದ ಅಪ್ಪಣೆಗೆ ಕಾಯದೆ ನೇರವಾಗಿ ಒಳಗೇ ಬಂದರು. ಕೃಷ್ಣ ನಿದ್ದೆಯಿಂದ ಏಳುವುದನ್ನೇ ಕಾಯುತ್ತಿದ್ದರು. ದುರ್ಯೋಧನ ಕೃಷ್ಣನ ತಲೆಯ ಬಳಿ ಇದ್ದ ಸಿಂಹಾಸನದಲ್ಲಿ ಕುಳಿತ. ಅರ್ಜುನ ಕೃಷ್ಣನ ಕಾಲ ಬಳಿ ಇದ್ದ ಆಸನದಲ್ಲಿ ಕುಳಿತ. ಕೃಷ್ಣ ಏಳುತ್ತಿದ್ದಂತೆ ಅರ್ಜುನನನ್ನು ಗಮನಿಸಿದ. ಪ್ರೀತಿಯಿಂದ ಅವನನ್ನು ಸ್ವಾಗತಿಸಿದ. ನಂತರ ದುರ್ಯೋಧನನ ಕಡೆಗೆ ತಿರುಗಿ

ಅವನನ್ನೂ ಸ್ವಾಗತಿಸಿದ. ಅವರಿಬ್ಬರನ್ನೂ ಸಂಬೋಧಿಸಿ ಹೇಳಿದ. "ನನಗೆ ಗೊತ್ತು, ನೀವಿಬ್ಬರೂ ಇಲ್ಲಿಗೆ ಬಂದಿರುವುದು ಅನಿರೀಕ್ಷಿತವಾದರೂ ಕಾರಣ ಮಾತ್ರ ಸ್ಪಷ್ಟವಾಗಿ ತಿಳಿದಿದೆ. ನಿಮ್ಮಿಬ್ಬರ ಬರವೂ ನನಗೆ ಸಂತೋಷ ತಂದಿದೆ" ಎಂದು.

ದುರ್ಯೋಧನ ಮೊದಲು ಮಾತಾಡಲು ಉತ್ಸುಕತೆ ತೋರಿಸಿದ. "ಕೃಷ್ಣ, ನಿನಗೆ ತಿಳಿಯದ್ದೇನೂ ಇಲ್ಲ. ತಿಳಿದಿಲ್ಲವೆಂದರೂ ನಾನು ನಂಬುವುದಿಲ್ಲ. ನಾವಿಬ್ಬರು ದಾಯಾದಿ ಸೋದರರು ಯಾಕೆ ಬಂದಿದ್ದೇವೆಂಬುದನ್ನು ಚೆನ್ನಾಗಿ ಊಹಿಸಿಯೂ ಇದ್ದೀಯ. ಯುದ್ಧ ಅನಿವಾರ್ಯವಾದಾಗ ನನಗೆ ನಿನ್ನ ಸಹಾಯ ಬೇಕು. ಅರ್ಜುನನೂ ಅದಕ್ಕೆಂದೇ ಬಂದಿದ್ದಾನೆ ಎಂಬುದು ನನಗೆ ಖಂಡಿತವಾಗಿ ತಿಳಿದಿದೆ. ನಾವಿಬ್ಬರೂ ನಿನಗೆ ಒಂದೇ. ಯಾರು ಹತ್ತಿರ ಯಾರು ದೂರ ಎಂದು ಹೇಳುವುದಕ್ಕೆ ಆಗದಷ್ಟು ನಾವಿಬ್ಬರೂ ನಿನಗೆ ಸಮಾನ. ಆದರೂ ಬಂದವರಲ್ಲಿ ನಾನೇ ಮೊದಲಿಗ. ಆದ್ದರಿಂದ ಸಹಾಯ ಕೇಳುವ ಅವಕಾಶ ನನಗೆ ಮೊದಲು ಬೇಕು" ಎಂದ.

ಕೃಷ್ಣ ನಕ್ಕು, "ನೀನು ಹೇಳುವುದೇನೋ ಸರಿ. ಆದರೆ ಏಳುತ್ತಿದ್ದಂತೆ ಮೊದಲು ಕಣ್ಣಿಗೆ ಬಿದ್ದವನು ಅರ್ಜುನ. ಅಲ್ಲದೆ ಸಂಪ್ರದಾಯದಂತೆ ಚಿಕ್ಕವರಿಗೆ ಮೊದಲು ಅವಕಾಶ ಕೊಡಬೇಕು. ನನ್ನ ಸಹಾಯ ನಿಮ್ಮಿಬ್ಬರಿಗೂ ಇದೆ ಎಂಬುದಂತೂ ಸತ್ಯ" ಎಂದು ಸಮಾಧಾನಕರವಾಗಿ ಮಾತಾಡಿದ.

ಇದನ್ನೆಲ್ಲ ಕೇಳಿಸಿಕೊಂಡ ಅರ್ಜುನ, ದುರ್ಯೋಧನನೇ ಮೊದಲು ಸಹಾಯ ಬೇಡಲಿ ಎಂದು ಕೃಷ್ಣನಿಗೆ ತಿಳಿಸಿದ.

ದುರ್ಯೋಧನ, ಕೃಷ್ಣ, ತನ್ನ ಕಡೆಯಿದ್ದು ಯುದ್ಧ ಮಾಡಬೇಕೆಂದು ತಿಳಿಸಿದ. ಕೃಷ್ಣ ಅದಕ್ಕೆ, "ದುರ್ಯೋಧನ ನನ್ನನ್ನು ಆಯ್ಕೆ ಮಾಡಿಕೊಂಡಿರುವುದು ನನಗೆ ಸಂತೋಷವನ್ನು ತಂದಿದೆ. ಆದರೆ ನಾನು ಈ ಯುದ್ಧದಲ್ಲಿ ಆಯುಧವನ್ನೇ ಹಿಡಿಯುವುದಿಲ್ಲವೆಂದು ನಿರ್ಧರಿಸಿದ್ದೇನೆ. ನನ್ನ ಸೈನ್ಯವನ್ನು ನಿನಗೆ ಕಳಿಸುತ್ತೇನೆ. ನಿನ್ನ ಪರವಾಗಿ ನನ್ನ ಸೈನ್ಯ ಹೋರಾಡುತ್ತದೆ. ಈಗ ಹೇಳು, ನಿನಗೆ ನಾನು ಬೇಕೆ? ನನ್ನ ಸೈನ್ಯ ಬೇಕೇ?"

ದುರ್ಯೋಧನನಿಗೆ ಏನು ಹೇಳಬೇಕೆಂದು ತಿಳಿಯಲಿಲ್ಲ. ಕೈಯ್ಯಲ್ಲಿ ಆಯುಧವನ್ನೇ ಹಿಡಿಯುವುದಿಲ್ಲವೆಂದ ಮೇಲೆ ಅಂಥವನಿಂದ ಪ್ರಯೋಜನವೇನು ಎನಿಸಿ, ಕೃಷ್ಣನಿಂದ ಸೈನ್ಯ ಸಹಾಯವನ್ನೇ ಸ್ವೀಕರಿಸಿದ. ಒಳಗೇ ಖುಷಿಯಾಯಿತು. ಸದ್ಯ ಅರ್ಜುನನಿಗೆ ಮೊದಲೇ ಕೇಳಿಬಿಟ್ಟೆನಲ್ಲ! ಎಂದು ಹಿಗ್ಗಿದ.

ಕೃಷ್ಣ, ದುರ್ಯೋಧನನಿಗೆ ಸೈನ್ಯ ಸಹಾಯದ ಭರವಸೆ ಕೊಟ್ಟ ಮೇಲೆ ಅರ್ಜುನನ ಕಡೆಗೆ ತಿರುಗಿದ. ಅರ್ಜುನ ಅರ್ಥಮಾಡಿಕೊಂಡ. "ಭಗವಾನ್, ನೀನು ನಮ್ಮ ಕಡೆ ಇರು. ನೀನು ಶಸ್ತ್ರವನ್ನು ಹಿಡಿಯದಿದ್ದರೂ ಚಿಂತೆಯಿಲ್ಲ.

ನಮ್ಮ ಜೊತೆಗೆ ನೀನಿದ್ದರೆ ಸಾಕು. ಆತ್ಮಬಲ, ದೇಹಬಲ, ನೈತಿಕ ಬಲ ಎಲ್ಲವೂ ಸಿಕ್ಕಂತೆ!" ಎಂದು ಕೃಷ್ಣ ಸಾಂಗತ್ಯವೊಂದೇ ಸಾಕೆಂಬ ಅಭಿಪ್ರಾಯವನ್ನು ಹೇಳಿದ.

"ಸದ್ಯ ಸೈನ್ಯವನ್ನು ಅರ್ಜುನ ಕೇಳಲಿಲ್ಲವಲ್ಲಾ! ಅದನ್ನು ಕೇಳಿದ್ದರೆ ಇಬ್ಬರಿಗೂ ಅರ್ಧ ಅರ್ಧ ಮಾತ್ರ ಸಿಕ್ಕುತ್ತಿತ್ತು. ಈಗ ಇಡೀ ಸೈನ್ಯ ತನ್ನ ಕಡೆಗೇ ಬಂತು" ಎಂದು ಸಂತೋಷ ಪಟ್ಟ. ಬಹಳ ಉತ್ಸಾಹದಿಂದ ಹಸ್ತಿನಾಪುರಕ್ಕೆ ಹಿಂತಿರುಗಿದ. ಅರ್ಜುನನ ಮೂರ್ಖತನಕ್ಕೆ ಒಳಗೇ ನಗುತ್ತಿದ್ದ. ಸೈನ್ಯವನ್ನು ಬೇಡುವುದು ಬಿಟ್ಟು ಕೃಷ್ಣ ಮಾತ್ರ ಜೊತೆಗಿರಲಿ ಎಂದು ಬೇಡಿದ್ದು ಅವನಿಗೆ ಮೂರ್ಖತನವಾಗಿ ಕಾಣಿಸಿತು.

ಕೃಷ್ಣನ ಸೈನ್ಯ ದ್ವಾರಕೆಯಿಂದ ಹಸ್ತಿನಾಪುರಕ್ಕೆ ಪ್ರಯಾಣ ಬೆಳೆಸಿತು. ಅರ್ಜುನನು ತನ್ನನ್ನು ಮಾತ್ರ ಆರಿಸಿಕೊಂಡಿದ್ದು ಅವನಿಗೆ ಬಹಳ ಸಂತೋಷ ತಂದಿತ್ತು. ಅರ್ಜುನನನ್ನು ತನ್ನನ್ನೇ ಆಯ್ಕೆ ಮಾಡಿಕೊಂಡಿದ್ದೇಕೆಂದು ಕೇಳಿದ. ಅದಕ್ಕೆ ಅರ್ಜುನ ಬಹಳ ನಮ್ರತೆಯಿಂದ ಹೇಳಿದ. "ನಿನ್ನ ಕೇವಲ ಉಪಸ್ಥಿತಿಯೇ ನಮಗೊಂದು ಮಹಾಸ್ಫೂರ್ತಿ" ಎಂದ.



## ಸಂಜಯ ಯುಧಿಷ್ಠಿರರ ಭೇಟಿ

ಹಸ್ತಿನಾಪುರದಲ್ಲಿ, ಧೃತರಾಷ್ಟ್ರ, ನಡೆದುದೆಲ್ಲವನ್ನೂ ತಿಳಿದು, ಯುದ್ಧದ ಸಂಭವವೇ ಹೆಚ್ಚಾಗಿದೆಯೆಂದು ಊಹಿಸಿ ಭಯಭೀತನಾದ. ಪಾಂಡವರ ಶಕ್ತಿ, ಸಾಮರ್ಥ್ಯಗಳನ್ನು ಬಲ್ಲವನಾಗಿದ್ದ. ತನ್ನ ಮಗ ಅವರೊಡನೆ ಯುದ್ಧ ಮಾಡಲು ಪ್ರಬಲವಾದ ಯಾವುದೇ ಕಾರಣವಿರಲಿಲ್ಲ. ಅವರಿಗೆ ಅವರ ರಾಜ್ಯವನ್ನು ಹಿಂತಿರುಗಿಸಬೇಕಾದ್ದು ನ್ಯಾಯ ಮತ್ತು ಧರ್ಮ. ಆದರೆ ದುರ್ಯೋಧನ ಕೇಳಬೇಕಲ್ಲ? ಅವನಿಗೆ ಗೊತ್ತು, ಯುದ್ಧವಾದಲ್ಲಿ ಇಡೀ ಕುರುವಂಶವೇ ನಾಶವಾಗುತ್ತದೆ. ಭೀಮ, ಅರ್ಜುನರ ಮುಂದೆ ಯುದ್ಧದಲ್ಲಿ ನಿಲ್ಲಲು ಯಾರಿಗೆ ತಾನೇ ಸಾಧ್ಯ? ಆದ್ದರಿಂದ, ಕಡೆಯ ಪ್ರಯತ್ನವಾಗಿ ಸಂಜಯನನ್ನು ಯುಧಿಷ್ಠಿರನಲ್ಲಿಗೆ ಕಳುಹಿಸಿ, ಬುದ್ಧಿವಾದ ಹೇಳಿ. ಯುದ್ಧವಾಗುವುದನ್ನು ತಪ್ಪಿಸಬೇಕೆಂದು ಆಲೋಚಿಸಿದ. ಕೌರವ, ಪಾಂಡವರು ಒಂದು ರಾಜಿ ಸೂತ್ರಕ್ಕೆ ಬರಲೆಂದು ಹಾರೈಸಿದ. ಅಂತೆಯೇ ಮಾಡಬೇಕೆಂದು ಸಂಜಯನಿಗೆ ಹೇಳಿ ಕಳಿಸಿದ.

ಸಂಜಯ ಪಾಂಡವರಿದ್ದ ಉಪಪ್ಲಾವ್ಯಕ್ಕೆ ಬಂದ. ಪರಸ್ಪರ ಕ್ಷೇಮ ಸಮಾಚಾರವನ್ನು ವಿಚಾರಿಸಿದ ಯುಧಿಷ್ಠಿರನೊಡನೆ ತಾನು ಬಂದ ವಿಷಯವನ್ನು ಚರ್ಚಿಸಬೇಕೆಂದು ಕೊಂಡರೂ ಯಾಕೋ ಹಿಂಜರಿದ. ಯುಧಿಷ್ಠಿರನಿಗೆ ಸಂಜಯನ ಹಿಂಜರಿಕೆಯ ಕಾರಣ ತಿಳಿಯಿತು. ಅವನೇ ಮಾತನ್ನು ಆರಂಭಿಸಿದ.

"ಸಂಜಯ ನಿನ್ನನ್ನು ನೋಡಿದರೆ ನನಗೆ ಧೃತರಾಷ್ಟ್ರನ ನೆನಪಾಗುತ್ತದೆ. ದೊಡ್ಡಪ್ಪ ಹೇಗಿದ್ದಾನೆ? ಹಸ್ತಿನಾಪುರದಲ್ಲಿ ಎಲ್ಲರೂ ಕ್ಷೇಮವೇ?" ಎಂದು ವಿಚಾರಿಸಿದ.

“ಎಲ್ಲರೂ ಕ್ಷೇಮವಾಗಿದ್ದಾರೆ, ಧೃತರಾಷ್ಟ್ರನಂತೂ ಯಾವಾಗಲೂ ನಿಮ್ಮನ್ನು ನೆನಪಿಸಿಕೊಳ್ಳುತ್ತಲೇ ಇರುತ್ತಾನೆ. ನಿಮ್ಮ ನಡತೆ, ಒಳ್ಳೆತನಗಳನ್ನು ತುಂಬಾ ಅಭಿಮಾನದಿಂದ ಹೇಳಿಕೊಳ್ಳುತ್ತಿರುತ್ತಾನೆ” ಎಂದು ಸಂಜಯ ಅಲ್ಲಿನ ವಿಷಯವನ್ನು ಹೇಳಿದ.

“ಇದರಿಂದ ಪ್ರಯೋಜನವೇನು ಬಂತು ಸಂಜಯ ದುರ್ಯೋಧನನ ಮನಸ್ಸನ್ನು ಗೆದ್ದುಕೊಳ್ಳಲು ಸಾಧ್ಯವಾಗಲಿಲ್ಲವಲ್ಲ?” ಎಂದು ಯುಧಿಷ್ಠಿರ ನಿಟ್ಟುಸಿರಿನೊಂದಿಗೆ ಹೇಳಿದ.

“ಏನು ಮಾಡುವುದು ಯುಧಿಷ್ಠಿರ. ಅವನು ಯಾರ ಮಾತಿಗೂ ಕಿವಿಗೊಡುವುದಿಲ್ಲ. ಯಾರಿಂದಲೂ ಅವನನ್ನು ಬದಲಾಯಿಸಲು ಸಾಧ್ಯವಿಲ್ಲ. ದುಷ್ಟ, ಸ್ವಾರ್ಥಿ, ಸಾಲದ್ದಕ್ಕೆ ಯಾವಾಗಲೂ ಅವನಿಗಿಂತ ದುಷ್ಟರ ಸಹವಾಸದಲ್ಲಿಯೇ ಇರುತ್ತಾನೆ. ಇದೆಲ್ಲ ಗೊತ್ತಿರುವ ವಿಷಯವೇ? ಆದರೆ ನೀವು ನೋಡಬೇಕಾದ್ದು ದೊಡ್ಡಪ್ಪನ ಮುಖವನ್ನು. ಆದ್ದರಿಂದ ಶಾಂತಿಯುತವಾಗಿ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಿಲ್ಲವೇ?” ಎಂದು ಸಮಾಧಾನದಿಂದಲೇ ವಿಚಾರಿಸಿದ.

“ನಾವು ಮಾತ್ರ ಯುದ್ಧವನ್ನು ಬಯಸುತ್ತಿದ್ದೇವೆಯೇ? ಸಾಧ್ಯವಾದಷ್ಟು ಶಾಂತಿಯುತವಾಗಿಯೇ ಸಮಸ್ಯೆಯನ್ನು ಪರಿಹರಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಲೇ ಇದ್ದೇವೆ. ದುರ್ಯೋಧನನೇ ಯುದ್ಧವನ್ನು ಘೋಷಿಸಿದರೆ?” ಎಂದು ಅನುಮಾನ ಆತಂಕದಿಂದಲೇ ಮಾತನಾಡಿದ.

“ಆಗಲೂ ನೀವು ಯುದ್ಧಕ್ಕೆ ಅವಕಾಶ ಕೊಡಬಾರದು. ಇದು ಧೃತರಾಷ್ಟ್ರನ ಪ್ರಾರ್ಥನೆ” ಎಂದು ಮೆಲ್ಲನೆ ತಿಳಿಸಿದ.

“ಸಂಜಯ ನೀನಾಡುವ ಮಾತು ತರ್ಕಬದ್ಧವಾಗಿದೆಯೇ? ಅವನು ಆಕ್ರಮಣ ಮಾಡಿದರೆ ನಾವು ಸುಮ್ಮನಿದ್ದು ಸೋತು ಶರಣಾಗಬೇಕೆಂಬುದು ನಿನ್ನ ಅಭಿಪ್ರಾಯವೇ?” ಎಂದು ಸ್ವಲ್ಪ ಸಿಟ್ಟಿನಿಂದಲೇ ಹೇಳಿದ ಯುಧಿಷ್ಠಿರ.

“ನನ್ನ ಉದ್ದೇಶ ಅದಲ್ಲ. ನೀನಾಗಿಯೇ ಶಾಂತಿಯ ಬಗ್ಗೆ ಮಾತಾಡಬೇಕು ಅವನಿಗೆ ಯುದ್ಧದ ಭೀಕರತೆಯನ್ನು ತಿಳಿಯುವಂತೆ ಮಾಡಬೇಕೆಂಬುದು ನಮ್ಮ ಅಭಿಪ್ರಾಯ” ಎಂದ ಸಂಜಯ.

"ಕ್ಷಮಿಸು ಸಂಜಯ, ಯುದ್ಧಕ್ಕೆ ಸವಾಲೊಡ್ಡಿದಾಗ ಆಗುವುದಿಲ್ಲವೆಂದು ಹೇಳುವುದು ನಮಗೆ ಸಾಧ್ಯವಿಲ್ಲ. ಅಲ್ಲದೆ ಕ್ಷತ್ರಿಯನಾಗಿ ಯುದ್ಧಕ್ಕೆ ಆಹ್ವಾನಿಸಿದರೆ ಹೋಗದಿರುವುದು ಧರ್ಮವಲ್ಲ. ಅಲ್ಲದೆ ಯುದ್ಧದಿಂದ ನೀವು ಇಷ್ಟೊಂದು ಹೆದರುವುದಕ್ಕೆ ಕಾರಣವೇ ಇಲ್ಲ. ಭೀಷ್ಮ, ದ್ರೋಣ, ಕೃಪ, ಕರ್ಣ ಮೊದಲಾದ ವೀರರು ಕೌರವರ ಕಡೆಗೆ ಇರುವಾಗ ಹೆದರಿಕೆ ಏಕೆ?" ಎಂದು ಮನವರಿಕೆ ಮಾಡಿಕೊಟ್ಟು ಹೇಳಿದ ಯುಧಿಷ್ಠಿರ.

ಯುಧಿಷ್ಠಿರನ ಮಾತುಗಳನ್ನು ಧ್ಯಾನವಿಟ್ಟು ಕೇಳಿಸಿಕೊಂಡ ಸಂಜಯ, "ಯುಧಿಷ್ಠಿರ ನೀನು ಹೇಳಿದಂತೆ ವೀರಾಧಿವೀರರು, ದೊಡ್ಡ ಸೈನ್ಯ ಎಲ್ಲವೂ ಇದೆ; ನಿಜ! ಆದರೆ ಅವರ ಕಡೆ ಧರ್ಮವೆಂಬುದೇ ಇಲ್ಲವಲ್ಲ! ಏನಾದರಾಗಲಿ ದುರ್ಯೋಧನನನ್ನು ಬಿಟ್ಟು ಬಿಡಿ" ಎಂದ.

"ಆಯಿತು ಸಂಜಯ, ನೀನು ಹೇಳಿರುವುದನ್ನೆಲ್ಲ ಕೃಷ್ಣನಿಗೆ ತಿಳಿಸುತ್ತೇನೆ. ಮುಂದೆ ಕೃಷ್ಣ ಹೇಗೆ ಮಾಡೆಂದು ಆದೇಶಿಸಿದರೆ ಹಾಗೆಯೇ ನಡೆದುಕೊಳ್ಳುತ್ತೇವೆ. ಯುದ್ಧ ಮಾಡುವುದು ನಮಗೂ ಇಷ್ಟದ್ದೇನಲ್ಲ!" ಎಂದು ಸಮಾಧಾನದಿಂದ ಹೇಳಿದ.

"ಯುಧಿಷ್ಠಿರ ಶಾಂತಿ ಸಂಧಾನದ ಜವಾಬ್ದಾರಿನ್ನು ನಿನಗೇ ಬಿಡುತ್ತೇನೆ" ಎಂದು ಸಂಜಯ ಪ್ರಾರ್ಥನೆ ಮಾಡುವಂತೆ ಹೇಳಿದ.

"ಯುಧಿಷ್ಠಿರ ಶಾಂತಿ ಸಂಧಾನದ ಜವಾಬ್ದಾರಿಯನ್ನು ನಿನಗೇ ಬಿಡುತ್ತೇನೆ" ಎಂದು ಸಂಜಯ ಪ್ರಾರ್ಥನೆ ಮಾಡುವಂತೆ ಹೇಳಿದ.

ಯುಧಿಷ್ಠಿರ ತನ್ನ ಮಾತನ್ನು, ಮನದ ಇಂಗಿತವನ್ನು ಮಾತು ಮುಂದುವರೆಸುತ್ತ ಹೇಳಿದ. "ಸಂಜಯ ನಿನಗೆ ಪದೇ ಪದೇ ಹೆಳುತ್ತಿದ್ದೇನೆ. ಯುದ್ಧವೇ ನಮ್ಮ ಆಸೆಯಲ್ಲ ನಮಗೆ ಇಂದ್ರಪ್ರಸ್ಥವೊಂದನ್ನು ಕೊಟ್ಟರೆ ಸಾಕು. ಅದನ್ನು ಅವನು ಮಾಡಲಿ, ಆದ್ದರಿಂದ, ಈಗ ನೀನು ಹೋಗಿ, ನಾನು ಹೇಳಿದ ಈ ಪ್ರಸ್ತಾಪವನ್ನು ಧೃತರಾಷ್ಟ್ರನ ಮುಂದಿಡು. ಶಾಂತಿಗೂ ಸಮರಕ್ಕೂ ನಾವು ಸಿದ್ಧವಾಗಿರುತ್ತೇವೆ. ಯಾವುದೆಂಬುದನ್ನು ನೀವೇ ನಿರ್ಧರಿಸಿ. ಪ್ರತಿ ಬಾರಿಯೂ, ನಾವು ಅವರ ಹಿಂಸೆ, ಮಾಡುವ ಅವಮಾನಗಳನ್ನು ಸಹಿಸಿಕೊಳ್ಳಲು ಸಾಧ್ಯವಿಲ್ಲ. ಸಹನೆಗೂ ಒಂದು

ಮಿತಿಯಿರುತ್ತದೆ. ನಮ್ಮ ಸಹನೆಯನ್ನು ನಮ್ಮ ದೌರ್ಬಲ್ಯವೆಂದು ಭಾವಿಸಿದಂತಿದೆ. ಆದ್ದರಿಂದ ನಿರ್ಣಯವನ್ನು ಅವರಿಗೇ ಬಿಡುತ್ತೇನೆ" ಎಂದು ತನ್ನ ಕೊನೆಯ ಮಾತನ್ನು ಮುಗಿಸಿದ.

ಇಬ್ಬರಲ್ಲೂ ಮಾತುಕತೆಯಾಯಿತು. ಪಾಂಡವರು ಬಯಸುತ್ತಿರುವುದು ಏನೆಂದು ಅರ್ಥವಾಯಿತು. ಯುಧಿಷ್ಠಿರನ ಮಾತುಗಳಲ್ಲಿ ನ್ಯಾಯವಿತ್ತು; ತರ್ಕವಿತ್ತು. ಅದಕ್ಕಾಗಿಯೇ ಮುಂದೆ ಏನನ್ನೂ ಮಾತನಾಡಲಿಲ್ಲ. ಸಂಜಯ ಅನಿಶ್ಚಿತತೆಯೊಂದಿಗೆ ಹಸ್ತಿನಾಪುರಕ್ಕೆ ಹಿಂತಿರುಗಿದ.



## ಮರಳಿ ಬಂದ ಸಂಜಯ

ಧೃತರಾಷ್ಟ್ರ ಸಂಜಯ ಹಿಂತಿರುಗಿ ಬರುವುದನ್ನೇ ಕಾತರದಿಂದ ಕಾಯುತ್ತಿದ್ದ. ಅಲ್ಲಿ ನಡೆಯುವ ಮಾತುಕತೆಯ ಪರಿಣಾಮ ಏನಿರಬಹುದೆಂದು ತಿಳಿಯುವ ಕುತೂಹಲ ಹೆಚ್ಚುತ್ತಿತ್ತು. ಅದಕ್ಕೆ ಮೊದಲೇ ವಿದುರನೂ ಧೃತರಾಷ್ಟ್ರನನ್ನು ಕಂಡು ಪಾಂಡವರ ಪರವಾಗಿ ಮಾತನಾಡಿ ಅವರ ರಾಜ್ಯವನ್ನು ಅವರಿಗೆ ಕೊಡಿಸಿಬಿಡೆಂದು ಬುದ್ಧಿವಾದ ಹೇಳಿದ. ಅವನು ಮಧ್ಯೆ ಪ್ರವೇಶಿಸಿ ದುರ್ಯೋಧನನಿಗೆ ತಿಳಿಸಿ ಹೇಳಿದರೆ ಬಹುಶಃ ಅವನು ಒಪ್ಪಿಕೊಳ್ಳಬಹುದೆಂಬ ಆಸೆ ವ್ಯಕ್ತಪಡಿಸಿದ. ಇಷ್ಟಾದರೆ ಯುದ್ಧ ತಪ್ಪಬಹುದೆಂದ.

ಮಾರನೆ ದಿನ ಬೆಳಿಗ್ಗೆ ಸಂಜಯ ಹಿಂತಿರುಗಿದ. ಧೃತರಾಷ್ಟ್ರನನ್ನು ಸಭೆಯಲ್ಲಿ ಕಂಡು, ಅಲ್ಲಿ ನಡೆದದ್ದೆಲ್ಲವನ್ನೂ ವಿವರಿಸಿ ತಿಳಿಸಿದ. ಹಾಗೆಯೇ ಧರ್ಮರಾಯನ ಅಭಿಪ್ರಾಯವನ್ನೂ ವಿವರಿಸಿದ. ಭೀಷ್ಮ, ವಿದುರ ಮೊದಲಾದವರೂ ಕೂಡ ಯುಧಿಷ್ಠಿರನ ಅಭಿಪ್ರಾಯವನ್ನೇ ಅನುಮೋದಿಸಿದರು. ಆದರೆ ಕರ್ಣ ಮಾತ್ರ ಇದನ್ನು ವಿರೋಧಿಸಿದ್ದೇ ಅಲ್ಲದೆ ಭೀಷ್ಮನನ್ನು ಪಾಂಡವ ಪಕ್ಷಪಾತಿ ಎಂದು ದೂರಿದ.

ಕರ್ಣನ ಮಾತುಗಳಿಂದ ಭೀಷ್ಮರ ಮನಸ್ಸಿಗೆ ನೋವಾಯಿತು. ದುರ್ಯೋಧನ ಇದು ಯಾವುದನ್ನೂ ಲೆಕ್ಕಿಸದೆ ತಂದೆಗೆ ಸಮಾಧಾನ ಹೇಳತೊಡಗಿದ. ಯುದ್ಧಕ್ಕೆ ಹೆದರಬೇಕಾದ ಅವಶ್ಯಕತೆಯಿಲ್ಲ. ಯುದ್ಧದಲ್ಲಿ ತಮಗೇ ಜಯವೆಂದು, ಯುದ್ಧಕ್ಕೆ ಮೊದಲೇ ಬೀಗಿದ.

ಧೃತರಾಷ್ಟ್ರನಿಗೆ ಸಮಾಧಾನವಾಗಲಿಲ್ಲ. ಕೌರವರ ನಾಶ ಹತ್ತಿರವಾಗಿದೆ. ಎನಿಸತೊಡಗಿತು. ಮಕ್ಕಳು ಹಠಮಾರಿಗಳು. ಯಾರನ್ನೂ ಯಾವುದನ್ನೂ ಕೇಳಿಸಿಕೊಳ್ಳುವುದಿಲ್ಲ. ಯಾವಾಗಲೂ ದುಷ್ಟರ ಸಹವಾಸದಲ್ಲಿರುತ್ತಾರೆ.

ಶಕುನಿ, ಕರ್ಣರೇ ದುರ್ಯೋಧನನ ಆಪ್ತ ಸಚಿವರಂತಿದ್ದಾರೆ. ಪಾಂಡವರು ಸತ್ಯವಂತರು, ಧರ್ಮಿಷ್ಠರು ಅವರು ಏನಾದರೂ ಹೇಳಿದರೆ ತಾಳ್ಮೆಯಿಂದ ಕೇಳಿಸಿಕೊಳ್ಳುತ್ತಾರೆ. ಆದರೆ ದುರ್ಯೋಧನ ತನ್ನ ಮಾತನ್ನು ಕೇಳುತ್ತಾನೆಯೇ?! ಆದ್ದರಿಂದ ಈಗ ಉಳಿದಿರುವ ದಾರಿಯೆಂದರೆ, ದುರ್ಯೋಧನನನ್ನು ಅವನ ಪಾಡಿಗೆ ಬಿಟ್ಟು ಬಿಡುವುದು. ವಿನಾ ಕಾರಣ ಪಾಂಡವರನ್ನು ಇಷ್ಟೊಂದು ಕಷ್ಟಗಳಿಗೆ ಗುರಿ ಮಾಡಿದ್ದಕ್ಕಾಗಿ, ಪಾಪ! ಎನಿಸಿತು. ಆದರೂ ಒಮ್ಮೆ ಕೃಷ್ಣನ ಸಲಹೆ ಕೇಳುವುದು ಒಳ್ಳೆಯದೆಂದು ಸಂಜಯ ಸೂಚಿಸಿದ್ದು ಧೃತರಾಷ್ಟ್ರನಿಗೂ ಈಗ ಸರಿಯೆನಿಸಿತು.



## ಕೃಷ್ಣ ದೂತನಾಗಿ ಬಂದ

ಯುಧಿಷ್ಠಿರನ ಪ್ರಾರ್ಥನೆಯಂತೆ ಕೃಷ್ಣ ಮತ್ತು ಸಾತ್ಯಕಿ ಶಾಂತಿ ಸಂಧಾನಕ್ಕಾಗಿ ಹಸ್ತಿನಾಪುರಕ್ಕೆ ಹೊರಟರು. ಇದಕ್ಕೆ ಮೊದಲೇ ಯುಧಿಷ್ಠಿರ ಕೃಷ್ಣನನ್ನು ಕಂಡು ತನ್ನ ಅಭಿಪ್ರಾಯವನ್ನು ತಿಳಿಸಿದ್ದ. ಅಲ್ಲದೆ, ಕಡೆಯ ಪ್ರಯತ್ನವಾಗಿ ಹೋಗಿ ಧೃತರಾಷ್ಟ್ರಾದಿಗಳನ್ನು ಮಾತಾಡಿಸಿ ಬರಲು ಕೃಷ್ಣನೂ ಉತ್ಸುಕನಾಗಿದ್ದ ದುರ್ಯೋಧನನು ಶಾಂತಿಗಾಗಿ ಒಪ್ಪುವುದರಲ್ಲಿ ಅನುಮಾನವಿತ್ತು. ಆದರೂ ಸಮಾಧಾನಕ್ಕಾಗಿ ಕೆಲವರ ತೃಪ್ತಿಗಾಗಿ, ಶಾಂತಿ ಸಂಧಾನದ ಪ್ರಸ್ತಾಪ ಹೊತ್ತು ಹಸ್ತಿನಾಪುರಕ್ಕೆ ಬಂದ. ಕೃಷ್ಣನು ಬಂದದ್ದು ಎಲ್ಲರಿಗೂ ಸಂತೋಷವಾಗಿತ್ತು. ಅವನನ್ನು ಸ್ವಾಗತಿಸಿದರು.

ಧೃತರಾಷ್ಟ್ರನಿಗೆ ಕೃಷ್ಣ ತಮ್ಮ ಮನೆಯಲ್ಲಿರಲೆಂದು ಆಸೆ. ಅವನಿಗಾಗಿ ಅದ್ಧೂರಿ ವ್ಯವಸ್ಥೆ ಮಾಡಿಸಿದ. ಅನೇಕ ಉಡುಗೊರೆಗಳನ್ನು ಕಳಿಸಿಕೊಟ್ಟ. ತನ್ನ ಮನೆಗೇ ಬಂದು ಇರಬೇಕೆಂದು ಹೇಳಿ ಕಳಿಸಿದ. ಇದೆಲ್ಲಾ ಧೃತರಾಷ್ಟ್ರ ಏಕೆ ಮಾಡುತ್ತಿದ್ದಾನೆಂದು ಕೃಷ್ಣನಿಗೆ ಅರ್ಥವಾಯಿತು. ಇಷ್ಟೆಲ್ಲಾ ಮಾಡಿದರೂ ಕೃಷ್ಣ ಧೃತರಾಷ್ಟ್ರನ ಆತಿಥ್ಯವನ್ನು ಒಪ್ಪಲಾರನೆಂಬುದು ಭೀಷ್ಮಾದಿಗಳಿಗೆ ತಿಳಿದಿತ್ತು. ಅದರಂತೆಯೇ ಕೃಷ್ಣ, ಹಸ್ತಿನಾಪುರಕ್ಕೆ ತಾನು ದೂತನಾಗಿ ಬಂದಿರುವುದರಿಂದ, ಧೃತರಾಷ್ಟ್ರನಲ್ಲಿ ಉಳಿದುಕೊಳ್ಳಲಾಗುವುದಿಲ್ಲವೆಂದು ಹೇಳಿ ಕಳಿಸಿದ.

ಕೃಷ್ಣ ವಿದುರನ ಮನೆಯಲ್ಲಿ ಉಳಿದುಕೊಂಡಿದ್ದ. ವಿದುರನೊಂದಿಗೆ ದಿನವಿಡೀ ಮಾತನಾಡಿದ. ದುರ್ಯೋಧನನ ಉಪ್ಪುಂಡವರಾದ್ದರಿಂದ, ಅವನ ಅನ್ಯಾಯಗಳನ್ನು ನೋಡಿಯೂ ವಿರೋಧಿಸಲು ಆಗುತ್ತಿಲ್ಲವಲ್ಲ ಎಂದು ವಿದುರ ಹಲುಬಿದ.

ಮರುದಿನ ಕೃಷ್ಣ ಧೃತರಾಷ್ಟ್ರನ ಸಭೆಗೆ ಬಂದ. ತುಂಬಿದ ಸಭಾಮಧ್ಯದಲ್ಲಿ ನಿಂತು ತಾನು ಬಂದಿರುವ ಉದ್ದೇಶವನ್ನು ಘೋಷಿಸಿದ. ಯುಧಿಷ್ಠಿರನ ಅಭಿಪ್ರಾಯವನ್ನೂ ತಿಳಿಸಿ ಹೇಳಿದ. "ಮಹಾರಾಜ, ವಿನಾಕಾರಣ ವಿನಾಶವನ್ನು ತಂದುಕೊಳ್ಳಬೇಡಿ. ನಿನ್ನ ಮಕ್ಕಳಿಗೆ ಬುದ್ಧಿ ಹೇಳಿ ಪಾಂಡವರಿಗೆ ನ್ಯಾಯವಾಗಿ ಸಲ್ಲಬೇಕಾದ ರಾಜ್ಯವನ್ನು ಕೊಡಿಸಿ ಯುದ್ಧವನ್ನು ತಪ್ಪಿಸು. ನಿನ್ನ ಮಕ್ಕಳನ್ನು ಶಾಂತಿಗೆ ಒಪ್ಪಿಸು. ಪಾಂಡವರು ನೀವು ಏನು ಹೇಳಿದರೂ ಕೇಳಿಸಿಕೊಳ್ಳುತ್ತಾರೆ" ಎಂದು ಬುದ್ಧಿವಾದ ಹೇಳಿದ.

ಧೃತರಾಷ್ಟ್ರ ತನ್ನ ಅಸಹಾಯಕತೆಯನ್ನು ತೋಡಿಕೊಂಡ. "ಕೃಷ್ಣ ನೀನು ಹೇಳಿದ ಮಾತು, ಸೂಚಿಸಿದ ಸಲಹೆಗಳು ನಿಜವಾಗಿಯೂ ಒಪ್ಪಿತವೆನಿಸುತ್ತವೆ. ಆದರೆ ಹಾಳಾದವರು ನನ್ನ ಮಕ್ಕಳು ದುಷ್ಟರು. ಯಾವುದಕ್ಕೂ ಬಗ್ಗುವುದಿಲ್ಲ. ನಾನೋ ಅಸಹಾಯಕ ಆದ್ದರಿಂದ ನೀನೇ ಯಾಕೆ ನನ್ನ ಮಕ್ಕಳಿಗೆ ಬುದ್ಧಿ ಹೇಳಿ ನೋಡಬಾರದು" ಎಂದು ಸೂಚಿಸಿದ.

ಕೃಷ್ಣ ದುರ್ಯೋಧನನ ಕಡೆ ತಿರುಗಿದ. "ದುರ್ಯೋಧನ ಮೊದಲಿನಿಂದಲೂ ನೀನು ಪಾಂಡವರಿಗೆ ಒಂದಲ್ಲ ಒಂದು ರೀತಿಯಲ್ಲಿ ತೊಂದರೆ ಕೊಡುತ್ತಲೇ ಬಂದಿರುವೆ. ಅವರಿಗೆ ಮೋಸ ಮಾಡುತ್ತಲೋ, ಅವಮಾನಿಸುತ್ತಲೋ, ಯಾವಾಗಲೂ ಅವರನ್ನು ದುಃಖಕ್ಕೆ ಗುರಿ ಮಾಡುತ್ತಿರುವೆ. ನಿನ್ನ ಸ್ವಾರ್ಥ, ಅಸೂಯೆ, ಆಕಾಂಕ್ಷೆಗಳಿಗೆ ಮಿತಿ ಎನ್ನುವುದೇ ಇಲ್ಲವಾಗಿದೆ. ಧರ್ಮ ಶಬ್ಧಕ್ಕೆ ನಿನ್ನಲ್ಲಿ ಅರ್ಥವೇ ಇಲ್ಲ. ಈಗಲೂ ಹೇಳುತ್ತಿದ್ದೇನೆ. ಅವರ ರಾಜ್ಯವನ್ನು ಅವರಿಗೆ ತಿರುಗಿಸಿ ಕೊಟ್ಟು, ಯುದ್ಧದ ಅನಾಹುತಗಳನ್ನು ತಪ್ಪಿಸು. ಮನುಕುಲವನ್ನು ಉಳಿಸು" ಎಂದು ಬೇಡಿಕೊಳ್ಳುವಂತೆ ಕೇಳಿದ.

ಅಲ್ಲಿ ನೆರೆದಿದ್ದ ಗುರು ಹಿರಿಯರು, ಸಭಿಕರು, ಬಂಧುಗಳು ಎಲ್ಲರೂ ಏಕಕಂಠದಲ್ಲಿ ಕೃಷ್ಣನ ಮಾತುಗಳಂತೆ ನಡೆದುಕೊಳ್ಳಲು ಬುದ್ಧಿ ಹೇಳಿದರು. ಆದರೆ ದುರ್ಯೋಧನ ಮಾತ್ರ ಯಾವುದಕ್ಕೂ ಕೇಳಿಸಿಕೊಳ್ಳಲಿಲ್ಲ. ಪಾಂಡವರಿಗೆ ಸೂಜಿಮೊನೆಯಷ್ಟು ಭೂಮಿಯನ್ನೂ ಕೊಡುವುದಿಲ್ಲವೆಂದು ತನ್ನ ಹಠಕ್ಕೇ ಅಂಟಿಕೊಂಡ.

ಒಂದಿಷ್ಟು ಜಾಗವನ್ನೂ ಕೊಡುವುದಿಲ್ಲವೆಂದ ದುರ್ಯೋಧನನ ಬಗ್ಗೆ ಕೃಷ್ಣನಿಗೆ ಸಿಟ್ಟು ಬಂತು. ದುಶ್ಯಾಸನ ಹೇಳಿದರೂ ಕೇಳಿಸಿಕೊಳ್ಳದೆ, ದುರ್ಯೋಧನ ಆವೇಶದಿಂದ ಸಭಾ ಭವನದಿಂದ ಹೊರಗೆ ಹೋದ.

ಗಾಂಧಾರಿಯೂ ಮಗನನ್ನು ಕರೆದು ಬುದ್ಧಿ ಹೇಳಿದಳು. ದೊಡ್ಡವರ ಮಾತನ್ನು ಕೇಳೆಂದು ಒತ್ತಾಯ ಮಾಡಿದಳು. ವಿದುರನಿಗೂ ಸುದ್ದಿ ಮುಟ್ಟಿ ಅವನು ಧೃತರಾಷ್ಟ್ರನಿಗೆ ದುರ್ಯೋಧನನ ದುಷ್ಟ ಆಲೋಚನೆಯನ್ನು ತಿಳಿಸಿ, ಮಗನಿಗೆ ಎಚ್ಚರಿಕೆ ನೀಡುವಂತೆ ಸಲಹೆ ಮಾಡಿದ.

ಮರುದಿನ ಧೃತರಾಷ್ಟ್ರ, ದುರ್ಯೋಧನನನ್ನು ಸಭೆಗೆ ಕರೆಸಿದ. ಸಭಾಸದರ ಮುಂದೆ, "ಮಗು ದುರ್ಯೋಧನ, ಕೃಷ್ಣ ಪಾಂಡವರ ದೂತನಾಗಿ ಇಲ್ಲಿಗೆ ಬಂದಿದ್ದಾನೆ. ಅವನಿಗೆ ಏನಾದರೂ ತೊಂದರೆ ಮಾಡುವುದು ಸರಿಯಲ್ಲ. ಅಲ್ಲದೆ ಕೃಷ್ಣನನ್ನು ಏನೆಂದು ತಿಳಿದಿರುವೆ? ಅವನು ಸಾಮಾನ್ಯನಲ್ಲ. ಮಹಾನುಭಾವ; ಪರಮಾತ್ಮ. ಅಂಥಾದ್ದರಲ್ಲಿ ಅವನು ನಿನ್ನ ಕೈಗೆ ಸುಲಭವಾಗಿ ಸಿಗುತ್ತಾನೆಂದು ಭಾವಿಸುವುದು ನಿನ್ನ ಮೂರ್ಖತನಕ್ಕೆ ಸಾಕ್ಷಿ. ಅಷ್ಟಾದರೂ ನೀನು ಪ್ರಯತ್ನಿಸಿದರೆ, ಪರಿಣಾಮಗಳು ಮಾತ್ರ ಭಯಂಕರವಾಗಿರುತ್ತದೆ. ಇದನ್ನು ಮನಸ್ಸಿನಲಿಟ್ಟುಕೊ ದುರ್ಯೋಧನ" ಎಂದು ಮನವೊಲಿಸಲು ಹೇಳಿದ.

ಕೃಷ್ಣ ಸಮಾಧಾನದಿಂದ ಎಲ್ಲವನ್ನೂ ಕೇಳಿಸಿಕೊಂಡ. ದುರ್ಯೋಧನ ತನಗೆ ಏನು ಮಾಡಲೂ ಸಾಧ್ಯವಿಲ್ಲವೆಂದು, ಧೃತರಾಷ್ಟ್ರನನ್ನು ಸಮಾಧಾನಪಡಿಸಿದ.

"ನಾನೊಬ್ಬನೇ ಇದ್ದೀನೆಂದು ಅವನು ತಿಳಿಯಬಾರದು. ಇಡೀ ವಿಶ್ವವೇ ನನ್ನೊಳಗಿದೆ. ಅವನು ನನ್ನನ್ನು ಮುಟ್ಟುವುದಕ್ಕೂ ಆಗುವುದಿಲ್ಲ. ಬೇಕಾದರೆ ನನ್ನ ಈ ವಿಶ್ವರೂಪವನ್ನು ನೋಡಲಿ. ಪ್ರಪಂಚದ ಸಮಸ್ತ ವಸ್ತುಗಳೂ, ಪಾಂಡವರೂ ಕೌರವರೂ ಚತುರಂಗ ಸೇನೆ ಎಲ್ಲವೂ ನನ್ನೊಳಗೇ ಇದೆ" ಎಂದು ಹೇಳುತ್ತಾ ವಿಶ್ವರೂಪವನ್ನು ತೋರಿಸಿದ. ತನ್ನ ಆ ರೂಪವನ್ನು ನೋಡಲೆಂದೇ ಧೃತರಾಷ್ಟ್ರನಿಗೆ ಕಣ್ಣು ಕೊಟ್ಟಿದ್ದ. ಜನರೆಲ್ಲ ದಿಗ್ಭ್ರಾಂತರಾದರು.

ಧೃತರಾಷ್ಟ್ರ, ಕೃಷ್ಣನ ಆ ದಿವ್ಯ, ಭವ್ಯರೂಪವನ್ನು ನೋಡಿದ ಮೇಲೆ ಇನ್ನು ಯಾವುದನ್ನೂ ನೋಡುವುದೂ ವ್ಯರ್ಥ. ಅಲ್ಲದೆ, ಯುದ್ಧದ ಭಯಂಕರ ದುರಂತಗಳನ್ನು ನೋಡುವುದೂ ತನಗೆ ಸಾಧ್ಯವಾಗಲಾರದು ಎನಿಸಿ ಕೃಷ್ಣನನ್ನು ಮತ್ತೆ ತನ್ನ ಅಂಧತ್ವವನ್ನು ಹಿಂತಿರುಗಿಸಲು ಕೇಳಿಕೊಂಡ.



## ಕೃಷ್ಣ ಕುಂತಿ, ಕರ್ಣರನ್ನು ಭೇಟಿಯಾದ

ಕೃಷ್ಣ ಹಸ್ತಿನಾಪುರದಿಂದ ಹೊರಡುವ ಮೊದಲು ಕುಂತಿಯನ್ನು ಮಾತನಾಡಲು ಬಂದ. ಯುಧಿಷ್ಠಿರನಿಗೆ ಹೇಳುವುದೇನಾದರೂ ಇದೆಯೇ ಎಂದು ಕೇಳಿದ. ಅವಳು, "ಕೃಷ್ಣಾ, ಯುಧಿಷ್ಠಿರನಿಗೆ ಧರ್ಮವನ್ನು ಬಿಡಬೇಡ, ಕರ್ತವ್ಯವನ್ನು ಮರೆಯಬೇಡವೆಂದು ತಿಳಿಸು. ಕಳೆದುಕೊಂಡ ರಾಜ್ಯ ಸಂಪತ್ತನ್ನು ಶೌರ್ಯದಿಂದ, ಧರ್ಮದಿಂದ ಯುದ್ಧಮಾಡಿ ಪಡೆದುಕೊಳ್ಳಲಿ, ಅದಕ್ಕಾಗಿ ಅವರು ಶತ್ರುಗಳಲ್ಲಿ ಭಿಕ್ಷೆ ಬೇಡುವುದು ಬೇಕಿಲ್ಲ. ಹಾಗೆಯೇ ಶತ್ರುಗಳ ಆಶ್ರಯದಲ್ಲಿ ತುಂಬಾ ದಿನ ಇರಲು ನಾನು ಇಷ್ಟಪಡುವುದಿಲ್ಲವಾದ ಕಾರಣ, ಆದಷ್ಟು ಬೇಗ ಇಲ್ಲಿಂದ ಕರೆದುಕೊಂಡು ಹೋಗುವಂತೆ ತಿಳಿಸು" ಎಂದು ಹೇಳಿದಳು.

ಕುಂತಿ ಹೇಳಿದ ಮಾತುಗಳನ್ನು ಯುಧಿಷ್ಠಿರನಿಗೆ ತಿಳಿಸುವುದಾಗಿ ಭರವಸೆ ಕೊಟ್ಟು ಅಲ್ಲಿಂದ ಹೊರಟು ಕರ್ಣನ ಮನೆ ತಲುಪಿದ. ಕರ್ಣನನ್ನು ತನ್ನ ಜೊತೆ ಸ್ವಲ್ಪ ದೂರ ಬಂದು ಹೋಗಲು ಕೇಳಿಕೊಂಡ. ಕರ್ಣನಿಗೆ ಕುತೂಹಲ ತಡೆಯಲಾಗಲಿಲ್ಲ. ತನ್ನನ್ನು ಕರೆಯಲು ಕಾರಣವೇನೆಂದು ಕೇಳಿದ ಕೃಷ್ಣ. ಕರ್ಣನ ಕಡೆ ತಿರುಗಿ, "ಕರ್ಣ ನಿನಗೊಂದು ಸತ್ಯ ಹೇಳಬೇಕಿದೆ, ಆದರೆ ಅದಕ್ಕೆ ಮುಂಚೆ, ನೀನು ದುರ್ಯೋಧನನ ಸಹವಾಸ ಬಿಡಬೇಕು. ನಿನ್ನ ದ್ವೇಷ, ಅಸೂಯೆಗಳನ್ನು ಬಿಟ್ಟುಬಿಡು, ನೀನು ತಿಳಿದಿರುವಂತೆ ನೀನು ಹೀನಕುಲದವನಲ್ಲ. ನೀನೂ ಕೂಡ ಕುರುವಂಶಕ್ಕೆ ಸೇರಿದವನೇ. ನೀನು ಪಾಂಡವರಲ್ಲಿ ಹಿರಿಯ. ಕುಂತಿಯ ಹೆಮ್ಮೆಯ ಮಗ. ದುರ್ಯೋಧನನ ಸಹವಾಸದಲ್ಲಿ ಹೀಗೆಯೇ ಮುಂದುವರೆದರೆ, ನಿನ್ನ ವಿನಾಶ ಖಂಡಿತ" ಎಂದು ಹಿತೈಷಿಯಂತೆ ವಿವರಿಸಿ ಹೇಳಿದ.

ಕರ್ಣ ನಕ್ಕು ಹೇಳಿದ. "ಕೃಷ್ಣ, ಬಹಳ ತಡವಾಗಿ ಹೇಳುತ್ತಿರುವೆ. ಈಗ ನನ್ನ ಜನ್ಮ ರಹಸ್ಯವನ್ನು ಹೇಳುವುದರಿಂದ ಬರುವ ಪ್ರಯೋಜನವಾದರೂ ಏನು? ನಾನು ಕುಂತಿಗೇ ಹುಟ್ಟಿರುವಾಗ ನನ್ನನ್ನು ಬಿಸಾಡುವ ಅಗತ್ಯವೇನು? ತಾಯಿಯ ಪ್ರೀತಿಯನ್ನೇಕೆ ನನಗೆ ಅವಳು ಕೊಡಲಿಲ್ಲ? ನನ್ನನ್ನು ಈ ರೀತಿ ಅನಾಥವಾಗಿ ಎಸೆಯಲು ನಾನು ಮಾಡಿದ ಅಪರಾಧವೇನು? ಇಷ್ಟು ದೀರ್ಘ ಕಾಲದ ಮೇಲೆ ನೀನೇಕೆ ನನ್ನ ಹುಟ್ಟಿನ ಬಗ್ಗೆ ಹೇಳುತ್ತಿರುವೆ? ನನ್ನ ಪ್ರೀತಿಯ ಗೆಳೆಯ, ನನ್ನ ಸ್ವಾಮಿ ನನ್ನ ಸರ್ವಸ್ವವಾಗಿರುವ ದುರ್ಯೋಧನನನ್ನು ಬಿಡಲು ಹೇಳುತ್ತಿರುವೆಯೇಕೆ? ನಾನೀಗ ಬಂದು ನನ್ನ ಸೋದರರಿಗೆ ನಾನೇನು ಮಾಡಬೇಕಿದೆ? ಈ ಪ್ರಪಂಚದಲ್ಲಿ ಸಂಬಂಧಗಳಿಗೆ ಅರ್ಥವೇ ಇಲ್ಲ" ಎಂದು ನೋವು, ಅಸಮಾಧಾನಗಳಿಂದ ತುಂಬಿದ ಹೃದಯವನ್ನು ತೆರೆದಿಟ್ಟ.

"ಕರ್ಣ, ನಿನ್ನ ತಾಯಿ ಕುಂತಿ ನಿನ್ನನ್ನು ಎಂತಹ ಪರಿಸ್ಥಿತಿಯಲ್ಲಿ ತೊರೆದಳೆಂಬುದನ್ನು ನೀನು ಖಂಡಿತ ಊಹಿಸಿಕೊಳ್ಳಲಾರೆ. ಅವಳು ಹೆಣ್ಣು, ಸಮಾಜದಲ್ಲಿ ಏನೆಲ್ಲ ಅವಮಾನ ಅನುಭವಿಸಬೇಕಿತ್ತು! ಅವಳಿಗೆ ಯಾವುದೇ ಸ್ವಾತಂತ್ರ್ಯವಿರಲಿಲ್ಲ. ಮೌನವಾಗಿ ಎಲ್ಲವನ್ನು ಸಹಿಸಿದಳು" ಎಂದು ಕೃಷ್ಣ ಕುಂತಿಯ ಅಸಹಾಯಕತೆಯನ್ನು ವಿವರಿಸಿದ.

"ಕೃಷ್ಣ ನಿನ್ನ ಸಮರ್ಥನೆ ಏನೇ ಇರಬಹುದು ನಾನು ಮಾತ್ರ ನನ್ನ ಸ್ನೇಹಿತನನ್ನು ಬಿಟ್ಟು ಬರಲಾರೆ. ಕುಂತಿ ಅಸಹಾಯಕತೆಯಿಂದ ರಾಜನಾಗಿ ಇರಬೇಕಾದವನೂ ಆಗಿರಬಹುದು. ನಾನು ಎಲ್ಲವನ್ನು ನಂಬುತ್ತೇನೆ. ಆದರೆ ದುರ್ಯೋಧನನನ್ನು ಬಿಡಲಾರೆ. ಅವನ ಪರವಾಗಿಯೇ ಯುದ್ಧ ಮಾಡುತ್ತೇನೆ ಹೊರತಾಗಿ ಪಾಂಡವರ ಕಡೆಯಿಂದ ಅಲ್ಲ. ದಯವಿಟ್ಟು ನನ್ನನ್ನು ಕ್ಷಮಿಸು" ಎಂದು ಕರ್ಣ ತನ್ನ ತರ್ಕ ಮತ್ತು ಅಸಹಾಯಕತೆಗಳನ್ನು ಮುಂದಿಟ್ಟ.

ಎಷ್ಟೇ ಪ್ರಯತ್ನಿಸಿದರೂ ಕರ್ಣನ ಮನಸ್ಸನ್ನು ಬದಲಾಯಿಸುವುದು ಸಾಧ್ಯವೇ ಇಲ್ಲವೆನಿಸಿತು. ಅವನು ಎಂದಿಗೂ ಪಾಂಡವರ ಕಡೆಗೆ ಬರಲಾರ

ಎಂಬುದು ಖಚಿತವಾದ ಮೇಲೆ, ಕರ್ಣನನ್ನು ಅವನ ಮನೆಗೆ ಬಿಟ್ಟು ಮತ್ತೆ ಕುಂತಿಯನ್ನು ಕಂಡು, ತನ್ನ ಮತ್ತು ಕರ್ಣರ ನಡುವೆ ನಡೆದ ಮಾತುಕತೆಯನ್ನು ಕರ್ಣನು ಪಾಂಡವರನ್ನು ಸೇರಲು ಒಪ್ಪಿಕೊಳ್ಳದಿದ್ದುದು, ಎಲ್ಲವನ್ನು ತಿಳಿಸಿದ. ಅಲ್ಲದೆ ಕುಂತಿಯನ್ನೂ ಒಮ್ಮೆ ಕರ್ಣನನ್ನು ಕಂಡು ಮಾತಾಡಿಸಿ ಬರಲು ಸಲಹೆ ನೀಡಿದ.



## ಕುಂತಿ ಕರ್ಣನನ್ನು ಭೇಟಿಯಾದಳು

ಒಂದು ದಿನ ಬೆಳಿಗ್ಗೆ ಕರ್ಣ ಸೂರ್ಯನಿಗೆ ಅರ್ಘ್ಯವನ್ನು ನೀಡುತ್ತಿದ್ದ. ಅವನು ಪ್ರತಿದಿನ ಹೀಗೆ ಮಾಡುತ್ತಿದ್ದ ವೇಳೆಯನ್ನು ತಿಳಿದಿದ್ದಳು. ಆದ್ದರಿಂದ ಅವನು ಬರುತ್ತಿದ್ದ ಸಮಯ ನೋಡಿ ಅಲ್ಲಿಗೆ ಬಂದಳು. ಕರ್ಣ ಅವಳು ಬಂದುದನ್ನು ಗಮನಿಸಿದ. ಬಳಿಗೆ ಹೋಗಿ, "ಅಮ್ಮ ನಾನು ಕರ್ಣ. ಅತಿರಥ ಮತ್ತು ರಾಧೆಯ ಮಗ. ನನ್ನಿಂದ ಏನಾಗಬೇಕೋ ಆದೇಶಿಸಿ" ಎಂದು ತನ್ನನ್ನು ಪರಿಚಯಿಸಿಕೊಂಡ.

ಕುಂತಿ ಅವನ ಮಾತುಗಳನ್ನು ಕೇಳಿ ಕಣ್ಣೀರಿಟ್ಟಳು. "ಕರ್ಣ ನೀನು ಅವರ ಮಗನಲ್ಲ. ನೀನು ಕುಂತೀಪುತ್ರ. ಅವರೇನಿದ್ದರೂ ನಿನ್ನ ಸಾಕು ತಂದೆ ತಾಯಿಗಳು. ಪಾಂಡವರ ಹಿರಿಯನಾದ ನೀನು ಅವರಿಗೆ ಮಾರ್ಗದರ್ಶನ ಮಾಡುವುದು ನಿನ್ನ ಕರ್ತವ್ಯ. ಬಂದು ನಿನ್ನ ಸೋದರರನ್ನು ಸೇರಿಕೋ. ನಿನ್ನ ಸಾಕು ತಂದೆ ತಾಯಿಯರ ವಿಚಾರ, ದುರ್ಯೋಧನನ ವಿಚಾರ ಮರೆತು ಬಿಡು" ಎಂದು ಕೇಳಿಕೊಂಡಳು.

"ಕ್ಷಮಿಸು ತಾಯಿ, ಈ ಕಡೇ ಗಳಿಗೆಯಲ್ಲಿ ನಾನು ಏನನ್ನೂ ನಿಮ್ಮ ಪರವಾಗಿ ನಿರ್ಧರಿಸಲಾರೆ. ನಾನು ನಿಮ್ಮ ಕಡೆ ಬಂದು ಸೇರಿದರೆ ಕೃತಘ್ನನಾಗುತ್ತೇನೆ. ನೀನು ನನ್ನ ತಾಯಿ ಎಂದು ಹೇಳಿರುವ ಕಾರಣ, ನಿನ್ನ ಮಗನಾಗಿ ಕರ್ತವ್ಯವಿರುವುದರಿಂದ, ನಾನು ಏನು ಮಾಡಬೇಕೆಂದು ಹೇಳಿ" ಎಂದು ವಿನಯದಿಂದ ಹೇಳಿದ.

ಕರ್ಣ, ಏನೇ ಹೇಳಿದರೂ ತಮ್ಮ ಕಡೆಗೆ ಬರುವುದಿಲ್ಲವೆಂದು ಖಚಿತವಾದ ಮೇಲೆ, ತನ್ನ ಐವರು ಮಕ್ಕಳನ್ನಾದರೂ ಕಾಪಾಡಬೇಕೆಂದು ಕೇಳಿಕೊಂಡಳು. ಆದರೆ ಕರ್ಣ, "ಅಮ್ಮ ನೀನು ಕೇಳಿದಂತೆ, ಎಲ್ಲ ಮಕ್ಕಳನ್ನು, ಅರ್ಜುನನ ಹೊರತು ಉಳಿಸುತ್ತೇನೆ. ಯುದ್ಧದಲ್ಲಿ ಅರ್ಜುನನ

ಜೊತೆ ಹೋರಾಡಬೇಕೆಂದು ನಿರ್ಧರಿಸಿದ್ದೇನೆ. ಆದ್ದರಿಂದ ಅರ್ಜುನನ ಉಳಿವು ಅಳಿವು ಯುದ್ಧ ನಿರ್ಧರಿಸುತ್ತದೆ. ಅವನು ಸಾಯುತ್ತಾನೆ. ಇಲ್ಲ ನಾನು ಸಾಯುತ್ತೇನೆ. ಏನಾದರಾಗಲಿ ನಿನ್ನ ಐದು ಜನ ಮಕ್ಕಳು ಮಾತ್ರ ನಿನಗೆ ಉಳಿದಿರುತ್ತಾರೆ" ಎಂದು ತನ್ನ ತೀರ್ಮಾನವನ್ನು ತಿಳಿಸಿದ.

ಕುಂತಿಗೆ ಮುಂದೆ ಏನು ಮಾತಾಡಬೇಕೆಂದು ತಿಳಿಯಲಿಲ್ಲ. "ಸರಿಯಪ್ಪ, ನಿನ್ನಿಷ್ಟ ಹೇಗೋ ಹಾಗೆ ಮಾಡು. ಎಲ್ಲವನ್ನೂ ವಿಧಿಯೇ ನೋಡಕೊಳ್ಳುತ್ತದೆ. ಕ್ಷತ್ರಿಯ ವಂಶ ಉಳಿಸಬೇಕೆಂದು ಕೊಂಡೆ. ಈ ಯುದ್ಧದಲ್ಲಿ ಮಾನವಕುಲವೇ ನಾಶವಾಗುತ್ತದೆ ಎಂದೇ ಅನಿಸುತ್ತದೆ" ಎಂದು ಹೇಳಿ ನಿಟ್ಟುಸಿರಿನೊಂದಿಗೆ ಹಿಂದಿರುಗಿದಳು.



## ಯುದ್ಧ ನಿರ್ಧಾರವಾಯಿತು

ಪಾಂಡವರು ಯುದ್ಧವನ್ನು ತಡೆಯಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ದುರ್ಯೋಧನ ಮತ್ತು ಅವನ ಹಿಂಬಾಲಕರು ಯುದ್ಧವೇ ಬೇಕೆಂದು ಹಠ ಹಿಡಿದಿದ್ದರು. ಭೀಷ್ಮ, ವಿದುರ, ಧೃತರಾಷ್ಟ್ರ ಮೊದಲಾದವರೂ ಶಾಂತಿ ಸಂಧಾನ ಮಾಡೆಂದು ಎಷ್ಟೇ ಹೇಳಿದರೂ ಪ್ರಯೋಜನವಾಗಲಿಲ್ಲ. ಕೌರವರು ಯಾರನ್ನೂ ಲೆಕ್ಕಿಸಲಿಲ್ಲ.

ಕೃಷ್ಣ ಹಿಂತಿರುಗಿ ಬಂದು, ದುರ್ಯೋಧನಾದಿಗಳು ಯಾವುದೇ ರೀತಿಯ ಸಂಧಾನಕ್ಕೆ ಒಪ್ಪಿಕೊಳ್ಳಲಿಲ್ಲವೆಂಬ ವಿಷಯವನ್ನು ತಿಳಿಸಿದ. ಯಾವುದೇ ಕ್ಷಣದಲ್ಲಾದರೂ ಯುದ್ಧ ಸಂಭವಿಸಬಹುದಾದ್ದರಿಂದ, ಸಿದ್ಧವಾಗಿರಲು ಹೇಳಿದ.

ಯುಧಿಷ್ಠಿರ ಮತ್ತು ಉಳಿದವರು ತಮ್ಮ ಸೈನ್ಯವನ್ನು ಏಳು ಭಾಗಗಳಾಗಿ ನಿಲ್ಲಿಸಿದರು. ದ್ರುಪದ, ವಿರಾಟ, ದೃಷ್ಟದ್ಯುಮ್ನ, ಶಿಖಂಡಿ, ಸಾತ್ಯಕಿ, ಚೇಕಿತಾನ ಮತ್ತು ಭೀಮಸೇನ ಒಂದೊಂದು ಭಾಗದ ನಾಯಕತ್ವವನ್ನು ವಹಿಸಿಕೊಂಡರು. ಇವರೆಲ್ಲ ಬಹಳ ಪರಾಕ್ರಮಿಗಳು. ಶಸ್ತ್ರಾಸ್ತ್ರಗಳ ಪ್ರಯೋಗದಲ್ಲಿ ನಿಪುಣರಾಗಿದ್ದರು. ಬಿಲ್ಲುಗಾರಿಕೆಯಲ್ಲಿಯೂ ಅವರನ್ನು ಮೀರಿಸುವವರು ಇರಲಿಲ್ಲ. ದೃಷ್ಟದ್ಯುಮ್ನನೇ ಸೇನಾಪತಿಯಾಗಿ ನೇಮಕಗೊಂಡಿದ್ದ.

ಮಾರನೇ ದಿನ ಪಾಂಡವ ಸೇನೆ ಯುದ್ಧ ಭೂಮಿಯತ್ತ ಸಾಗಿತು. ಊರಿನ ಜನ ಅವರನ್ನು ಶುಭಕೋರಿ ಬೀಳ್ಕೊಟ್ಟರು. ನಲ್ವತ್ತು ಸಾವಿರ ರಥಗಳು, ಎರಡು ಲಕ್ಷ ಕುದುರೆಗಳು, ನಾಲ್ಕು ಲಕ್ಷ ಪದಾತಿಗಳು, ಅರವತ್ತು ಸಾವಿರ ಆನೆಗಳು ಒಟ್ಟಾಗಿ ಪಾಂಡವ ಸೇನೆಯ ಭಾಗವಾಗಿತ್ತು. ಸೇನಾನಾಯಕರು ಕುರುಕ್ಷೇತ್ರದ ಕಡೆ ನಡೆದರು.

ಕುರುಕ್ಷೇತ್ರದಲ್ಲಿ ಸೇನಾ ಶಿಬಿರಗಳನ್ನು ಹಾಕಿದರು. ಶಿಬಿರಗಳು ಅವರವರ ಅಧಿಕಾರ, ಅಂತಸ್ತಿಗೆ ತಕ್ಕಂತೆ ರಚಿಸಲಾಗಿತ್ತು. ಗೋದಾಮುಗಳಲ್ಲಿ ದವಸ ಧಾನ್ಯಗಳನ್ನು ಶೇಖರಿಸಿ ಇಡಲಾಗಿತ್ತು. ನೋಡುವುದಕ್ಕೆ ದೊಡ್ಡ ನಗರವೊಂದು ಹೊಸದಾಗಿ ನಿರ್ಮಾಣವಾದಂತಿತ್ತು.

ಎಲ್ಲವೂ ಸಿದ್ಧವಾಗಿತ್ತು. ಯುದ್ಧ ಆರಂಭಿಸಲು ತಮ್ಮ ತಮ್ಮ ಸೇನಾನಾಯಕರ ಆದೇಶಕ್ಕಾಗಿ ಸೇನೆಗಳು ಕಾಯುತ್ತಿದ್ದವು.

ಹಸ್ತಿನಾಪುರದಲ್ಲಿಯೂ ಯುದ್ಧ ಸಿದ್ಧತೆಗಳು ನಡೆದಿದ್ದವು. ಕೌರವರ ಕಡೆ ಹನ್ನೊಂದು ಅಕ್ಷೌಹಿಣಿಗಳು ಇದ್ದವು. ಕೃಪ, ದ್ರೋಣ, ಶಲ್ಯ, ಸಿಂಧುರಾಜ, ಸುದಕ್ಷಿಣ, ಕೃತವರ್ಮ, ಅಶ್ವತ್ಥಾಮ, ಕರ್ಣ, ಭೂರಿಶ್ರವ, ಶಕುನಿ, ಬಾಹ್ಲಿಕ ಮೊದಲಾದ ವೀರರಿದ್ದರು. ಇವರೆಲ್ಲರೂ ಒಮ್ಮತದಿಂದ ಭೀಷ್ಮರನ್ನು ಸೇನಾಪತಿಯಾಗಿ ನಿರ್ಧರಿಸಿದರು. ಭೀಷ್ಮರು ದುರ್ಯೋಧನನ ಪ್ರಾರ್ಥನೆಯುನ್ನು ಸ್ವೀಕರಿಸಿದರು. ಅವರಿಗೆ ಸೇನಾಪತಿಯಾಗಲು ಅಭ್ಯಂತರವಿರಲಿಲ್ಲ. ಆದರೂ ಅವರು, "ದುರ್ಯೋಧನ, ನಿನ್ನ ಪ್ರಾರ್ಥನೆ ಸ್ವೀಕರಿಸಲು ನನಗೆ ಯಾವ ತೊಂದರೆಯೂ ಇಲ್ಲ. ಆದರೆ ಒಂದು ವಿಷಯುವನ್ನು ನಿನಗೆ ಸ್ಪಷ್ಟ ಪಡಿಸಬೇಕಾಗಿದೆ. ಯಾವುದೇ ಸಂದರ್ಭದಲ್ಲಿಯೂ ನಾನು ಪಾಂಡವರನ್ನು ಕೊಲ್ಲುವುದಿಲ್ಲ. ಅವರ ಪರವಾಗಿ ಯಾರೇ ಹೋರಾಡಿದರೂ ಅವರನ್ನು ಕೊಲ್ಲದೆ ಬಿಡುವುದಿಲ್ಲ. ದಿನಕ್ಕೆ ಒಂದು ಸಾವಿರ ಸೈನಿಕರನ್ನು ಕೊಲ್ಲುತ್ತೇನೆಂದು ಮಾತ್ರ ವಚನ ಕೊಡುತ್ತೇನೆ" ಎಂದು ತನ್ನ ಷರತ್ತನ್ನು ಸ್ಪಷ್ಟಪಡಿಸಿದ.

"ಅಜ್ಜ, ನಿಮಗೆ ಇಷ್ಟ ಬಂದಂತೆ ನೀವು ಮಾಡಬಹುದು. ನಾನು ಅಡ್ಡಿ ಮಾಡುವುದಿಲ್ಲ. ಆದರೆ ಕೌರವರನ್ನು ರಕ್ಷಿಸುವ ಭಾರ ನಿಮ್ಮದು" ಎಂದು ವಿನಯದಿಂದಲೇ ಹೇಳಿದ.

"ದುರ್ಯೋಧನ, ನೀವೆಲ್ಲರೂ ಒಪ್ಪಿಗೆಯಿಂದಲೇ ನನ್ನನ್ನು ಸೇನಾಪತಿ ಯನ್ನಾಗಿ ನಿರ್ಧರಿಸಿದ್ದೀರಿ. ಆದರೆ ಕರ್ಣ ಇದಕ್ಕೆ ಒಪ್ಪುವನೆಂಬ ನಂಬಿಕೆಯಿಲ್ಲ" ಎಂದು ಅನುಮಾನಿಸಿ ಹೇಳಿದರು.

ನಿಜವಾಗಿಯೂ ಭೀಷ್ಮರು ಸೇನಾಪತಿಯಾಗುವುದು ಕರ್ಣನಿಗೆ ಇಷ್ಟವಿರಲಿಲ್ಲ. ಅವನು ಅದನ್ನು ಎಲ್ಲರೂ ಊಹಿಸಿದಂತೆ ಭೀಷ್ಮರೂ ಅನುಮಾನಿಸಿದಂತೆ ವಿರೋಧಿಸಿದ. ಅವನು ವಿರೋಧಿಸಲು ಬಲವಾದ ಕಾರಣವಿತ್ತು. ಭೀಷ್ಮ ಪಾಂಡವ ಪಕ್ಷಪಾತಿ. ಯುದ್ಧದಲ್ಲಿ ಅವರಿಗೆ ಯಾವುದೇ ರೀತಿಯಲ್ಲಿ ಹಾನಿ ಮಾಡುವುದಿಲ್ಲ; ನ್ಯಾಯ ಸಲ್ಲಿಸುವುದಿಲ್ಲ. ಅಲ್ಲದೆ ಭೀಷ್ಮರಿಗೆ ವಯಸ್ಸಾಗಿದೆ. ಹೋರಾಡುವ ಶಕ್ತಿಯಿಲ್ಲ. ಆದ್ದರಿಂದ ಸೇನಾಪತಿಯಾಗಲು ಸಮರ್ಥರಲ್ಲ. ಆ ಕಾರಣಕ್ಕಾಗಿಯೇ ತನ್ನನ್ನೇ ಸೇನಾಪತಿಯಾಗಿಸು ಎಂದ. ದ್ರೋಣರಿಗೆ ಭೀಷ್ಮರ ವಿಚಾರದಲ್ಲಿ ಕರ್ಣನು ಆಡಿದ ಮಾತುಗಳಿಂದ ಸಿಟ್ಟು ಬಂತು. ಅವರು ಅವನನ್ನು ಕೀಳು ಕುಲದವನೆಂದು ಎತ್ತಿ ಹೇಳಿದರು. "ಕರ್ಣ ನೀನು ಕೀಳು ಜಾತಿ, ಕುಲದಲ್ಲಿ ಹುಟ್ಟಿರುವುದರಿಂದ ಭೀಷ್ಮರ ಯೋಗ್ಯತೆ ಅರ್ಥವಾಗುವುದಿಲ್ಲ. ಆದ್ದರಿಂದ ಅವರ ಬಗ್ಗೆ ಹಾಗೆ ಹೇಳುವುದು ನಿನಗೆ ಸಹಜವೇ!' ಎಂದು ವ್ಯಂಗ್ಯವಾಗಿ ನುಡಿದರು.

ಕರ್ಣನಿಗೆ ತನ್ನ ಕುಲದ ಬಗ್ಗೆ ಮಾತಾಡಿದ್ದನ್ನು ಸಹಿಸಿಕೊಳ್ಳಲಿಲ್ಲ. ಅತಿಯಾದ ಸಿಟ್ಟು ಬಂತು. ಆ ಸಿಟ್ಟಿನಲ್ಲಿ ಕೈಲಿದ್ದ ಬಿಲ್ಲುಬಾಣಗಳನ್ನು ಎಸೆದು, ತಾನು ಈ ಯುದ್ಧದಲ್ಲಿ ಭೀಷ್ಮರು ಬದುಕಿರುವವರೆಗೆ ಭಾಗವಹಿಸುವುದಿಲ್ಲವೆಂದು ಹೇಳಿ ಅಲ್ಲಿಂದ ಹೊರಟು ಹೋದ.

ಈ ಘಟನೆಯಿಂದ ದುರ್ಯೋಧನನಿಗೆ ಸ್ವಲ್ಪ ಗೊಂದಲವಾದರೂ ತಾನು ತನ್ನ ಮೊದಲಿನ ನಿರ್ಧಾರದಂತೆ ಭೀಷ್ಮರನ್ನೇ ಸೇನಾಪತಿಯೆಂದು ಘೋಷಿಸಿದ. ಭೀಷ್ಮರು ಕೌರವ ಸೈನ್ಯವನ್ನು ಮುನ್ನಡೆಸುತ್ತಾರೆಂದು ಆದೇಶಿಸುತ್ತಾರೆಂದು ಎಲ್ಲರಿಗೂ ತಿಳಿಸಿದ.



## ಬಲರಾಮ ಶಲ್ಯರ ಆಗಮನ

ಬಲರಾಮ, ಆಕ್ರೂರನೊಂದಿಗೆ ತನ್ನ ಯಾದವ ಸೈನಿಕರನ್ನೆಲ್ಲಾ ಜೊತೆ ಮಾಡಿಕೊಂಡು ಪಾಂಡವರಲ್ಲಿಗೆ ಬಂದ. ಕೃಷ್ಣನೂ ಪಾಂಡವರೊಂದಿಗೆ ಇದ್ದ. ಪರಸ್ಪರ ಗೌರವದ ವಿನಿಮಯ ಆಯಿತು. ಬಲರಾಮ ಯುಧಿಷ್ಠಿರನಿಗೆ ಹೇಳಿದ. "ಯುಧಿಷ್ಠಿರ, ನಿನ್ನ ಮತ್ತು ದುರ್ಯೋಧನರ ನಡುವೆ ಹೀಗಾದದ್ದು ನಿಜವಾಗಿಯೂ ದುರದೃಷ್ಟ! ಯುದ್ಧದ ಪರಿಣಾಮಗಳು ಏನೆಂಬುದು ನಿನಗೇ ತಿಳಿದಿದೆ. ಎಂದಿಗೂ ಯುದ್ಧ ವಿನಾಶಕಾರಿಯೇ ಹೊರತು ಒಳ್ಳೆಯದಲ್ಲ. ನಾನು ಎಷ್ಟೇ ಯುದ್ಧ ಬೇಡವೆಂದು ದುರ್ಯೋಧನನಿಗೆ ತಿಳಿಸಿ ಹೇಳಿದರೂ ನನ್ನ ಮಾತನ್ನು ಕಿವಿಮೇಲೆ ಹಾಕಿಕೊಳ್ಳಲೇ ಇಲ್ಲ. ಆದ್ದರಿಂದ ಯುದ್ಧ ಅನಿವಾರ್ಯವಾಯಿತು. ಆದರೆ ಈಗ ಸಮಸ್ಯೆ ಬಂದಿರುವುದು ನಾನು ಯಾರ ಕಡೆ ಇರಬೇಕು ಎಂಬುದು. ನೀವಿಬ್ಬರೂ ನನಗೆ ಪ್ರಿಯರೇ, ಸಮಾನರೇ ನಿಮ್ಮಿಬ್ಬರನ್ನೂ ಒಂದೆ ರೀತಿ ನೋಡಿಕೊಳ್ಳಬೇಕಾದ್ದು ನನ್ನ ಧರ್ಮ. ಕೃಷ್ಣ ಮಾತ್ರ ಆಗಲೇ ನಿಮ್ಮ ಮೇಲಿನ ಪ್ರೀತಿಯಿಂದಾಗಿ ನಿಮ್ಮ ಕಡೆಗೆ ಇದ್ದಾನೆ. ನಾನೂ ನಿಮ್ಮ ಕಡೆ ಬರುವುದು ಸರಿಯಲ್ಲ. ಅಲ್ಲದೆ ಭೀಮ ದುರ್ಯೋಧನರಿಬ್ಬರೂ ನನ್ನ ಶಿಷ್ಯರಾಗಿರುವುದರಿಂದ, ಅವರಿಬ್ಬರಲ್ಲಿ ಯಾರೊಬ್ಬರಿಗೂ ಏನಾದರೂ ಆದರೆ ನನ್ನಿಂದ ನೋಡಲಾಗುವುದಿಲ್ಲ. ಆದ್ದರಿಂದ ಭಾಗಿಯಾಗುವುದೇ ಬೇಡವೆಂದುಕೊಂಡಿದ್ದೇನೆ. ಕೌರವರು ಸಾಯುವುದನ್ನು ನನ್ನಿಂದ ನೋಡಲೂ ಆಗುವುದಿಲ್ಲ. ಅದಕ್ಕೆಂದೇ ನಾನು ತೀರ್ಥಯಾತ್ರೆಯ ಮೇಲೆ ಹೊರಟು ಬಿಡಬೇಕೆಂದುಕೊಂಡಿದ್ದೇನೆ" ಎಂದು ಪರಿಸ್ಥಿತಿಯ ಸಂದಿಗ್ಧತೆ ಮತ್ತು ತನ್ನ ಅಸಹಾಯಕತೆಯನ್ನು ವಿವರಿಸಿದ.

ಕೃಷ್ಣನೂ ಎಲ್ಲವನ್ನು ಕೇಳಿಸಿಕೊಂಡ. ತನ್ನ ಅಣ್ಣ ಬಲರಾಮ ದುರ್ಯೋಧನನ ಪಕ್ಷಪಾತಿಯೆಂಬುದನ್ನು ತಿಳಿದಿದ್ದ. ಅದನ್ನು ಹೊರಗೆ ತೋರಿಸಿಕೊಳ್ಳಲು ಸಂಕೋಚ. ಕೌರವನ ಕಡೆಗಿರಲು ಅವನಿಗೆ ಇಷ್ಟ. ಆದರೆ ಹಾಗೇನಾದರೂ ಅವರ ಕಡೆ ನಿಂತರೆ ತನ್ನ ಸ್ವಂತ ಸೋದರನ ವಿರುದ್ಧ ಹೋರಾಡಬೇಕಾಗುತ್ತದೆ. ಈ ಎಲ್ಲ ಕಾರಣಗಳಿಂದಾಗಿಯೇ ತೀರ್ಥಯಾತ್ರೆಯ ನೆಪದಲ್ಲಿ ಯುದ್ಧದಿಂದ ದೂರವಿರಲು ಯೋಚಿಸಿದ್ದಾನೆಂಬುದನ್ನು ಕೃಷ್ಣ ಅರ್ಥಮಾಡಿಕೊಂಡಿದ್ದ.

ಬಲರಾಮ ಅಲ್ಲಿಂದ ಹೊರಟು ಹೋದ ಮೇಲೆ ಮದ್ರದೇಶದ ಮಹಾಪರಾಕ್ರಮಶಾಲಿಯಾದ ಶಲ್ಯ ತನ್ನ ಸೈನ್ಯವನ್ನು ತೆಗೆದುಕೊಂಡು ಪಾಂಡವರ ಸಹಾಯಕ್ಕೆಂದು ಬಂದ. ಆದರೆ ದುರ್ಯೋಧನ ಗುಪ್ತಚರರ ಮೂಲಕ, ಶಲ್ಯನ ಬರವನ್ನು ತಿಳಿದುಕೊಂಡು ಅವನ ಸ್ವಾಗತಕ್ಕೆ ಭರ್ಜರಿ ವ್ಯವಸ್ಥೆ ಮಾಡಿದ. ಶಲ್ಯ ತನ್ನ ಸ್ವಾಗತಕ್ಕೆ ಮಾಡಿದ ವ್ಯವಸ್ಥೆಯಿಂದ ತುಂಬ ಹಿಗ್ಗಿದ. ಇಂತಹ ಅದ್ಭುತ ವ್ಯವಸ್ಥೆಯಿಂದ ಎಷ್ಟರ ಮಟ್ಟಿಗೆ ಪ್ರಭಾವಿತನಾಗಿದ್ದನೆಂದರೆ, ಇಂತಹ ಭರ್ಜರಿ ರೀತಿಯಲ್ಲಿ ಅತಿಥಿಯ ಸ್ವಾಗತಕ್ಕೆ ಏರ್ಪಾಡುಗಳನ್ನು ಯಾರೇ ಮಾಡಿರಲಿ ಅವರಿಗೆ ನನ್ನ ಬಹುಮಾನವಿದೆ" ಎಂದು ದೊಡ್ಡ ದನಿಯಲ್ಲಿ ಘೋಷಿಸಿಯೇ ಬಿಟ್ಟ. ದುರ್ಯೋಧನ ಶಲ್ಯ ಸಂತೋಷವಾಗಿ ಇರುವ ಸಮಯ ನೋಡಿ, ಅವಕಾಶ ತಪ್ಪಿಸಿಕೊಳ್ಳಬಾರದು ಎನಿಸಿ, ಕೂಡಲೇ ಶಲ್ಯನಲ್ಲಿಗೆ ಓಡಿ ನಗುನಗುತ್ತಾ ಆ ವ್ಯವಸ್ಥೆ ಮಾಡಿದವನು ತಾನೇ ಎಂದು ತಿಳಿಸಿದ. ಶಲ್ಯನಿಗೆ ಆಶ್ಚರ್ಯವಾಯಿತು! ಪಾಂಡವರೇ ಈ ಎಲ್ಲ ಅದ್ದೂರಿಯಾದ ಸ್ವಾಗತದ ವ್ಯವಸ್ಥೆ ಮಾಡಿದ್ದಾರೆ ಎಂದುಕೊಂಡರೆ, ದುರ್ಯೋಧನ ತಾನೇ ಇದನ್ನು ಮಾಡಿದವನು ಎಂದಿದ್ದಾನೆ. ವಿನಾಕಾರಣ ಕಷ್ಟಕ್ಕೆ ಸಿಲುಕಿದೆನಲ್ಲಾ ಎಂದು ಪಶ್ಚಾತ್ತಾಪಪಟ್ಟ. ಆದರೂ ಕೊಟ್ಟ ಮಾತಿನಂತೆ ನಡೆಯಬೇಕಾಯಿತು. ಪ್ರತಿಯಾಗಿ ಏನನ್ನಾದರೂ ಕೇಳು, ಕೊಡುತ್ತೇವೆ ಎಂದು ಭರವಸೆ ನೀಡಿದ. ದುರ್ಯೋಧನ ತಡಮಾಡದೆ, ತನ್ನ ಸೇನಾಧಿಕಾರಿ ಆಗಬೇಕೆಂದ.

ಶಲ್ಯ ಕೂಡಲೇ ಒಪ್ಪಿಕೊಳ್ಳಲಿಲ್ಲ. ಪಾಂಡವರಲ್ಲಿಗೆ ಮೊದಲು ಹೋಗಿ ಬಂದು ನಂತರ ತಿಳಿಸುವುದಾಗಿ ಹೇಳಿ ಹೊರಟ.

ದುರ್ಯೋಧನನಿಗೆ ಶಲ್ಯ ಎಲ್ಲಿ ಪಾಂಡವರ ಕಡೆಗೆ ಇದ್ದು ಬಿಡುತ್ತಾನೋ ಎಂದು ಭಯವಾಯಿತು. ಅದಕ್ಕೆಂದೇ ಬೇಗ ಬಂದು ಬಿಡಬೇಕೆಂದು ಶಲ್ಯನಿಗೆ ಪದೇ ಪದೇ ಹೇಳಿ ಕಳಿಸಿದ.

ಶಲ್ಯ ಯುಧಿಷ್ಠಿರನನ್ನು ಭೇಟಿಯಾದ. ಅವರಿಬ್ಬರೂ ಲೋಕಾಭಿರಾಮವಾಗಿ ಅದೂ ಇದೂ ಮಾತನಾಡಿದರು. ಶಲ್ಯ ಯುಧಿಷ್ಠಿರನಿಗೆ, 'ಯುಧಿಷ್ಠಿರ, ಮೊದಲು ನೀನು ನನ್ನ ಕ್ಷಮಿಸಬೇಕು. ನನ್ನ ಸೈನ್ಯದೊಂದಿಗೆ ನಿನ್ನ ಸಹಾಯ ಮಾಡಬೇಕೆಂದೇ ನಾನಿಲ್ಲಿಗೆ ಬಂದೆ. ಆದರೆ ಬರುವಾಗ ಮಧ್ಯೆ ದುರ್ಯೋಧನನನ್ನು ದುರದೃಷ್ಟವಶಾತ್ ನೋಡಬೇಕಾಯಿತು. ಅವನು ನನಗೆ ನೀಡಿದ ಅದ್ದೂರಿ ಆತಿಥ್ಯದಿಂದ ಸಂತೋಷಗೊಂಡು ತಿಳಿಯದೆ ಅವನಿಗೆ ಏನನ್ನಾದರೂ ಬೇಡು ಎಂದಾಗ, ನನ್ನ ಸೈನ್ಯ ಸಹಾಯವನ್ನು ಯಾಚಿಸಿದ ಈಗ ನಾನು ಸಂದಿಗ್ಧದಲ್ಲಿ ಇದ್ದೇನೆ. ಏನು ಮಾಡುವುದೆಂದು ತಿಳಿಯುತ್ತಿಲ್ಲ" ಎಂದು ಅಸಹಾಯಕನಂತೆ ಹೇಳಿದ.

ಯುಧಿಷ್ಠಿರನಿಗೆ ಏನು ಹೇಳಲೂ ತೋಚಲಿಲ್ಲ. ಒಂದೆರಡು ಕ್ಷಣ ಯೋಚಿಸಿದ ನಂತರ ಹೇಳಿದ. "ನೀವು ಕೊಟ್ಟ ಮಾತನ್ನು ಉಳಿಸಿಕೊಳ್ಳಿ ಅವನನ್ನು ಬಿಟ್ಟು ನಮ್ಮ ಕಡೆ ಬಂದು ಸೇರಲು ಹೇಳುವುದು ಸರಿಯಲ್ಲ. ಆದರೆ ನನಗೊಂದು ಸಹಾಯ ಮಾಡಬೇಕು" ಎಂದು.

"ಹೇಳು ಯುಧಿಷ್ಠಿರ, ಸಂಕೋಚ ಪಡಬೇಡ. ನೀನು ಏನು ಕೇಳಿದರೂ ನಾನು ಹಿಂದುಮುಂದು ನೋಡುವುದಿಲ್ಲ" ಶಲ್ಯನೆಂದ.

"ಹಾಗಿದ್ದ ಮೇಲೆ, ದುರ್ಯೋಧನನನ್ನು ನೀನು, ನಿನ್ನನ್ನು ಕರ್ಣನಿಗೆ ಸಾರಥಿಯಾಗಿ ಮಾಡುವಂತೆ ಕೇಳು, ಕರ್ಣ, ಅರ್ಜುನನೊಡನೆ ಯುದ್ಧ ಮಾಡಲು ಬಯಸಿದ್ದಾನೆ. ಅವನೊಡನೆ ಯುದ್ಧ ಮಾಡುವಾಗ ಅವನಿಗೆ ಏನಾದರೂ ಹೇಳುತ್ತಿರು. ನಿನ್ನ ಮಾತಿಗೆ, ಆದೇಶಗಳಿಗೆ ಸಿಟ್ಟುಗೊಂಡು ಪ್ರತಿಯಾಗಿ ನಿನಗೆ ಏನಾದರೂ ಅವಮಾನಕರವಾದ್ದನ್ನು ಹೇಳುತ್ತಾನೆ. ಆವೇಶದಿಂದ ಮನಸ್ಸಿನ ಸ್ಥಿಮಿತವನ್ನು ಕಳೆದುಕೊಳ್ಳುತ್ತಾನೆ. ಆ ಕ್ಷಣದಲ್ಲಿ

ನೀನು ಬೇಸರಗೊಂಡು ಸಾರಥ್ಯ ಬಿಟ್ಟು ಬಂದು ಬಿಡು" ಎಂದು ಉಪಾಯವನ್ನು ಹೇಳಿಕೊಟ್ಟ.

ಯುಧಿಷ್ಠಿರ ಹೇಳಿದ್ದೆಲ್ಲವನ್ನೂ ಶಲ್ಯ ಒಪ್ಪಿಕೊಂಡ ಮತ್ತು ಪಾಂಡವರಿಗೆ ಶುಭವನ್ನು, ಗೆಲುವನ್ನು ಹಾರೈಸಿ, ತಾನು ತನ್ನ ಸೈನ್ಯದೊಂದಿಗೆ ದುರ್ಯೋಧನನನ್ನು ಸೇರಿಕೊಂಡ.

ಶಲ್ಯನ ಇಷ್ಟದಂತೆ ಅವನು ಕರ್ಣನ ಸಾರಥಿ ಎಂದು ತೀರ್ಮಾನವಾಯಿತು.



## ಯುದ್ಧ ಆರಂಭವಾಯಿತು

ಕುರುಕ್ಷೇತ್ರದಲ್ಲಿ ಎರಡೂ ಕಡೆಯ ಸೈನ್ಯಗಳು ಬಂದು ನಿಂತವು. ಯುದ್ಧ ಆರಂಭವಾಗಲು ಎಲ್ಲ ಸಿದ್ಧತೆಗಳಾದವು. ಎರಡೂ ಕಡೆಯ ಸೈನಿಕರಿಗೆ ನೀತಿ ಸಂಹಿತೆ, ಸಮರ ನೀತಿಯನ್ನು ವಿವರಿಸಿ ತಿಳಿಸಿದರು. ಅಗತ್ಯಕ್ಕೆ ತಕ್ಕಂತೆ ಸಮರದ ರೀತಿ, ನೀತಿಗಳನ್ನು ಬದಲಾಯಿಸಲಾಗುವು ದೆಂದೂ ತಿಳಿಸಿದರು.

ಪ್ರತಿದಿನ ಸೂರ್ಯೋದಯವಾಗುತ್ತಿದ್ದಂತೆ ರಣಕಹಳೆಯ ಮೊಳಗಿ ನೊಂದಿಗೆ ಯುದ್ಧಾರಂಭದ ಸೂಚನೆ ನೀಡಲಾಗುವುದು. ಯಾವುದೇ ಕಾರಣಕ್ಕೂ ಸೂರ್ಯಾಸ್ತದ ನಂತರ ಯುದ್ದವನ್ನು ಮುಂದುವರಿಸಬಾರದು. ಯುದ್ಧ ಸಮಾನಸ್ಕಂಧರ ನಡುವೆಯೇ ನಡೆಯಬೇಕು. ಹಾಗೆಯೇ ಸೈನ್ಯಗಳೂ ಸಮಾನವಾಗಿರಬೇಕು. ಆನೆಗಳು ಆನೆಗಳೊಂದಿಗೆ, ಕುದುರೆಗಳು ಕುದುರೆಗಳೊಂದಿಗೆ ಹೋರಾಡಬೇಕು. ಪದಾತಿ ಸೈನ್ಯ ಪದಾತಿ ಸೈನ್ಯದ ವಿರುದ್ಧ, ರಥ ಸೈನ್ಯ - ರಥ ಸೈನ್ಯದ ವಿರುದ್ಧವೇ ಹೋರಾಡಬೇಕು. ಯಾರಾದರೂ ತಮ್ಮ ಶಸ್ತ್ರಾಸ್ತ್ರಗಳನ್ನು ಚೆಲ್ಲಿ ಬಿಟ್ಟರೆ, ಅವನ ಬಗ್ಗೆ ಕರುಣೆ ತೋರಿ ಹೋಗಲು ಬಿಟ್ಟು ಬಿಡಬೇಕೇ ಹೊರತು ಶಸ್ತ್ರ ಪ್ರಯೋಗ ಮಾಡಬಾರದು. ಈ ಎಲ್ಲ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಬೇಕಿತ್ತು.

ಭೀಷ್ಮ ತನ್ನ ಕೈಕೆಳಗಿದ್ದ ಅತಿರಥ, ಮಹಾರಥ ಮೊದಲಾದ ವೀರರನ್ನು ಸೈನಿಕರನ್ನು ಉದ್ದೇಶಿಸಿ, "ನನ್ನ ಪ್ರೀತಿಯ ವೀರಾಧಿವೀರರು ನಿಮಗೆಲ್ಲ ಗೊತ್ತಿರಬಹುದು. ಈ ಯುದ್ಧ ಹಿಂದೆಂದೂ ಕಾಣದಷ್ಟು ಭಯಂಕರ ಯುದ್ಧವಾಗಿದೆ. ನಿಮ್ಮೆಲ್ಲ ಶಕ್ತಿ ಸಾಮರ್ಥ್ಯಗಳಿಂದ ಹೋರಾಡಿ ಜಯವನ್ನು ಗಳಿಸಿ. ಮಾಡು ಅಥವಾ ಮಡಿ ಎಂಬುದೇ ನಿಮ್ಮ ಮಂತ್ರವಾಗಿರಲಿ. ಸತ್ತರೆ ಸ್ವರ್ಗ, ಉಳಿದರೆ ರಾಜ್ಯ ಮತ್ತು ಕೀರ್ತಿ, ನಿಜವಾದ ಕ್ಷತ್ರಿಯನಂತೆ,

ಯುದ್ಧಕ್ಕೆ ಬೆನ್ನು ಕೊಟ್ಟು ಓಡಬೇಡಿ. ವೀರಾಧಿವೀರರೇ ಹೋರಾಡಿ ಜಯವನ್ನು ಕೀರ್ತಿಯನ್ನು ಪಡೆಯಿರಿ" ಎಂದು ಅವರಲ್ಲಿ ಉತ್ಸಾಹ, ಹುಮ್ಮಸ್ಸುಗಳನ್ನು ತುಂಬಿದ.

ಅವರಿಗೆಲ್ಲ ಸ್ಫೂರ್ತಿಯ ಮಾತುಗಳನ್ನಾಡಿ ತನ್ನ ಸೈನ್ಯವನ್ನು ಹಲವು ಭಾಗಗಳಲ್ಲಿ, ರೀತಿಗಳಲ್ಲಿ ವಿಂಗಡಿಸಿ ವ್ಯವಸ್ಥೆ ಮಾಡಿದ. ದುರ್ಯೋಧನ ಇದೆಲ್ಲವನ್ನೂ ನೋಡಿ ಸಂತೋಷಪಟ್ಟ. ಸೇನಾನಾಯಕರ, ಸೇನಾಪತಿಗಳ ದಕ್ಷತೆ, ಸೈನ್ಯ ವ್ಯವಸ್ಥೆ, ಅವರಲ್ಲಿನ ಶಿಸ್ತು ನೋಡಿದ ಮೇಲೆ ತಾನು ಇನ್ನೇನು ಗೆದ್ದೆಬಿಟ್ಟೆ ಎಂಬಂತೆ ಬೀಗಿದ. ಇನ್ನು ಯಾವುದಕ್ಕೂ ಹೆದರಬೇಕಿಲ್ಲವೆಂದು ಭರವಸೆ ತಳೆದ.

ಯುಧಿಷ್ಠಿರನೂ ತನ್ನ ಸೈನ್ಯಕ್ಕೆ ನಿರ್ದಿಷ್ಟ ಸ್ಥಾನಗಳನ್ನು ಗುರುತಿಸಿದ. ಅರ್ಜುನನಿಗೆ ಎಚ್ಚರಿಕೆಯೊಂದಿಗೆ ಆದೇಶ ನೀಡಿದ. "ನಾವು ಕೌರವರನ್ನು ಹಾಗೂ ಕೌರವ ಸೈನ್ಯವನ್ನು ಕಡೆಗಣಿಸುವ ಹಾಗಿಲ್ಲ. ಮೊದಲೇ ಅವರದು ಬಹುದೊಡ್ಡ ಸೈನ್ಯ. ಅದರ ಮುಂದೆ ನಮ್ಮ ಸೈನ್ಯ ಲೆಕ್ಕಕ್ಕೇ ಇಲ್ಲ. ಆದ್ದರಿಂದ ನಮಗಿರುವ ಸೈನ್ಯದ ಕೊರತೆಯನ್ನು ನಮ್ಮ ಯುದ್ಧ ತಂತ್ರಗಳಿಂದ ನಿವಾರಿಸಿಕೊಳ್ಳಬೇಕು" ಎಂದು ತಿಳಿಸಿ ಹೇಳಿದ.

ಅರ್ಜುನ, ಶತ್ರು ಸೈನ್ಯದಲ್ಲಿ ಭೀಷ್ಮ, ದ್ರೋಣ ಮೊದಲಾದವರು ಮತ್ತು ಅವರಷ್ಟೇ ಪರಾಕ್ರಮಿಗಳಾದವರೂ ತಮ್ಮ ಸೈನ್ಯದಲ್ಲಿಯೂ ಪರಸ್ಪರ ಕೊಲೆಗಾಗಿ ಸಿದ್ಧವಾಗಿ ನಿಂತಿರುವುದನ್ನು ನೋಡಿದ. ಅವನಿಗೆ ದುಃಖವಾಯಿತು. ಹಿರಿಯರಾದ, ಗುರುಗಳಾದ ಭೀಷ್ಮ ದ್ರೋಣಾದಿಗಳನ್ನು ಹೇಗೆ ತಾನೇ ಕೊಲ್ಲುವುದು? ತನ್ನಿಂದ ಇದು ಸಾಧ್ಯವಿಲ್ಲ ಎನಿಸಿತು. ಅವನನ್ನು ಪಾಪಪ್ರಜ್ಞೆ ಕಾಡಿತು. ಯುದ್ಧ ಮಾಡುವುದೇ ಬೇಡವೆನಿಸಿತು. ಕಣ್ಣು ತುಂಬಿ ಬಂತು. ಸಾರಥಿಯಾಗಿ ಅರ್ಜುನನ ಜೊತೆಗಿದ್ದ ಕೃಷ್ಣ ಅರ್ಜುನನ ಮನಸ್ಸನ್ನು ಗ್ರಹಿಸಿದ. ಅವನು ಉದ್ವಿಗ್ನನಾಗಿದ್ದ.

ಅರ್ಜುನನಿದ್ದ ಈ ಸ್ಥಿತಿಯಲ್ಲಿ ಅವನಿಗೆ ಬೋಧೆಯಾಗಬೇಕು. ಅದರಿಂದ ಅವನ ಉದ್ವಿಗ್ನತೆ ಕಳೆದು, ಮನಸ್ಸು ಶಾಂತವಾಗಬೇಕು. ತಾನೇ ಏನಾದರೂ ಮಾಡಿ ಅವನನ್ನು ಯುದ್ಧಕ್ಕೆ ಅಣಿಗೊಳಿಸಬೇಕು ಎಂದು ಕೃಷ್ಣ

ಅರ್ಜುನನಿಗೆ, "ಅರ್ಜುನ ನಿನ್ನಂಥ ಕ್ಷತ್ರಿಯ ವೀರ ಯುದ್ಧ ಮಾಡುವುದನ್ನು ತ್ಯಜಿಸುವುದು ಯೋಗ್ಯವಲ್ಲ. ಹೀಗೆ ಹೇಡಿಯಂತೆ ವರ್ತಿಸುವುದು ಉಚಿತವಲ್ಲ. ನಿನ್ನ ಮನಸ್ಸಿನ ದೌರ್ಬಲ್ಯವನ್ನು ಬಿಟ್ಟು ಬಿಡು. ಯುದ್ಧಕ್ಕೆ ಸಿದ್ಧವಾಗು" ಎಂದು ಮನವೊಲಿಸುವಂತೆ ಹೇಳಿದ.

"ಕೃಷ್ಣ, ಅಜ್ಜನಾದ ಭೀಷ್ಮ, ಗುರುಗಳಾದ ದ್ರೋಣಾಚಾರ್ಯ, ಬಂಧು ಬಾಂಧವರು, ಸ್ನೇಹಿತರು ಹಿರಿಯರು ಇವರ ವಿರುದ್ಧವಾಗಿ ಯುದ್ಧ ಮಾಡುವುದಾದರೂ ಹೇಗೆ? ರಾಜ್ಯದ ಮೋಹವನ್ನು ಬಿಟ್ಟು ಬಿಡುವೆನೇ ಹೊರತಾಗಿ ನನ್ನವರ ರಕ್ತ ಚೆಲ್ಲುವುದನ್ನು ನಾನು ಇಷ್ಟ ಪಡುವುದಿಲ್ಲ. ನನಗೆ ಏನು ಮಾಡಬೇಕೆಂದೇ ತೋಚುತ್ತಿಲ್ಲ. ನೀನೇ ನನಗೆ ದಾರಿ ತೋರಿಸಬೇಕು. ಇಂತಹ ಸಂಕಷ್ಟದ ಸನ್ನಿವೇಶದಲ್ಲಿ ಮಿತ್ರನೂ ಗುರುವೂ ದೇವರೂ ಎಲ್ಲವೂ ನೀನೇ ಆಗಿರುವೆ" ಎಂದು ರಥದಿಂದ ಇಳಿದು ಬಿಟ್ಟ. ಕೃಷ್ಣನೂ ಇಳಿದ.

ಕೃಷ್ಣ ಅವನಿಗೆ ಸಮಾಧಾನ ಹೇಳಿದ. ಅವನಿಗೆ ಹುಟ್ಟು ಸಾವುಗಳ ಬಗ್ಗೆ ಆತ್ಮಬೋಧೆ ಮಾಡಿಸಲು ಯೋಚಿಸಿದ. "ಅರ್ಜುನ ಯುದ್ಧ



ಮಾಡುವುದನ್ನು ಬಿಟ್ಟ ಮಾತ್ರಕ್ಕೆ ಅವರೆಲ್ಲರೂ ಶಾಶ್ವತವಾಗಿ ಬದುಕಿ ಉಳಿಯುತ್ತಾರೆಂದು ಭಾವಿಸಬೇಡ. ಪ್ರತಿಯೊಂದು ಜೀವಿಗೂ ಹುಟ್ಟು ಸಾವುಗಳು ಪೂರ್ವ ನಿರ್ಧರಿತವಾಗಿರುತ್ತವೆ. ಆದ್ದರಿಂದ ಅವರ ಸಾವಿಗೆ ನೀನು ಕಾರಣವಾಗುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಯುದ್ಧ ಮಾಡುವುದೇ ನಿನ್ನ ಕರ್ತವ್ಯ. ಇದನ್ನು ಮರೆತು ಯುದ್ಧ ಮಾಡದೆ ಹಿಂದುಳಿದರೆ ಹೇಡಿಯೆಂಬ ಹೆಸರು ಶಾಶ್ವತವಾಗಿ ನಿನಗೆ ಅಂಟಿಕೊಳ್ಳುತ್ತದೆ. ಇದಕ್ಕೆ ನಿನ್ನ ಒಪ್ಪಿಗೆಯೇ?... ಸುಮ್ಮನೆ ನಿನ್ನ ಕರ್ತವ್ಯವನ್ನು ನಿರ್ವಹಿಸು. ಉಳಿದದ್ದೆಲ್ಲವನ್ನೂ ಮರೆತು ಬಿಡು. ಪರಿಣಾಮಗಳ ಬಗ್ಗೆ ಚಿಂತಿಸಬೇಡ" ಎಂದು ಸಮಾಧಾನ ಪಡಿಸಲು ಮುಂದಾದ.

ಅರ್ಜುನ ಕೃಷ್ಣನಿಗೆ ಅನೇಕ ಪ್ರಶ್ನೆಗಳನ್ನು ಹಾಕಿದ. ಅವನು ಹುಟ್ಟು, ಸಾವು, ಆತ್ಮ, ಕರ್ತವ್ಯ ಇವುಗಳಿಗೆ ಸಂಬಂಧಿಸಿದಂತೆ ಇನ್ನೂ ಹೆಚ್ಚಿನ ವಿವರಗಳನ್ನು ತಿಳಿಯಬಯಸಿದ.

ಕೃಷ್ಣ ಅರ್ಜುನನಿಗೆ ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ ಮತ್ತು ರಾಜಯೋಗವೆಂಬ ನಾಲ್ಕು ಯೋಗಗಳ ಸ್ವರೂಪವನ್ನು ವಿವರಿಸಿದ. ಅರ್ಜುನನನ್ನು ಕರ್ಮಯೋಗಿ ಎಂದು ಕರೆದು, ಕರ್ಮ, ಕರ್ತವ್ಯ ಮಾಡುವುದೊಂದೇ ಕರ್ಮಯೋಗಿಯ ಲಕ್ಷಣವೆಂದು ತಿಳಿಸಿದ. ನಿಸ್ವಾರ್ಥ ಕರ್ಮವೇ ನಿಜವಾದ ಕರ್ಮ. ಹೀಗೆ ನಿಸ್ವಾರ್ಥತೆಯಿಂದ ಮಾಡಿದ ಕರ್ಮ ಪರಿಪೂರ್ಣತೆಯನ್ನು ತಲುಪುತ್ತದೆ. ಅಂತಹ ಪರಿಪೂರ್ಣ ಕರ್ಮ ಯೋಗಕ್ಕೆ ಸಮಾನ ಅಥವಾ ಅದೇ ಯೋಗವೆಂದಾಗುತ್ತದೆ.

ನಿಷ್ಕಾಮ ಕರ್ಮ ಸತ್ಯದ ಹಾದಿಗೆ ಕೊಂಡೊಯ್ಯುತ್ತದೆ. ಮೋಕ್ಷ ಅಥವಾ ಬಿಡುಗಡೆ ಈ ಭೌತಿಕ ಪ್ರಪಂಚದ ಬಗ್ಗೆ ಆಸೆ ಬಿಡಬೇಕು. ಇಂದ್ರಿಯಗಳನ್ನು ಅಂಕೆಯಲ್ಲಿ ಇಟ್ಟುಕೊಳ್ಳಬೇಕು. ಭಕ್ತಿ ಯೋಗದ ಮೂಲಕವೂ ಮೋಕ್ಷ ಸಾಧ್ಯವಿದೆ. ನಿರ್ಮಲ ಮನಸ್ಸಿನಿಂದ ಒಂದು ಹನಿ ನೀರು ಒಂದು ಹೂವು, ಒಂದು ಹಣ್ಣು ಭಗವಂತನಿಗೆ ಅರ್ಪಿಸಿದರೂ ಅವನು ಸ್ವೀಕರಿಸುತ್ತಾನೆ. ಸಂಕ್ಷೇಪವಾಗಿ ಹೇಳಬೇಕಾದರೆ ಯೋಗ ಮನುಷ್ಯನನ್ನು ಮೋಕ್ಷಕ್ಕೆ ಅರ್ಹನನ್ನಾಗಿ ಮಾಡುತ್ತದೆ. ಭಕ್ತಿ, ಜ್ಞಾನ, ಕರ್ಮ, ಧ್ಯಾನಗಳ ಮೂಲಕ ಇದನ್ನು ಸಾಧಿಸಿಕೊಳ್ಳಬಹುದು."

ಕಡೆಯದಾಗಿ ಮಾತನ್ನು ಮುಂದುವರಿಸಿ, "ಅರ್ಜುನ ನಾನು ಅವತಾರಿ. ಹಿಂಸೆ, ದೌರ್ಜನ್ಯ ಅನ್ಯಾಯಗಳು ಹೆಚ್ಚಾದಾಗ ನಾನು ಅವತರಿಸಿ ಅವುಗಳನ್ನು ಮೆಟ್ಟುತ್ತೇನೆ. ನ್ಯಾಯ, ಧರ್ಮಗಳನ್ನು ಎತ್ತಿ ಹಿಡಿಯುತ್ತೇನೆ. ಧರ್ಮಿಷ್ಠರನ್ನು, ಸದ್ಗುಣಿಗಳನ್ನು, ಸಾಧು ಸಜ್ಜನರನ್ನು ರಕ್ಷಿಸಿ, ದುಷ್ಟರ ದಮನ ಮಾಡುತ್ತೇನೆ. ನಾನೇ ಶಕ್ತಿ, ನಾನೇ ವಿಧಿ, ಜಗತ್ತಿನ ಚರಾಚರದ ಸೃಷ್ಟಿಕರ್ತನೂ ನಾನೇ; ನಾಶ ಮಾಡುವವನೂ ನಾನೇ. ಎಲ್ಲವೂ ನನ್ನಿಚ್ಛೆಯಿಂದಲೇ ನಡೆಯುತ್ತದೆ. ಆದ್ದರಿಂದ ಈ ಯುದ್ಧದಲ್ಲಿನ ಸಾವು ನೋವುಗಳಿಗೆ ನೀನೆಂದೂ ಕಾರಣನಾಗಲಾರೆ. ಕೇವಲ ನೀನೊಂದು ಸಾಧನ; ಉಪಕರಣ. ಬಳಸುವವನು ನಾನು. ಜಗತ್ತಿನ ಸೂತ್ರಗಳೆಲ್ಲವೂ ನನ್ನ ಕೈಯಲ್ಲಿದೆ. ನನ್ನಿಷ್ಟದಂತೆ ನಾನು ಆಡಿಸುತ್ತಿದ್ದೇನೆ.

"ಆತ್ಮ ಅಮರ, ದೇಹದಲ್ಲಿ ಅದರ ವಾಸ. ಆದರೆ ಅದರ ವಾಸಸ್ಥಾನವಾದ ದೇಹ ಮಾತ್ರ ನಶ್ವರ. ಅದನ್ನು ಸುಲಭವಾಗಿ ನಾಶ ಮಾಡಬಹುದು. ಇದಕ್ಕೆ ವಿರುದ್ಧವಾಗಿ ಆತ್ಮವನ್ನು ಏನು ಮಾಡಲೂ ಸಾಧ್ಯವಿಲ್ಲ. ಶಸ್ತ್ರಾಸ್ತ್ರಗಳಾಗಲಿ, ಬೆಂಕಿಯಾಗಲೀ, ನೀರಾಗಲಿ ಅದನ್ನು ಏನೂ ಮಾಡುವುದಿಲ್ಲ. ಅದಕ್ಕೆ ನಾಶವೆಂಬುದಿಲ್ಲ; ಸಾವೆಂಬುದಿಲ್ಲ. ಆದ್ದರಿಂದ ನೀನು ಕೊಲ್ಲುವುದು, ನಾಶ ಮಾಡುವುದು ದೇಹವನ್ನು ಮಾತ್ರವೇ. ಅಮರವಾದ ಆತ್ಮ, ನಷ್ಟಗೊಂಡ ದೇಹದಿಂದ ಹೊರಟು ಅನ್ಯ ದೇಹಗಳನ್ನು ಹುಡುಕಿ ಪ್ರವೇಶಿಸಿ ಉಳಿಯುತ್ತದೆ. ಅಸ್ತಿತ್ವವನ್ನು ಮುಂದುವರೆಸುತ್ತದೆ. ದೇಹವೆಂಬುದು ಕೇವಲ ಬಳಸಿ ಎಸೆಯಬಹುದಾದ ಬಟ್ಟೆಯಂತೆ. ಆತ್ಮ ಈ ಕೊಳಕು ಬಟ್ಟೆಗಳನ್ನು ಎಸೆದು ಹೊಸ ಬಟ್ಟೆಗಳನ್ನು ತೊಡುತ್ತದೆ."

ಇಷ್ಟೇ ಅಲ್ಲದೆ ಇನ್ನೂ ಅನೇಕ ಸೂಕ್ಷ್ಮಗಳನ್ನು ವಿವರಿಸಿದ. ಆಧ್ಯಾತ್ಮವನ್ನು ಬೋಧಿಸಿದ. ಇಂದ್ರಿಯಗಳ ನಿಗ್ರಹದೊಂದಿಗೆ ಜ್ಞಾನದ ಶಿಖರವನ್ನು ತಲುಪುವಂತೆ ಬೋಧಿಸಿದ.

ಅಷ್ಟು ಹೊತ್ತಿಗೆ ಅರ್ಜುನನ ಮನಸ್ಸು ಶಾಂತ ಸ್ಥಿತಿಗೆ ಬಂದಿತ್ತು. ನಿಜವಾದ ಜ್ಞಾನ ಪ್ರಾಪ್ತವಾಗಿತ್ತು. "ಕೃಷ್ಣ, ನಿನಗೆ ಸಂಪೂರ್ಣವಾಗಿ

ಶರಣಾಗಿದ್ದೇನೆ. ಅವರೆಲ್ಲರ ಸಾವಿಗೆ ನಾನೇ ಕಾರಣ ಎಂಬ ನಂಬಿಕೆಯ ಭ್ರಮೆಯಿಂಥ ದೂರವಾಗಿದ್ದೇನೆ. ನನ್ನ ಭಯ ದೂರವಾಗಿದೆ. ನಾನು, ನನ್ನ ಕರ್ಮಗಳು ಇನ್ನು ಮುಂದೆ ನಿನಗೇ ಸೇರಿವೆ. ನನಗೆ ಮರುಹುಟ್ಟು ಬಂದಂತಿದೆ. ಹುರುಪು, ಹುಮ್ಮಸ್ಸುಗಳು ನನ್ನಲ್ಲಿ ಬಂದಿವೆ. ನಿನ್ನನ್ನು ನಿನ್ನ ಸಮಸ್ತ ಸೃಷ್ಟಿ ಜಗತ್ತನ್ನು ನನಗೆ ನೋಡಬೇಕೆಂದಿದೆ. ನಿನ್ನ ವಿಶ್ವರೂಪವನ್ನು ನೋಡುವ ನನ್ನಾಸೆಯನ್ನು ಪೂರೈಸು" ಎಂದು ಪ್ರಾರ್ಥಿಸಿದ.

"ಅರ್ಜುನ ನನ್ನ ಆ ರೂಪವನ್ನು ಕಾಣಲು ನಿನ್ನ ಈ ಚರ್ಮ ಚಕ್ಷುಗಳು ಸಾಲವು. ಅದಕ್ಕಾಗಿ ನಿನಗೆ ದಿವ್ಯ ದೃಷ್ಟಿಯನ್ನು ನೀಡುತ್ತೇನೆ" ಎಂದು ಕೃಷ್ಣ ಅರ್ಜುನನಿಗೆ ದಿವ್ಯದೃಷ್ಟಿಯನ್ನು ನೀಡಿದ.

ಕೃಷ್ಣನ ಆ ವಿಶ್ವರೂಪದಲ್ಲಿ ಬ್ರಹ್ಮಾಂಡಗಳು, ಚರಾಚರ ವಸ್ತುಗಳು ಎಲ್ಲವೂ ಅಡಗಿದ್ದವು. ಅರ್ಜುನನ ಸಂಭ್ರಮಾಶ್ಚರ್ಯಗಳಿಗೆ ಎಲ್ಲೆ ಇಲ್ಲವಾಯಿತು.

ಈ ರೂಪದಲ್ಲಿ ಹತ್ತಾರು ತಲೆಗಳು, ಕೈಗಳು, ಅವುಗಳಲ್ಲಿ ಶಸ್ತ್ರಾಸ್ತ್ರಗಳು, ಭೂಮಿ ಆಕಾಶಗಳೇ ಕಾಣಿಸುತ್ತಿರಲಿಲ್ಲ. ಆ ರೂಪವೇ ಭೂಮ್ಯಾಕಾಶವನ್ನು ಆವರಿಸಿಬಿಟ್ಟಿತ್ತು. ಅರ್ಜುನನಿಗೆ ಪೂರ್ಣ ತೃಪ್ತಿ, ಸಮಾಧಾನಗಳು ದೊರೆತವು. ಯುದ್ಧ ಮಾಡಲು ತನ್ನನ್ನು ಸಿದ್ಧಮಾಡಿಕೊಂಡ.

ಅರ್ಜುನನಲ್ಲಿ ಆದ ಬದಲಾವಣೆಯಿಂದ, ಚಿಂತಿತರಾಗಿದ್ದ ಪಾಂಡವರು ಈಗ ನೆಮ್ಮದಿಯ ನಿಟ್ಟುಸಿರು ಬಿಟ್ಟರು.

ಯುಧಿಷ್ಠಿರ ಕೌರವ ಸೈನ್ಯ ಇದ್ದ ದಿಕ್ಕಿನತ್ತ ಹೆಜ್ಜೆ ಹಾಕಿದ. ಅವನ ಸೋದರರು ಅರ್ಥವಾಗದೆ ನೋಡುತ್ತಿದ್ದರು. ಆದರೆ ಕೃಷ್ಣ ಅವರಿಗೆ, "ನೀವೇನೂ ಹೆದರಬೇಡಿ. ಯುದ್ಧ ಆರಂಭವಾಗುವುದಕ್ಕೆ ಮೊದಲು, ಸಂಪ್ರದಾಯದಂತೆ ಹಿರಿಯರ ಆಶೀರ್ವಾದ ಪಡೆಯಲು ಹೊರಟಿದ್ದಾನೆ. ಯುದ್ಧದಲ್ಲಿ ಮುಂದೆ ಏನಾದರೂ ಅನಾಹುತ ಸಂಭವಿಸಿದರೆ, ಹೀಗೆ ಮಾಡುವುದರಿಂದ ಅವರಿಂದ ಆಶೀರ್ವಾದ ಪಡೆಯುವುದರಿಂದ ನಮಗೆ ಪಾಪಗಳು ತಟ್ಟುವುದಿಲ್ಲ" ಎಂದು ವಿವರಿಸಿದ.

ಯುಧಿಷ್ಠಿರ, ಭೀಷ್ಮ, ದ್ರೋಣ, ಕೃಪ ಮೊದಲಾದವರಿಗೆ ಗೌರವ ಸಲ್ಲಿಸಿದ. ಅವರ ಆಶೀರ್ವಾದ ಬೇಡಿದ. ಭೀಷ್ಮರಿಗೆ ವಿಶೇಷವಾಗಿ ಭಕ್ತಿ ತೋರಿಸಿ, "ಅಜ್ಜ, ಈ ಯುದ್ಧದಲ್ಲಿ ನಮಗೆ ಜಯವಾಗಲಿ ಎಂದು ಹಾರೈಸಿ" ಎಂದು ಪ್ರಾರ್ಥಿಸಿದ.

ಒಂದು ಕ್ಷಣ ಭೀಷ್ಮರು ಮೌನವಾಗಿದ್ದರು. ಏನು ಉತ್ತರಿಸಬೇಕೆಂದೇ ತಿಳಿಯಲಿಲ್ಲ. ಯುಧಿಷ್ಠಿರನ ವರ್ತನೆಗೆ ಸಂತೋಷಗೊಂಡಿದ್ದರು. ಇಂತಹ ಭಯಂಕರ ಸನ್ನಿವೇಶದಲ್ಲೂ ಗುರುಹಿರಿಯರನ್ನು ಮರೆಯಲಿಲ್ಲವಲ್ಲ ಎಂದು ಹಿಗ್ಗಿದರು.

"ಯುಧಿಷ್ಠಿರ, ಮಗು. ಹೃದಯ ಪೂರ್ವಕವಾಗಿ ನಿಮಗೆ ಜಯವಾಗಲೆಂದು ಹಾರೈಸುತ್ತೇನೆ. ಧರ್ಮ ನಿಮ್ಮ ಕಡೆಗಿದೆ. ಆದ್ದರಿಂದ ಸೋಲಿನ ಭಯವಿಲ್ಲ. ಕೌರವರ ಕಡೆಯಿಂದ ಯುದ್ಧ ಮಾಡುತ್ತಿರುವುದು ಅನ್ನದ ಋಣಕ್ಕಾಗಿ. ನಾನು ಮಾಡುತ್ತಿರುವುದು ಸರಿಯಲ್ಲವೆನಿಸಿದರೂ ಉಪಕಾರಕ್ಕೆ ಪ್ರತ್ಯುಪಕಾರ ಮಾಡಲೇಬೇಕಾಗಿರುವುದರಿಂದ ದುರ್ಯೋಧನನ ಕಡೆಗಿದ್ದೇನೆ" ಎಂದರು.

"ಅಜ್ಜ, ನಮಗೆ ಜಯವಾಗಲೆಂದೇನೋ ಹಾರೈಸಿದಿರಿ. ಆದರೆ ಕೌರವರ ಕಡೆ ನೀವು ಜೀವಂತವಾಗಿ ಇರುವವರೆಗೂ, ನಿಮ್ಮೆದುರು ನಿಲ್ಲುವುದಾಗಲೀ, ಜಯಗಳಿಸುವುದಾಗಲೀ ಸಾಧ್ಯವಿಲ್ಲ. ಹೀಗಿರುವಾಗ ನಿಮ್ಮ ಆಶೀರ್ವಾದ ನಿಜವಾಗುವುದು ಹೇಗೆ?" ಎಂದು ಪ್ರಶ್ನಿಸಿದ.

ಭೀಷ್ಮರಿಗೆ ಯೋಚನೆಯಾಯಿತು. ಯುಧಿಷ್ಠಿರನ ಪ್ರಶ್ನೆ ಸರಿಯಾಗಿತ್ತು. ಅವರೇ ಒಂದು ಉಪಾಯವನ್ನು ಸೂಚಿಸಿದರು. "ಯುಧಿಷ್ಠಿರ, ನಿನ್ನ ಸೈನ್ಯದ ಮುಂದೆ ಶಿಖಂಡಿಯನ್ನು ನಿಲ್ಲಿಸು. ನಪುಂಸಕರ ಜೊತೆ ನಾನು ಯುದ್ಧ ಮಾಡುವುದಿಲ್ಲ. ಆದ್ದರಿಂದ ಶಿಖಂಡಿಯನ್ನು ನೋಡಿದ ಕೂಡಲೇ ಶಸ್ತ್ರಗಳನ್ನು ಕೆಳಗೆ ಹಾಕುತ್ತೇನೆ. ಸುಲಭವಾಗಿ, ಆಗ ನೀವು ನನ್ನನ್ನು ಕೊಲ್ಲಬಹುದು."

ದ್ರೋಣರೂ ಕೂಡಾ ತಮ್ಮನ್ನು ಗೆಲ್ಲಲು ಒಂದು ಉಪಾಯವನ್ನು ಹೇಳಿದರು. ತಮ್ಮನ್ನು ಅಧೀರಗೊಳಿಸುವ ಯಾವುದಾದರೂ ಸುದ್ದಿ ಕಿವಿ ಮುಟ್ಟಿದರೆ ತಾನು ಶಸ್ತ್ರಗಳನ್ನು ಬಿಟ್ಟು ಬಿಡುವುದಾಗಿ, ಆಗ ಸುಲಭವಾಗಿ

ಗೆಲ್ಲಬಹುದು ಎಂದು ತಿಳಿಸಿದರು. ಯುಧಿಷ್ಠಿರ ಅವರ ಆಶೀರ್ವಾದ ಪಡೆದು ಹಿಂತಿರುಗಿದ. ರಣ ಕಹಳೆಗಳು ಮೊಳಗಿದವು. ಯುದ್ಧ ಕೋಲಾಹಲ ಆ ರಣಭೂಮಿಯನ್ನು ಆವರಿಸಿತು.

ಧೃತರಾಷ್ಟ್ರ ಯುದ್ಧದ ಆಗು ಹೋಗುಗಳನ್ನು ತಿಳಿದುಕೊಳ್ಳಲು ಉತ್ಸುಕನಾಗಿದ್ದ. ಅವನಿಗಂತೂ ಸ್ವತಃ ನೋಡಲು ಕಣ್ಣಿಲ್ಲವಾದರಿಂದ ಸಂಜಯ ಅವನ ಜೊತೆಯಲ್ಲಿ ಉಳಿದ. ಕ್ಷಣ ಕ್ಷಣದ ಯುದ್ಧದ ವಿವರಗಳನ್ನು ತಿಳಿಸುತ್ತಿದ್ದ. ಯಾರು ಯಾರೊಂದಿಗೆ ಯುದ್ಧ ಮಾಡುತ್ತಿದ್ದಾರೆ. ಯಾರು ಸೋತರು; ಯಾರು ಗೆದ್ದರು; ಯಾರು ಸತ್ತರು ಹೀಗೆ ಪ್ರತಿಯೊಂದನ್ನೂ ವಿವರಿಸಿ ಹೇಳುತ್ತಿದ್ದ. ಇದನ್ನೆಲ್ಲ ಕೇಳಿಸಿಕೊಂಡ ಧೃತರಾಷ್ಟ್ರ ಸಂತೋಷವನ್ನೋ, ಸಂತಾಪವನ್ನೋ ವ್ಯಕ್ತಪಡಿಸುತ್ತಿದ್ದ.



# ಯುದ್ಧದ ಮೊದಲ ದಿನ

ಮೊದಲ ದಿನದ ಯುದ್ಧದಲ್ಲಿ ಪಾಂಡವ ಸೈನ್ಯ ಭೀಮನ ನಾಯಕತ್ವದಲ್ಲಿ ಹೋರಾಡಿತು. ತಮ್ಮೆಲ್ಲ ಶಕ್ತಿಯನ್ನು ಉಪಯೋಗಿಸಿ ಶತ್ರು ಸೈನ್ಯದ ಮೇಲೆ ಆಕ್ರಮಣ ಮಾಡಿತು. ಅದೇ ಸಮಯದಲ್ಲಿ ಭೀಷ್ಮರು ಕೌರವ ಸೈನ್ಯದ ಮುಂಚೂಣಿಯಲ್ಲಿದ್ದರು. ನಿರ್ದಾಕ್ಷಿಣ್ಯವಾಗಿ ಪಾಂಡವ ಸೈನಿಕರನ್ನು ಕೊಂದು ಹಾಕುತ್ತಿದ್ದರು. ಪಾಂಡವರ ಕಡೆ ಅಪಾರ ನಷ್ಟ ಸಂಭವಿಸಿತು.

ಅರ್ಜುನನ ಮಗ ಅಭಿಮನ್ಯು ರಣರಂಗ ಪ್ರವೇಶಿಸಿ ಭೀಷ್ಮರನ್ನು ಎದುರಿಸಿದ. ಬಹಳ ಪರಾಕ್ರಮದಿಂದ ಹೋರಾಡಿ ಶಲ್ಯ, ಕೃತವರ್ಮ, ಕೃಪ, ಭೀಷ್ಮರನ್ನೂ ಸೇರಿದಂತೆ ಎಲ್ಲರನ್ನು ಗಾಯಗೊಳಿಸಿದ. ಆ ಎಳೆಯ ಅಭಿಮನ್ಯುವನ್ನು ಅವರು ಶತ್ರುಗಳಾದರೂ, ಮುಕ್ತವಾಗಿ ಹೊಗಳಿದರು. "ಯೋಗ್ಯನಾದ ತಂದೆಗೆ ಯೋಗ್ಯನಾದ ಪುತ್ರ" ಎಂದರು.

ಅಭಿಮನ್ಯು ಭಯಂಕರವಾಗಿ ಯುದ್ಧ ಮಾಡಿದ. ಕೌರವ ಸೈನ್ಯ ದುರ್ಬಲವಾಯಿತು. ಅಭಿಮನ್ಯುವನ್ನು ಸೋಲಿಸಬೇಕಾದರೆ ಎಲ್ಲರೂ ಒಟ್ಟಿಗೆ ಆಕ್ರಮಣ ಮಾಡಬೇಕಾಯಿತು. ಆದರೂ ಅವನನ್ನು ಅವರಿಂದ ಗೆಲ್ಲಲಾಗಲಿಲ್ಲ. ಈಗ ಪಾಂಡವರೆಲ್ಲ ಒಟ್ಟಾಗಿ ಭೀಷ್ಮರ ಮೇಲೆ ಬಿದ್ದರು. ಇದನ್ನು ನೋಡಿದ ದುರ್ಯೋಧನ, ವೀರಾಧಿವೀರರನ್ನು ಭೀಷ್ಮರ ಸಹಾಯಕ್ಕೆ ಕಳಿಸಿದ. ಪರಿಣಾಮವಾಗಿ ಭೀಷ್ಮರ ಕೈ ಮೇಲಾಯಿತು. ಸಾವಿರಾರು ಮಂದಿ ಪಾಂಡವರ ಸೈನಿಕರು ಪ್ರಾಣ ಕಳೆದುಕೊಂಡರು. ವಿರಾಟನ ಮಗ ಶ್ವೇತನೂ ಇದೇ ಸಂದರ್ಭದಲ್ಲಿ ಕೊಲೆಯಾದ, ಅವನು ಒಂದು ಅಕ್ಷೌಹಿಣಿಯನ್ನು ನಡೆಸುತ್ತಿದ್ದ. ಭೀಷ್ಮರ ಬಾಣಗಳಿಗೆ ತುತ್ತಾದ. ಇದರಿಂದ ಪಾಂಡವರಿಗೆ ದುಃಖವಾಯಿತು. ಶ್ವೇತನನ್ನು ಕಳೆದುಕೊಂಡದ್ದರ ಜೊತೆಗೆ, ಪಾಂಡವರು ಭಾರಿ ನಷ್ಟವನ್ನು ಅನುಭವಿಸಿದರು. ಕೌರವರ

ಸೈನ್ಯದಲ್ಲಿ ಉತ್ಸಾಹ ಹೆಚ್ಚಿತು. ಸಂಭ್ರಮದ ಕಹಳೆಯ ಸದ್ದು ಎಲ್ಲೆಡೆ ಮೊಳಗಿತು.

ಪಾಂಡವರು ಕೃಷ್ಣನನ್ನು ಭೇಟಿಯಾದರು. ಎಲ್ಲ ವಿಷಯಗಳನ್ನು ಚರ್ಚಿಸಿದರು. ಅವರೆಲ್ಲರಿಗೂ ಬಹಳ ಬೇಸರವಾಗಿತ್ತು. ಮುಂದೇನು ಮಾಡಬೇಕೆಂದು ಸಲಹೆ ಕೇಳಿದರು. ಕೃಷ್ಣ ಅವರಿಗೆ ಸಮಾಧಾನ ಹೇಳಿದ; ಧೈರ್ಯ ತುಂಬಿದ. ಸಾತ್ಯಕಿ, ವಿರಾಟ, ದೃಷ್ಟದ್ಯುಮ್ನ, ಅಲ್ಲದೆ ತಾನೂ ಅವರ ಕಡೆ ಇರುವಾಗ ಭಯಕ್ಕೆ ಅವಕಾಶವಿಲ್ಲ. ಆದ್ದರಿಂದ ಹತಾಶೆ, ನಿರಾಶೆಗಳಿಗೆ ಅವಕಾಶ ಕೊಡಬೇಡಿರೆಂದ. ಅದೇ ಸಂದರ್ಭದಲ್ಲಿ ಶಿಖಂಡಿಯ ವಿಷಯವನ್ನು ನೆನಪಿಸಿದ.

ಯುಧಿಷ್ಠಿರನಿಗೆ ಕೃಷ್ಣನ ಮಾತುಗಳನ್ನು ಕೇಳಿದ ಮೇಲೆ ಮನಸ್ಸಿಗೆ ಸ್ವಲ್ಪ ನೆಮ್ಮದಿ ಎನಿಸಿತು.

**ಯುದ್ಧದ ಎರಡನೇ ದಿನ**

ಪಾಂಡವರ ಸೋಲು, ನಷ್ಟಗಳು, ಅವರನ್ನು ಮತ್ತಷ್ಟು ಜಾಗರೂಕತೆಯಿಂದಿರಲು ಪ್ರೇರಣೆಯಾಯಿತು. ಈ ಬಾರಿ ಶತ್ರುಸೈನ್ಯ ಪ್ರವೇಶ ಮಾಡಲು ಸಾಧ್ಯವಾಗದಂತಹ ವ್ಯೂಹವನ್ನು ರಚಿಸಬೇಕೆಂದುಕೊಂಡರು. ಸೇನೆಯನ್ನು ವಜ್ರವ್ಯೂಹವಾಗಿ ರಚಿಸಿದರು.

ಭೀಷ್ಮರು ಈ ದಿನವೂ ಭಯಂಕರವಾಗಿ ಆಕ್ರಮಣ ಮಾಡಿದರು. ವಜ್ರವ್ಯೂಹವನ್ನೂ ಛಿದ್ರಗೊಳಿಸಿ ಅಸಂಖ್ಯ ಮಂದಿ ಸೈನಿಕರನ್ನು ಯಮಪುರಿಗೆ ಕಳಿಸಿದರು.

ಅರ್ಜುನ ತಮ್ಮ ಕಡೆಯ ಸೈನ್ಯದ ದೌರ್ಬಲ್ಯವನ್ನು, ಸಾವನ್ನು ಗಮನಿಸಿದ. ಭೀಷ್ಮರನ್ನು ಎದುರಿಸುವುದು ಸಾಧ್ಯವೇ ಆಗಲಿಲ್ಲ. ಕೃಷ್ಣನನ್ನು ತನ್ನ ಸಾರಥಿಯಾಗೆಂದು ಕೇಳಿಕೊಂಡ.

ಅರ್ಜುನನ ರಥ ವೇಗವಾಗಿ ಭೀಷ್ಮರಿದ್ದ ಕಡೆಗೆ ಓಡಿತು. ಭೀಷ್ಮರು ಇದ್ದಲ್ಲಿಂದಲೇ ರಥದ ಕಡೆಗೆ ಬಾಣಗಳನ್ನು ಬಿಟ್ಟರು. ಭೀಷ್ಮರು ಅರ್ಜುನನೊಡನೆ ಸೆಣಸಾಡಬೇಕಾಗಿ ಬಂದಿದೆ ಎಂಬ ವಿಷಯ ತಿಳಿದು ಮತ್ತಷ್ಟು ಸೈನ್ಯ ಸಹಾಯವನ್ನು ಕಳಿಸಿಕೊಟ್ಟ. ಇದರಿಂದ ಭೀಷ್ಮರು

ಮತ್ತಷ್ಟು ಬಿರುಸಾಗಿ ಹೋರಾಡಿದರು. ಅರ್ಜುನ ಇದಾವುದನ್ನೂ ಲೆಕ್ಕಿಸದೆ ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದ. ಅವನ ಬಿಲ್ಲಾಣ್ಮೆಯನ್ನು ಶತ್ರುಗಳೂ ಪ್ರಶಂಸಿಸಿದರು. ಕೌರವರ ಸೇನೆಯಲ್ಲಿ ಅಸಂಖ್ಯ ಮಂದಿ ಅರ್ಜುನನ ಬಾಣಗಳಿಗೆ ಪ್ರಾಣ ಕಳೆದುಕೊಂಡರು. ನಂತರ ನೇರವಾಗಿ ಭೀಷ್ಮರಿಗೆ ಅಭಿಮುಖಿಯಾಗಿ ನಡೆದ. ಭೀಷ್ಮಾರ್ಜುನರು ಯುದ್ಧ ಮಾಡುವುದನ್ನು ನೋಡಿದರೆ ಯಾರಾದರೂ ಭಯಭೀತರಾಗುತ್ತಿದ್ದರು. ಭೀಷ್ಮರೂ ಅರ್ಜುನನ ಬಾಣಗಳಿಗೆ ತಮ್ಮ ಬಾಣಗಳಿಂದ ಉತ್ತರಿಸುತ್ತಿದ್ದರು. ಒಂದು ಬಾಣ ನೇರವಾಗಿ ಬಂದು ಕೃಷ್ಣನ ಎದೆಗೆ ಚುಚ್ಚಿ ರಕ್ತ ಧಾರಾಕಾರವಾಗಿ ಸುರಿಯಿತು. ಅರ್ಜುನನ ಸಿಟ್ಟು ನೆತ್ತಿಗೇರಿತು. ಭೀಷ್ಮರನ್ನು ಬೆನ್ನಟ್ಟಿ ಹೋದ. ಅವರಿಬ್ಬರೂ ಸ್ವಲ್ಪ ಹೊತ್ತು ಮರೆಯಾದರು.

ಕುರುಕ್ಷೇತ್ರದ ಮತ್ತೊಂದು ಕಡೆಯಲ್ಲಿ ದ್ರೋಣ, ದೃಷ್ಟದ್ಯುಮ್ನರು ಯುದ್ಧ ಮಾಡುತ್ತಿದ್ದರು. ಅವರಿಬ್ಬರೂ ಮೊದಲಿನಿಂಥಲೂ ಬದ್ಧ ಶತ್ರುಗಳಾಗಿದ್ದರು. ಒಬ್ಬರ ಮೇಲೆ ಒಬ್ಬರು ಸೇಡು ತೀರಿಸಿಕೊಳ್ಳುವುದಕ್ಕಾಗಿ ಕಾಯುತ್ತಿದ್ದರು. ಬಾಣಗಳು ನಿರಂತರವಾಗಿ ಎರಡೂ ದಿಕ್ಕುಗಳಿಂದ ಧಾವಿಸಿ ಬಂದು ಭಯಂಕರವಾಗಿ ಢಿಕ್ಕಿ ಹೊಡೆಯುತ್ತಿದ್ದವು. ದೃಷ್ಟದ್ಯುಮ್ನನ ಸಾರಥಿ ದ್ರೋಣರ ಬಾಣಗಳಿಂದ ಸಾವನ್ನಪ್ಪಿದ. ಇದನ್ನು ನೋಡಿ ಕ್ರೋಧಗೊಂಡ ದೃಷ್ಟದ್ಯುಮ್ನ ಗದೆಯನ್ನು ಹಿಡಿದು ದ್ರೋಣರ ಕಡೆಗೆ ಹೋಗುತ್ತಿದ್ದಂತೆಯೇ ಗದೆ ದ್ರೋಣರ ಬಾಣದಿಂದ ಮುರಿದು ಬಿತ್ತು. ಇದರಿಂದ ಪಾಂಚಾಲ ರಾಜನಿಗೆ ಎಲ್ಲಿಲ್ಲದ ಆಕ್ರೋಶವುಂಟಾಯಿತು. ಕತ್ತಿಯನ್ನು ಹಿಡಿದು ದ್ರೋಣರ ಮೇಲೆ ಬಿದ್ದ. ಈಗಲೂ ಸೋಲನ್ನು ಅನುಭವಿಸಿದ. ಇವನ ಅಸಹಾಯಕತೆಯನ್ನು ನೋಡಿದ ಭೀಮ ಅವನ ಸಹಾಯಕ್ಕೆ ಓಡಿ ಬಂದು, ದೃಷ್ಟದ್ಯುಮ್ನನನ್ನು ಅನಾಮತ್ತಾಗಿ ರಥದಲ್ಲಿ ಇರಿಸಿಕೊಂಡು ಓಡಿದ. ದುರ್ಯೋಧನ ಭೀಮ ಪಾಂಚಾಲ ರಾಜನೊಂದಿಗೆ ಓಡುತ್ತಿದ್ದುದನ್ನು ಗಮನಿಸಿದ. ಅವನನ್ನು ಆಕ್ರಮಿಸಲು ಕಳಿಂಗನನ್ನು ಕಳಿಸಿದ. ಆದರೆ ಭೀಮ ಪರಾಕ್ರಮದಿಂದ ಅವನನ್ನು ಎದುರಿಸಿದ.

ಅಪಾರ ಸಂಖ್ಯೆಯ ಸೈನಿಕರು ಸಾಯುತ್ತಿರುವುದನ್ನು ನೋಡಿದ ಭೀಷ್ಮರು ಸಹಾಯಕ್ಕೆ ಬಂದರು. ಕಳಿಂಗನ ರಕ್ಷಣೆಗೆ ನಿಂತರು. ಅದೇ ಸಮಯಕ್ಕೆ ಸಾತ್ಯಕಿ ಭೀಷ್ಮರ ಸಾರಥಿಯನ್ನು ಗಾಯಗೊಳಿಸಿದ. ಅವನು ರಥದಿಂದ ಕೆಳಗೆ ಬೀಳುತ್ತಿದ್ದಂತೆ ಸೈನ್ಯ ದಿಕ್ಕಾಪಾಲಾಗಿ ಓಡಿತು. ಭೀಷ್ಮರ ರಥವನ್ನು ಕುದುರೆಗಳು ತಾವೇ ಹೆದರಿ ಎಲ್ಲಿಗೋ ಎಳೆದುಕೊಂಡು ಹೋದವು. ಪಾಂಡವರಿಗೆ ಇದು ಅನುಕೂಲವೇ ಆಯಿತು. ಕೌರವ ಸೈನ್ಯದ ಮೇಲೆ ಬಿದ್ದು ಸಾಕಷ್ಟು ನಷ್ಟವನ್ನುಂಟು ಮಾಡಿದರು.

ಇದರಿಂದ ಕೌರವ ಸೇನೆಯಲ್ಲಿ ಭಯ ಆತಂಕಗಳು ಕವಿದವು. ಸೇನಾನಾಯಕರು ದಿಕ್ಕು ತೋಚದಂತಾದರು. ಹಿಂದಿನ ದಿನ ತೋರಿಸಿದ ಉತ್ಸಾಹ ತಣ್ಣಗಾಗಿತ್ತು. ಅದಕ್ಕಾಗಿ ಅವರು ಆ ದಿನ ಯುದ್ಧ ಸಾಕೆಂದು ನಿಲ್ಲಿಸಿದರು.



## ಯುದ್ಧದ ಮೂರನೇ ದಿನ

ಮೂರನೇ ದಿನ ಪಾಂಡವ, ಕೌರವ ಪಕ್ಷಗಳು ಮತ್ತಷ್ಟು ಎಚ್ಚರಿಕೆ ವಹಿಸಿದರು. ಭೀಷ್ಮ ಗರುಡವ್ಯೂಹವನ್ನು ರಚಿಸಿದರು. ಶತ್ರುಗಳು ಸುಲಭವಾಗಿ ಪ್ರವೇಶಿಸಲು ಸಾಧ್ಯವಿಲ್ಲದಂತೆ ನೋಡಿಕೊಂಡರು.

ಪಾಂಡವರೂ ಕೂಡಾ ತಮ್ಮ ಸೈನ್ಯವನ್ನು ಅರ್ಧ ಚಂದ್ರಾಕಾರದಲ್ಲಿ ರಚಿಸಿದರು. ಭೀಮ, ಅರ್ಜುನರು ಈ ಅರ್ಧಚಂದ್ರಾಕಾರದ ಎರಡು ತುದಿಗಳಲ್ಲಿ ನಿಂತರು.

ಯುದ್ಧ ಆರಂಭವಾಯಿತು. ಅಗತ್ಯಕ್ಕಿರಲೆಂದು ಅರ್ಜುನ ಎಲ್ಲ ಬಗೆಯ ಶಸ್ತ್ರಾಸ್ತ್ರಗಳನ್ನು ಸಿದ್ಧ ಮಾಡಿ ಇಟ್ಟುಕೊಂಡ. ಅವನು ಪರಾಕ್ರಮದಿಂದಲೇ ಹೋರಾಡಿದ. ಕೌರವಸೈನ್ಯ ಅಭೇದ್ಯವಾಗಿ ನಿಂತಿತ್ತು. ಅರ್ಜುನನ ಕಡೆಗೇ ಅದರ ಗಮನವಿತ್ತು. ಈಟಿ, ಭರ್ಜಿಗಳು ಎರಡೂ ಕಡೆಗಳಿಂದ ಹಾರಾಡಿದವು. ಮಿಂಚಿನಂತೆ ಅವುಗಳು ಹೊಳೆದವು. ಅರ್ಜುನ ತನ್ನ ಗಾಂಡೀವದಿಂದ ಬಾಣಗಳನ್ನು ಬಿಡುತ್ತಿದ್ದ. ಒಂದಾದ ಮೇಲೊಂದರಂತೆ ಬಾಣಗಳು ಬಂದು ಒಂದು ಸರಳ ರೇಖೆಯಂತೆ ಕಾಣಿಸಿದವು.

ಇನ್ನೊಂದು ಭಾಗದಲ್ಲಿ ಸಾತ್ಯಕಿ, ಶಕುನಿಯರು ಎದುರಾದರು. ಮತ್ತೊಂದು ಕಡೆ ದ್ರೋಣ, ಯುಧಿಷ್ಠಿರರು ಹೋರಾಡುತ್ತಿದ್ದರು. ದ್ರೋಣ ಮತ್ತು ಭೀಷ್ಮ ಒಂದಾಗಿ ಯುಧಿಷ್ಠಿರನನ್ನು ಮುತ್ತಿದರು. ನಕುಲ ಸಹದೇವರು ಇದನ್ನು ನೋಡಿದ್ದೇ, ಅಣ್ಣನ ಸಹಾಯಕ್ಕೆ ಓಡಿ ಬಂದರು.

ಇದರಿಂದ ಸ್ವಲ್ಪ ದೂರದಲ್ಲಿ ಭೀಮ ಮತ್ತು ಅವನಿಗೆ ಹಿಡಂಬಿಯಿಂದ ಜನಿಸಿದ ಮಗ ಘಟೋತ್ಕಚ, ದುರ್ಯೋಧನನೊಂದಿಗೆ ಹೋರಾಡು ತ್ತಿದ್ದರು. ಭೀಮನ ಬಾಣಗಳು ದುರ್ಯೋಧನನಿಗೆ ನಾಟಿದವು. ಅವನು

ಮೂರ್ಛಿತನಾಗಿ ಬಿದ್ದ. ಅವನ ಸಾರಥಿ ಪರಿಸ್ಥಿತಿಯನ್ನು ಗಮನಿಸಿ ಅವನನ್ನು ರಥದಲ್ಲಿರಿಸಿಕೊಂಡು ತಪ್ಪಿಸಿಕೊಂಡ. ಕೌರವ ಸೇನೆ ದುರ್ಯೋಧನನಿಗೆ ಒದಗಿದ ಅಪಾಯವನ್ನು ಕಂಡು, ಧೈರ್ಯಗೆಟ್ಟರು ಸೈನ್ಯ, ಅಸ್ತವ್ಯಸ್ತ ಸ್ಥಿತಿಯಲ್ಲಿತ್ತು. ಭೀಮ ಈ ಅವಕಾಶವನ್ನು ತೆಗೆದುಕೊಂಡು ಕೌರವ ಸೈನ್ಯವನ್ನು ಛಿನ್ನ ಭಿನ್ನವಾಗಿಸಿದ. ಸೈನಿಕರ ಪ್ರಾಣ ತೆಗೆದುಕೊಂಡ. ಭರವಸೆಯನ್ನು ಕಳೆದುಕೊಂಡು ಓಡತೊಡಗಿದರು. ಭೀಷ್ಮ, ದ್ರೋಣರು ಅಸಹಾಯಕರಂತಾದರು. ಓಡುತ್ತಿದ್ದ ಸೈನಿಕರನ್ನು ಹಿಂದಕ್ಕೆ ಕರೆದರು. ಅವರಲ್ಲಿ ಉತ್ಸಾಹ, ಧೈರ್ಯನ್ನು ತುಂಬಲು ಪ್ರಯತ್ನಿಸಿದರು. ಇದರಿಂದ ಪರಿಸ್ಥಿತಿ ಸ್ವಲ್ಪ ಮಟ್ಟಿಗೆ ಸುಧಾರಿಸಿತು.

ದುರ್ಯೋಧನನಿಗೆ ಯಾಕೋ ಭೀಷ್ಮರು ಸೈನ್ಯವನ್ನು ನಿರ್ವಹಿಸಿದ ರೀತಿ ಹಿಡಿಸಲಿಲ್ಲ. ಭೀಮನಿಗೆ ಅವರು ಪಕ್ಷಪಾತಿಗಳಾಗಿದ್ದಾರೆಂದು ಬಹಿರಂಗವಾಗಿ ಆಕ್ಷೇಪಿಸಿದ. ಹಿರಿಯರಾದ ಭೀಷ್ಮರಿಗೆ ದುರ್ಯೋಧನನು ತಮ್ಮ ಬಗ್ಗೆ ಆಡಿದ ಮಾತಿಗೆ ಬೇಸರಗೊಂಡರು. ಮುಂದೆ ಹೀಗೆ ಮಾಡಿದರೆ ತಾನು ಸೇನಾಪತಿ ಪದವಿಯನ್ನೇ ಬಿಟ್ಟು ಬಿಡುತ್ತೇನೆಂದು ಹೆದರಿಸಿದರು. ಆದರೆ ಬೇರೆಯವರೆಲ್ಲ ಭೀಷ್ಮರನ್ನು ಸಮಾಧಾನ ಪಡಿಸಿದರು.

ಭೀಷ್ಮರು ಯುದ್ಧವನ್ನು ಮುಂದುವರೆಸಿದರು. ತಮ್ಮಿಂದಾದ ತಪ್ಪುಗಳನ್ನು ತಿದ್ದಿಕೊಳ್ಳುತ್ತಿದ್ದಾರೆಂಬಂತೆ ಭಯಂಕರ ಹೋರಾಟ ನಡೆಸಿದರು. ಮಿಂಚಿನಂತೆ ಓಡಾಡಿದರು. ಅವರ ವೇಗ ತೀಕ್ಷ್ಣತೆ ಯುವಕರನ್ನೂ ನಾಚಿಸುವಂತಿತ್ತು.

ತನ್ನ ಸೈನ್ಯವನ್ನು ಮುನ್ನಡೆಸುತ್ತಾ ಪಾಂಡವ ಸೈನ್ಯದ ಮೇಲೆ ಬಿದ್ದರು. ಪಾಂಡವರ ಸೈನ್ಯ ಬೆಂಕಿಗೆ ಬಿದ್ದ ಹುಳುಗಳಂತೆ ನಾಶವಾದರು. ಇದನ್ನು ಗಮನಿಸಿದ ಕೃಷ್ಣ, ಅರ್ಜುನನಿಗೆ ಭೀಷ್ಮರ ಮೇಲೆ ಬೀಳಲು ಆದೇಶಿಸಿದ. ಅರ್ಜುನ ತನ್ನೆಲ್ಲ ಸಾಮರ್ಥ್ಯವನ್ನು ಉಪಯೋಗಿಸಿದರೂ ಭೀಷ್ಮರ ಬಾಣಾಘಾತಗಳನ್ನು ಎದುರಿಸಲು ಸಾಧ್ಯವಾಗಲಿಲ್ಲ. ಇದೇ ರೀತಿ ಮುಂದುವರೆದರೆ ಪಾಂಡವರ ಸೋಲು, ಸಾವು ಖಂಡಿತ ಎನಿಸಿ ಕೃಷ್ಣನೇ ಭೀಷ್ಮರನ್ನು ಎದುರಿಸಲು ಸಿದ್ಧನಾದ. ಆಯುಧ ಹಿಡಿಯುವುದಿಲ್ಲವೆಂದು

ಪ್ರತಿಜ್ಞೆ ಮಾಡಿದ್ದರೂ, ಮೀರಿ ಕೈಲಿ ಚಕ್ರವನ್ನು ಹಿಡಿದು ವೇಗವಾಗಿ ಭೀಷ್ಮರಿದ್ದ ಕಡೆಗೆ ಓಡಿದ. ಕೃಷ್ಣ ಚಕ್ರಧಾರಿಯಾಗಿ ಬರುವುದನ್ನು ಗಮನಿಸಿದ ಭೀಷ್ಮ ಕೈಲಿದ್ದ ಬಿಲ್ಲು ಬಾಣಗಳನ್ನು ಕೆಳಗೆಸೆದು ಸಂತೋಷಾತಿರೇಕದಿಂದ ಕಂಬನಿ ಸುರಿಸುತ್ತ, "ಓ ಕೇಶವಾ, ಮಾಧವಾ ನಾನೆಷ್ಟು ಅದೃಷ್ಟವಂತ. ಸ್ವತಃ ನಿನ್ನ ಕೈಯಿಂದ ನನಗೆ ಮುಕ್ತಿ ಸಿಗುತ್ತಿರುವಾಗ ನಾನು ಬೇಡವೆನ್ನಲೇ. ಬಾ ಕೃಷ್ಣ. ಈ ಪ್ರಪಂಚದಿಂದ ನನಗೆ ಆದಷ್ಟು ಬೇಗ ಬಿಡುಗಡೆ ನೀಡು. ಮೂರು ಲೋಕಗಳಲ್ಲೂ ಇದರಿಂದ ನನ್ನ ಕೀರ್ತಿ ಹೆಚ್ಚುತ್ತದೆ" ಎಂದು ಆರ್ತನಾಗಿ ಬೇಡಿಕೊಂಡ.

ಅರ್ಜುನನ ಮನಸ್ಸಿಗೆ ಇದರಿಂದ ನೋವಾಯಿತು. ಇನ್ನು ಅವನಿಗೆ ಸುಮ್ಮನೆ ಇರಲಾಗಲಿಲ್ಲ. ರಥದಿಂದ ಧುಮುಕಿ ಕೃಷ್ಣನಿದ್ದಲ್ಲಿಗೆ ಓಡಿದ. "ಭಗವನ್, ಶಾಂತನಾಗು. ನಾನು ನನ್ನ ಅಜ್ಜ ಭೀಷ್ಮರನ್ನು ಎದುರಿಸುತ್ತೇನೆ. ಇನ್ನು ಯಾವುದೇ ಅವಕಾಶ ಸಿಕ್ಕರೂ ಬಿಡುವುದಿಲ್ಲವೆಂದು ವಚನ ಕೊಡುತ್ತೇನೆ" ಎಂದು ಪ್ರಾರ್ಥಿಸಿ ಸಮಾಧಾನ ಮಾಡಿದ.

ಕೃಷ್ಣ ಅವನ ಪ್ರಾರ್ಥನೆಗೆ ಕರಗಿದ. ಮತ್ತೆ ಇಬ್ಬರೂ ತಮ್ಮ ರಥವಿದ್ದಲ್ಲಿಗೆ ಮರಳಿದರು. ಸ್ಫೂರ್ತಿಗೊಂಡ ಅರ್ಜುನ ಮೊದಲಿಗಿಂತ ಹೆಚ್ಚು ಪರಾಕ್ರಮದಿಂದ ಭಯಂಕರವಾಗಿ ಯುದ್ಧ ಮಾಡಿದ.



## ಯುದ್ಧದ ನಾಲ್ಕನೇ ದಿನ

ಮರುದಿನ ಬೆಳಿಗ್ಗೆ ಭೀಷ್ಮರು, ದ್ರೋಣ, ದುರ್ಯೋಧನರನ್ನು ಒಳಗೊಂಡಂತೆ ದುರ್ಭೇದ್ಯವಾದ ವ್ಯೂಹವೊಂದನ್ನು ರಚಿಸಿದರು. ಅರ್ಜುನನನ್ನು ಮುತ್ತಲು ಸಮರ್ಥವಾದ ವ್ಯೂಹ ರಚನೆ ಅದಾಗಿತ್ತು. ಅಭಿಮನ್ಯುವೂ ಸೈನ್ಯದ ಮುಂಚೂಣಿಯಲ್ಲಿದ್ದ. ಅವನು ಬಹಳ ಪರಾಕ್ರಮದಿಂದಲೂ ಭಯಂಕರವಾಗಿಯೂ ಶತ್ರುಗಳನ್ನು ಸದೆ ಬಡಿಯುತ್ತಿದ್ದ. ಶಲ್ಯ, ಅಶ್ವತ್ಥಾಮ, ಚಿತ್ರಸೇನ ಮೊದಲಾದವರು ಅವನನ್ನು ಸುತ್ತುವರೆದಿದ್ದರು. ಅರ್ಜುನ ನೋಡಿದ ಕೂಡಲೇ ಮಗನ ಸಹಾಯಕ್ಕೆಂದು ಧಾವಿಸಿದ. ಘಟೋತ್ಕಚನೂ ಬಂದು ಸೇರಿದ. ಭೀಮನೂ ಬಂದು ಇವರನ್ನು ಸೇರಿಕೊಂಡ. ಎಲ್ಲರೂ ಒಟ್ಟಾದುದನ್ನು ನೋಡಿ ದುರ್ಯೋಧನ ಭೀಮನನ್ನು ಮುತ್ತಲು ಆನೆ ಸೈನ್ಯದೊಂದಿಗೆ ಬಂದ. ಭೀಮ ಹೇಗೊ ಪಾರಾದ. ಆದರೆ ಅದಕ್ಕೆ ಮೊದಲು ಸಾಕಷ್ಟು ಆನೆಗಳನ್ನು ಕೊಂದು ದಾಂಧಲೆ ಮಾಡಿದ. ಎಲ್ಲೆಲ್ಲೂ ದೊಡ್ಡ ದೊಡ್ಡ ಬೆಟ್ಟಗಳಂತೆ, ಆನೆಗಳು ಸತ್ತು ಬಿದ್ದಿದ್ದವು. ಇದನ್ನು ನೋಡಿದ ಆನೆಗಳು ಹೆದರಿಕೆಯಿಂದ ಹುಚ್ಚಾಪಟ್ಟೆ ಓಡಿದವು.

ಓಡುವ ರಭಸಕ್ಕೆ ಅವುಗಳ ಕಾಲಡಿಗೆ ಸಿಕ್ಕಿ ಭಯಭೀತರಾದ ಸೈನಿಕರು ಪ್ರಾಣ ಕಳೆದುಕೊಂಡರು. ಉಳಿದವರು ಪ್ರಾಣ ರಕ್ಷಣೆಗೆಂದು ಓಡಿದರು.

ದುರ್ಯೋಧನನಿಗೆ ಎಲ್ಲಿಲ್ಲದ ಸಿಟ್ಟು ಬಂತು. ಭೀಷ್ಮರ ಮೇಲೆ ಮತ್ತಷ್ಟು ಬೇಸರಗೊಂಡ. ನೇರವಾಗಿ ಅವರ ಬಳಿಗೆ ಹೋಗಿ, "ಅಜ್ಜ, ಭೀಮನು ಈ ದಿನ ಯುದ್ಧ ಮಾಡಿದ ರೀತಿಯನ್ನು ನೋಡಿದಿರಾ? ಎಷ್ಟೊಂದು ಸಾಹಸದಿಂದ ಎಷ್ಟು ಮಂದಿಯನ್ನು ಬಲಿ ತೆಗೆದುಕೊಂಡ!! ಇಷ್ಟೆಲ್ಲಾ

ಸಾವು, ನೋವು, ನಷ್ಟ ಸಂಭವಿಸುತ್ತಿದ್ದಾಗ ನೀವೇನು ಮಾಡುತ್ತಿದ್ದೀರಿ? ಯುದ್ಧ ಮಾಡುವುದರಲ್ಲಿ ನಿಮಗೆ ಆಸಕ್ತಿಯಿಲ್ಲ. ಆದಷ್ಟೂ ನೀವು ಪಾಂಡವರನ್ನು ತಪ್ಪಿಸುತ್ತಿದ್ದೀರಿ" ಎಂದು ಆಕ್ಷೇಪಿಸಿ ನುಡಿದ.

ದುರ್ಯೋಧನನ ಮಾತಿನ ರೀತಿ ತೀರಾ ಕೆಡುಕೆನಿಸಿತು. ದುರ್ಯೋಧನನಿಗೆ ಹೇಳಿದರು. "ದುರ್ಯೋಧನ ನನಗೆ ಸಾಧ್ಯವಾದಷ್ಟೂ ನಾನು ಪ್ರಾಮಾಣಿಕತೆಯಿಂದ ಹೋರಾಡುತ್ತಿದ್ದೀನಿ. ನಿನಗೆ ನನ್ನಲ್ಲಿ ಭರವಸೆ ಇಲ್ಲವಾದಲ್ಲಿ ಬೇರೆ ಯಾರನ್ನಾದರೂ ನಿನಗೆ ನಂಬಿಕೆ ಇರುವವರನ್ನು ನನ್ನ ಜಾಗಕ್ಕೆ ನೇಮಿಸು" ಎಂದು ನೊಂದುಕೊಂಡರು. ದುರ್ಯೋಧನ ಏನನ್ನೂ ಮಾತನಾಡದೆ ಅಲ್ಲಿಂದ ಕಾಲ್ತೆಗೆದ. ಭೀಮ, ದುರ್ಯೋಧನರು ಈಗ ಪರಸ್ಪರ ಎದುರಾದರು. ಇಬ್ಬರ ನಡುವೆ ಬಾಣ ಪ್ರಯೋಗವಾಯಿತು. ಇಬ್ಬರಿಗೂ ಗಾಯಗಳಾದವು. ಆದರೂ ಭೀಮನ ಬಾಣಗಳು ದುರ್ಯೋಧನನನ್ನು ತೀವ್ರವಾಗಿ ಗಾಯಗೊಳಿಸಿದವು. ಅವನಿಗೆ ತಲೆ ತಿರುಗಿದಂತಾಯಿತು. ಸ್ವಲ್ಪ ಹೊತ್ತಿನ ನಂತರ ಚೇತರಿಸಿಕೊಂಡು ಭೀಮನನ್ನು ಅದೇ ಸ್ಥಿತಿಗೆ ದೂಡಿದ. ಘಟೋತ್ಕಚ ಭೀಮ ಗಾಯಗೊಂಡು ಆಯ ತಪ್ಪಿದ್ದನ್ನು ನೋಡಿ ಓಡಿಬಂದು ತಂದೆಯನ್ನು ರಕ್ಷಿಸಿದ.



# ಯುದ್ಧದ ಐದನೇ ದಿನ

ಐದನೇ ದಿನ ಎರಡೂ ಕಡೆ ಸೈನಿಕರು ಯುದ್ಧಕ್ಕೆ ಸಿದ್ಧರಾದರು. ಭೀಷ್ಮರು ಕೌರವ ಸೈನ್ಯವನ್ನು ನಡೆಸಿದರು. ಪಾಂಡವರ ಸೈನ್ಯವನ್ನು ದೃಷ್ಟದ್ಯುಮ್ನ ಮುನ್ನಡೆಸಿದ. ಭದ್ರವಾದ ವ್ಯೂಹಗಳನ್ನು ರಚಿಸಿದ್ದರು.

ಭೀಷ್ಮರು ದಣಿವಿಲ್ಲದೆ ಹೋರಾಡಿದರು. ಪಾಂಡವರಿಗೆ ಸಾಕಷ್ಟು ನಷ್ಟವನ್ನು ಉಂಟು ಮಾಡಿದರು. ಭೀಷ್ಮರ ಜೊತೆಗೆ ದ್ರೋಣರೂ ಬಂದು ಸೇರಿಕೊಂಡರು. ಸಾವಿರಾರು ಮಂದಿ ಸೈನಿಕರನ್ನು ಕೊಂದು ಪಾಂಡವರಿಗೆ ಸೋಲನ್ನು ತಂದರು. ಆದರೆ ಪಾಂಡವರಲ್ಲಿ ಯಾರೂ ಸಾಯಲಿಲ್ಲ. ಇದರಿಂದ ಅಸಮಾಧಾನಗೊಂಡ ದುರ್ಯೋಧನ ಮತ್ತೆ ಭೀಷ್ಮರನ್ನು ಹಂಗಿಸಿದ. “ನೀವು ಹೀಗೆ ಯುದ್ಧ ಮಾಡಿದರೆ ನಾವು ಸೋಲುವುದು ಖಂಡಿತ. ನಿಮ್ಮಂಥವರನ್ನು ನಂಬಿ ತಲೆ ಮೇಲೆ ಕಲ್ಲು ಹಾಕಿಕೊಂಡೆ” ಎಂದ.

ದ್ರೋಣರಿಗೆ ಈ ಮಾತುಗಳನ್ನು ಕೇಳಿಸಿಕೊಳ್ಳಲು ಆಗಲಿಲ್ಲ. ಸಿಟ್ಟು ಬಂತು. ಆದರೂ ತಡೆದುಕೊಂಡರು. ದುರ್ಯೋಧನನಿಗೆ ಹೇಳಿದರು. “ನಿನಗೆ ಬೇಕಾದ್ದನ್ನು ಹೇಳಿಕೋ, ನಾವು ಎಷ್ಟು ಪ್ರಾಮಾಣಿಕತೆಯಿಂದ ಯುದ್ಧ ಮಾಡಬೇಕೋ, ಮಾಡುತ್ತಿದ್ದೇವೆ. ಆದರೂ ನೀನು ನಮ್ಮನ್ನು ದೂರುತ್ತಿದ್ದೀಯ. ಪಾಂಡವರನ್ನು ಸೋಲಿಸುವುದು ನೀನು ತಿಳಿದಷ್ಟು ಸುಲಭವಲ್ಲ” ಎಂದು.

ಇಷ್ಟು ಹೇಳಿ, ಪಾಂಡವ ಸೈನ್ಯವಿದ್ದ ಕಡೆಗೆ ನಡೆದು ಸಿಡಿಲಿನಂತೆ ಎರಗಿದರು. ಹಸಿದ ಹೆಬ್ಬುಲಿಯಂತೆ ಆಕ್ರಮಣ ಮಾಡಿದರು. ದ್ರೋಣರ ರಭಸವನ್ನು ನೋಡಿ ಭೀಮ, ಸಾತ್ಯಕಿಯರು ಅಲ್ಲಿಗೆ ಬಂದರು. ಶಲ್ಯ ದ್ರೋಣರ ನೆರವಿಗೆ ಬಂದ.

ಅಭಿಮನ್ಯು ಶಿಖಂಡಿಯನ್ನು ಜೊತೆಗಿರಿಸಿಕೊಂಡು ಭೀಷ್ಮರನ್ನು ಎದುರಿಸಲು ಹೋದ. ಭೀಷ್ಮರು ಶಿಖಂಡಿಯ ಎದುರಲ್ಲಿ ಯುದ್ಧ ಮಾಡದೆ ಹಿಂತಿರುಗಿದರು.

ನಂತರ ಭೀಷ್ಮ ಅರ್ಜುನರು ಮತ್ತೆ ಎದುರಾದರು. ಒಬ್ಬರಿಗೊಬ್ಬರು ಗಾಯಗೊಳಿಸುತ್ತಿದ್ದರು. ಆದರೆ ಯಾರೊಬ್ಬರೂ ಸೋಲುವಂತೆ ಕಾಣಲಿಲ್ಲ.

ಸಾತ್ಯಕಿಯಂತೂ ನರಮೇಧದಲ್ಲಿ ತೊಡಗಿದ್ದ. ಅವನನ್ನು ಮಟ್ಟ ಹಾಕಲು ದುರ್ಯೋಧನ ದೊಡ್ಡ ಸೈನ್ಯವನ್ನು ಕೊಟ್ಟು ಭೂರೀಶ್ರವನನ್ನು ಕಳಿಸಿಕೊಟ್ಟ. ಅವನು ಬಹಳ ಸಾಹಸದಿಂದ ಹೋರಾಡಿದ. ಅವನ ಆಘಾತಕ್ಕೆ ಸಾತ್ಯಕಿಯ ಮಕ್ಕಳು ಪ್ರಾಣ ಕಳೆದುಕೊಂಡರು. ಇದರಿಂದ ಕೋಪಗೊಂಡ ಸಾತ್ಯಕಿ ಭೂರೀಶ್ರವನ ರಥದ ಕಡೆಗೆ ತನ್ನ ರಥವನ್ನು ನಡೆಸಿದ. ವೇಗವಾಗಿ ಬಂದು ಎದುರಾದ ರಥಗಳು ಒಂದಕ್ಕೊಂದು ಢಿಕ್ಕಿ ಹೊಡೆದು ಪುಡಿಪುಡಿಯಾಗಿ ನೆಲಕ್ಕೆ ಬಿದ್ದವು. ಭೂರೀಶ್ರವನಿಂದ. ಸಾತ್ಯಕಿ ಇನ್ನೇನು ಸಾಯುತ್ತೇನೆ ಎಂದುಕೊಳ್ಳುವಷ್ಟರಲ್ಲಿ ಭೀಮನು ಓಡಿ ಬಂದ.

ಆ ದಿನಕ್ಕೆ ಅರ್ಜುನ ಸಾವಿರಾರು ಸೈನಿಕರನ್ನು ಯಮಪುರಿಗೆ ಕಳಿಸಿದ.



# ಯುದ್ಧದ ಆರನೆ ದಿನ

ಆರನೇ ದಿನವೂ ಯುದ್ಧವು ಆರಂಭವಾಯಿತು. ಭೀಮ ದ್ರೋಣರು ಯುದ್ಧ ಮಾಡುವಾಗ ದ್ರೋಣರ ಸಾರಥಿ ಹತನಾದ. ಆದರೂ ದ್ರೋಣರು ಧೈರ್ಯಗೆಡದೆ ಯುದ್ಧ ಮುಂದುವರೆಸಿದರು. ಭೀಷ್ಮರೂ ಬಂದು ಜೊತೆಯಾದರು. ಇಬ್ಬರೂ ಸೇರಿ ಪಾಂಡವ ಸೈನ್ಯವನ್ನು ಬಲಿ ತೆಗೆದುಕೊಂಡರು.

ಭೀಮಾರ್ಜುನರು ತಮ್ಮ ಸೈನ್ಯಕ್ಕೆ ಆಗುತ್ತಿದ್ದ ನಷ್ಟವನ್ನು ಕಂಡು ಬಿರುಸಿನಿಂದ ಭೀಷ್ಮದ್ರೋಣರತ್ತ ಹೋದರೂ ಪ್ರಯೋಜನವಾಗಲಿಲ್ಲ.

ಭೀಮ ದುಶ್ಯಾಸನನ ಮೇಲೆ ಬೀಳಬೇಕೆಂದುಕೊಂಡಿದ್ದ. ಆದರೆ ಅವನೇ ದುರ್ಯೋಧನನ ಸೋದರರಿಂದ ಸುತ್ತುವರೆಯಲ್ಪಟ್ಟಿದ್ದ. ಅವರಲ್ಲಿ ದುಶ್ಯಾಸನನೂ ಇದ್ದ. ಆದರೆ ಭೀಮ ಸ್ವಲ್ಪವೂ ಹಿಂಜರಿಯದೆ ಅವರೆಲ್ಲರನ್ನೂ ನಿಭಾಯಿಸಿದ. ಅವರ ತಲೆಗಳನ್ನು ತೆಗೆಯುವ ಉದ್ದೇಶದಿಂದ ಗದೆಯನ್ನು ಜೋರಾಗಿ ಬೀಸುತ್ತಾ ಅಟ್ಟಿಸಿಕೊಂಡು ಹೋದ. ದುಷ್ಟದ್ಯುಮ್ನ ಖಾಲಿಯಾಗಿದ್ದ ರಥವನ್ನು ನೋಡಿ ಭೀಮನಿಗೆ ಏನಾಗಿದೆಯೋ ಎಂದು ಹೆದರಿದ ಮತ್ತು ಅವನನ್ನು ಹುಡುಕಿಕೊಂಡು ಹೋದ. ಕಡೆಗೆ ಅವನು ಸುರಕ್ಷಿತವಾಗಿರುವುದನ್ನು ನೋಡಿ ನಿಟ್ಟುಸಿರುಬಿಟ್ಟ.

ನಂತರ ಭೀಮ, ದುರ್ಯೋಧನನ ಜೊತೆ ಸೆಣಸಾಟಕ್ಕೆ ನಿಂತ. ಇಬ್ಬರ ನಡುವೆಯೂ ಭಯಂಕರ ಯುದ್ಧವಾಯಿತು. ಶಸ್ತ್ರಾಸ್ತ್ರ ಪ್ರಯೋಗದ ಜೊತೆಗೆ ಮೂದಲಿಕೆಗಳ, ಬೈಗುಳ ವಿನಿಮಯವಾಯಿತು. ಮತ್ತೆ ಬಾಣಗಳ ವಿನಿಮಯವಾಯಿತು. ದುರ್ಯೋಧನ ಬಹಳವಾಗಿ ಗಾಯಗೊಂಡಿದ್ದ. ಪ್ರಜ್ಞೆ ತಪ್ಪಿ ಬಿದ್ದ. ಕೃಪಾಚಾರ್ಯ ಇದನ್ನು ನೋಡಿ ಅಲ್ಲಿಗೆ ಬಂದು ದುರ್ಯೋಧನನನ್ನು ರಥದಲ್ಲಿ ಇರಿಸಿಕೊಂಡು ಹೋದ. ಭೀಷ್ಮರು ಅಲ್ಲಿಗೆ ಬಂದು ಯುದ್ಧ ಮುಂದುವರೆಸಿದರು.



## ಯುದ್ಧದ ಏಳನೇ ದಿನ

ದುರ್ಯೋಧನನಿಗೆ ಮೈಯೆಲ್ಲಾ ಗಾಯಗಳಾಗಿದ್ದವು. ಅವನಿಗೆ ಹತಾಶೆ ಯುಂಟಾಯಿತು. ಯುದ್ಧದ ಪರಿಣಾಮದ ಬಗ್ಗೆ ಅವನು ಭಯಗೊಂಡಿದ್ದ. ಭರವಸೆಯನ್ನು ಕಳೆದುಕೊಳ್ಳುತ್ತಿದ್ದ. ಆದರೆ ಭೀಷ್ಮರು ಅವನಲ್ಲಿ ಧೈರ್ಯ ತುಂಬಿದರು. ತಮ್ಮಲ್ಲಿದ್ದ ಮುಲಾಮನ್ನು ಗಾಯಗಳಿಗೆ ಹಚ್ಚಿಕೊಳ್ಳಲೆಂದು ಕೊಟ್ಟರು.

ಭೀಷ್ಮರು ವೃತ್ತಾಕಾರವಾಗಿ ಸೇನೆಯ ವ್ಯೂಹವನ್ನು ರಚಿಸಿದರು. ಒಂದೊಂದು ಆನೆ ಜೊತೆಗೆ ಏಳು ರಥಗಳು. ಒಂದೊಂದು ರಥವನ್ನು ರಕ್ಷಿಸಲು ಏಳು ಕುದುರೆಗಳು ಹೀಗೆ ಈ ವ್ಯೂಹದ ವಿನ್ಯಾಸವಿತ್ತು. ಸೇನೆಯ ರಚನಾ ವಿನ್ಯಾಸವನ್ನು ನೋಡಿದ ಮೇಲೆ ದುರ್ಯೋಧನನಿಗೆ ಸ್ವಲ್ಪ ನೆಮ್ಮದಿಯಾಯಿತು. ಯುಧಿಷ್ಠಿರ ವಜ್ರವ್ಯೂಹವನ್ನು ರಚಿಸಿದ.

ದ್ರೋಣ–ವಿರಾಟ, ಶಿಖಂಡಿ–ಅಶ್ವತ್ಥಾಮ; ದುರ್ಯೋಧನ–ದುಷ್ಟದ್ಯುಮ್ನ ಹೀಗೆ ಜೋಡಿಗಳು ಮುಖಾಮುಖಿಯಾಗಿ ಹೋರಾಡುತ್ತಿದ್ದರು. ಇನ್ನೊಂದು ಕಡೆ ಭಗದತ್ತ ಮತ್ತು ಘಟೋತ್ಕಚ ಭಯಂಕರವಾಗಿ ಯುದ್ಧದಲ್ಲಿ ತೊಡಗಿದ್ದರು.

ಶಿಖಂಡಿಗೆ ಅಶ್ವತ್ಥಾಮನಿಂದ ಸೋಲಾಯಿತು. ಮುಂದಿನ ಆಕ್ರಮಣ ತಪ್ಪಿಸಿಕೊಳ್ಳಲು ಸಾತ್ಯಕಿಯ ರಥವನ್ನೇರಿ ಯುದ್ಧ ಭೂಮಿಯಿಂದಲೇ ಓಡಿದ.

ದುರ್ಯೋಧನ – ದುಷ್ಟದ್ಯುಮ್ನರ ನಡುವಿನ ಯುದ್ಧದಲ್ಲಿ ದುರ್ಯೋಧನನ ಕುದುರೆಗಳು ಸತ್ತು ಬಿದ್ದವು. ಆದ್ದರಿಂದ ಪಾದಚಾರಿಯಾಗಿ ಯುದ್ಧ ಮಾಡಬೇಕಾಯಿತು. ಶಕುನಿ ದುರ್ಯೋಧನನ ಸ್ಥಿತಿಯನ್ನು ನೋಡಿ ಅಲ್ಲಿಗೆ ಬಂದು ಅವನನ್ನು ರಥವೇರಿಸಿಕೊಂಡು ಹೋದ.

ಇನ್ನೊಂದು ಕಡೆ ದ್ರೋಣ ಮತ್ತು ವಿರಾಟರ ನಡುವೆ ಯುದ್ಧ ನಡೆಯುತ್ತಿತ್ತು. ವಿರಾಟನ ಸಾರಥಿ ಪ್ರಾಣ ಕಳೆದುಕೊಂಡ. ಆದ್ದರಿಂದ ವಿರಾಟ ತನ್ನ ಮಗ ಸಂಗನ ರಥವನ್ನೇರಿದ. ಅವನ ಬಳಿಗೆ ಬರುತ್ತಿದ್ದ ಹೊತ್ತಿಗೆ ಸರಿಯಾಗಿ ಅವನು (ಸಂಗ) ಕೊಲೆಯಾದ.

ಯುದಿಷ್ಠಿರನ ಮೇಲೆ ಶ್ರುತಾಯು ಬಾಣಗಳ ಮಳೆಗೆರೆದ. ಯುಧಿಷ್ಠಿರ ಏನೇ ಪ್ರಯತ್ನಿಸಿದರೂ ಅವನನ್ನು ಎದುರಿಸಲು ಆಗಲಿಲ್ಲ. ಶ್ರುತಾಯುವಿನ ಬಾಣಗಳು ಯುಧಿಷ್ಠಿರನ ಎದೆಯಲ್ಲಿ ನಾಟಿದವು. ಕೋಪಗೊಂಡ ಯುಧಿಷ್ಠಿರ ಅತ್ಯಂತ ಪ್ರಬಲವಾದ ಅಸ್ತ್ರವನ್ನು ಕಳಿಸಿದ. ಇದು ಶ್ರುತಾಯುವಿನ ರಥ ಮತ್ತು ಸಾರಥಿಯನ್ನು ನಾಶ ಮಾಡಿತು. ಶ್ರುತಾಯುವಿಗೆ ಬೇರೆ ದಾರಿ ಕಾಣದೆ ಯುದ್ಧಭೂಮಿಯಿಂದಲೇ ಓಡಿ ಹೋದ.

ದುರ್ಯೋಧನನ ಮೂವರು ಸೋದರರು ಅಭಿಮನ್ಯುವನ್ನು ಮುತ್ತಿದರು. ಆದರೂ ಅಭಿಮನ್ಯು ಅವರಿಗೆ ಬುದ್ಧಿ ಕಲಿಸಿ ಅಲ್ಲಿಂದ ಓಡುವಂತೆ ಮಾಡಿದ. ಭೀಷ್ಮರು ಬಂದು ಯುದ್ಧವನ್ನು ಮುಂದುವರಿಸಿ ಅಭಿಮನ್ಯುವಿನ ಮೇಲೆ ಎರಗಿದರು.

ದೂರದಲ್ಲಿದ್ದ ಅರ್ಜುನ, ಅಭಿಮನ್ಯು ಭೀಷ್ಮರನ್ನು ಎದುರಿಸುತ್ತಿದ್ದುದನ್ನು ನೋಡಿ ಅವನ ಸಹಾಯಕ್ಕೆ ಓಡಿ ಬಂದ. ಅಷ್ಟು ಹೊತ್ತಿಗೆ ಸೂರ್ಯಾಸ್ತವಾಗಿದ್ದರಿಂದ ಯುದ್ಧಕ್ಕೆ ತೆರೆ ಬಿತ್ತು.

**ಯುದ್ಧದ ಎಂಟನೇ ದಿನ**

ಎಂಟನೇ ದಿನ ಭೀಷ್ಮರು ಕೌರವ ಸೈನ್ಯವನ್ನು ಕೂರ್ಮವ್ಯೂಹವನ್ನಾಗಿ ರಚಿಸಿದರು. ಯುಧಿಷ್ಠಿರ ದೃಷ್ಟದ್ಯುಮ್ನನಿಗೆ ಕೂರ್ಮವ್ಯೂಹಕ್ಕೆ ಪ್ರತಿಯಾದ ಸಮರ್ಥವಾದ ವ್ಯೂಹವನ್ನು ರಚಿಸುವಂತೆ ಹೇಳಿದ.

ದೃಷ್ಟದ್ಯುಮ್ನ ಪಾಂಡವ ಸೇನೆಯನ್ನು ಮೂರು ಕವಲಾಗಿ ರಚಿಸಿದ. ಈ ಒಂದೊಂದು ಕವಲಿನ ಮುಖದ್ವಾರದಲ್ಲಿ ಯುಧಿಷ್ಠಿರ, ಭೀಮ, ಸಾತ್ಯಕಿಯರು ಇರಬೇಕೆಂದು ತೀರ್ಮಾನವಾಯಿತು.

ಭೀಮ ಧೃತರಾಷ್ಟ್ರನ ಎಂಟು ಮಂದಿ ಮಕ್ಕಳನ್ನು ಕೊಂದ. ದುರ್ಯೋಧನ ಕಣ್ಣೀರಿಟ್ಟ. ತಮ್ಮ ವಂಶನಾಶಕ್ಕೆ ಭೀಮಸೇನನೊಬ್ಬನೇ ಸಾಕು ಎನಿಸಿತು.

ಅರ್ಜುನ ಮತ್ತು ಅವನಿಗೆ ಉಲೂಪಿಯಿಂದ ಜನಿಸಿದ ಮಗ ಇರಾವಂತನನ್ನು ಕಳೆದುಕೊಂಡ. ತನ್ನ ಚಿಕ್ಕಪ್ಪನ ಮಗನ ಸಾವನ್ನು ನೋಡಿದ, ಘಟೋತ್ಕಚ ರೋಷದಿಂದ ಕೌರವ ಸೇನೆಯ ಮೇಲೆ ಭಯಂಕರ ಗರ್ಜನೆಯೊಂದಿಗೆ ಬಿದ್ದ. ಇದರಿಂದ ಕೌರವ ಸೇನೆ ತತ್ತರಿಸಿ ಹೋಯಿತು. ಅರ್ಜುನನ ಮಗನನ್ನು ಕೊಂದ ಅಲಂಬಾಸುರನ ಮೇಲೆ ಸೇಡು ತೀರಿಸಿಕೊಳ್ಳಲೆಂದೇ ಘಟೋತ್ಕಚ ಅಷ್ಟು ಭಯಂಕರವಾಗಿ ಸೈನ್ಯದ ಮೇಲೆ ಬಿದ್ದು ಅನಾಹುತ ಮಾಡಿದ. ಘಟೋತ್ಕಚನನ್ನು ಎದುರಿಸಲು ದುರ್ಯೋಧನನೇ ಮುಂದಾದ. ದುರ್ಯೋಧನನ ಮೇಲೆ ಘಟೋತ್ಕಚ ಎಸೆದ ಅಸ್ತ್ರವೊಂದು ಇನ್ನೇನು ಕೊಲ್ಲುವುದರಲ್ಲಿತ್ತು. ಅಷ್ಟರಲ್ಲಿ ಆನೆಯೊಂದು ಅಡ್ಡ ಬಂದುದರಿಂದ ದುರ್ಯೋಧನ ಬದುಕಿ ಉಳಿದ. ಆದರೆ ಆನೆ ಸತ್ತು ಬಿದ್ದಿತು.

ದುರ್ಯೋಧನನ ಸಹಾಯಕ್ಕೆ ದ್ರೋಣರು ಒಂದು ದೊಡ್ಡ ಸೇನಾ ತುಕಡಿಯನ್ನು ಕಳಿಸಿದರು.

ಕೌರವ ಪಾಂಡವ ಸೇನೆಗಳ ನಡುವೆ ಭಯಂಕರ ಯುದ್ಧವಾಯಿತು. ಯುಧಿಷ್ಠಿರನಿಗೆ ಭೀಮನ ಮಗ 'ಘಟೋತ್ಕಚನ ಚಿಂತೆಯಾಯಿತು. ಭೀಮನನ್ನು ಅವನ ರಕ್ಷಣೆಗೆ ಕಳಿಸಿದ. ಭೀಮ ದ್ರೋಣರು ನಡೆಸಿದ ಹೋರಾಟದಲ್ಲಿ, ಎರಡೂ ಕಡೆ ಸೈನಿಕರು ಸಾವನ್ನು ಅಪ್ಪಿದರು. ಆ ದಿನವೇ ದುರ್ಯೋಧನನ ಹದಿನಾರು ಮಂದಿ ಸೋದರರು ಪ್ರಾಣ ಕಳೆದುಕೊಂಡರು.

ಅಜೇಯರಾಗುತ್ತಿದ್ದ ಪಾಂಡವರನ್ನು ಹೇಗೆ ಗೆಲ್ಲಬೇಕೆಂದೇ ತೋಚದೆ ದುರ್ಯೋಧನ ಚಿಂತಿತನಾದ. ಭೀಷ್ಮ, ದ್ರೋಣರಿಗೆ ತಮ್ಮ ಸೈನ್ಯದ ನಷ್ಟವನ್ನು ಆಗಾಗ ತಿಳಿಸುತ್ತಲೇ ಇದ್ದಾನೆ. ಪಾಂಡವರ ವಿರುದ್ಧದ ಈ ಹೋರಾಟದಲ್ಲಿ ಅವರ ಬಗ್ಗೆ ಅಸಂತೃಪ್ತಿಯನ್ನು ತೋರಿದ. ಅವರು

ಮಾಡಬೇಕಾದ್ದನ್ನೆಲ್ಲ ಮಾಡುತ್ತಲೇ ಇದ್ದಾರೆ. ಆದರೂ ಫಲಿತಾಂಶ ಸೊನ್ನೆಯಾಗಿದೆ. ಆದ್ದರಿಂದ ಒಂದು ದಿನ ರಾತ್ರಿ ತನ್ನ ಆಪ್ತ ಗೆಳೆಯ ಕರ್ಣನ ಬಳಿಗೆ ಹೋಗಿ ತನ್ನ ದುಃಖವನ್ನು ಹೇಳಿಕೊಂಡ. ಇದಕ್ಕೆ ದಾರಿ ಏನಾದರೂ ಇದ್ದರೆ ಹೇಳಬೇಕೆಂದ. ಭೀಷ್ಮರ ಬಗ್ಗೆ ಮೊದಲೇ ಅಸಮಾಧಾನಗೊಂಡಿದ್ದ ಕರ್ಣ, ದುರ್ಯೋಧನನಿಗೆ, "ಗೆಳೆಯಾ, ನಾನು ನಿನಗೆ ಮೊದಲೇ ಹೇಳಿದ್ದೆ. ಈ ಭೀಷ್ಮರನ್ನು ನಂಬಬೇಡವೆಂದು ಅವರು ಪಾಂಡವ ಪಕ್ಷಪಾತಿಗಳು. ಪಾಂಡವರು ಸೋಲುವುದು ಅವರಿಗೆ ಇಷ್ಟವಿಲ್ಲ. ಪಾಂಡವರಲ್ಲಿ ಯಾರೊಬ್ಬರಿಗೂ ಏನು ಆಗದಂತೆ ನೋಡಿಕೊಳ್ಳುತ್ತಿದ್ದಾರೆ. ನಿನಗೆ ನಿಜವಾಗಿಯೂ ಪಾಂಡವರನ್ನು ಗೆಲ್ಲಬೇಕೆಂದಿದ್ದರೆ, ನನಗೆ ಸೇನಾಪತಿ ಪಟ್ಟವನ್ನು ನೀಡು. ಕ್ಷಣ ಮಾತ್ರದಲ್ಲಿ ಪಾಂಡವರ ಸೊಲ್ಲು ಇಲ್ಲದಂತೆ ಮಾಡುತ್ತೇನೆ" ಎಂದು ತನ್ನ ಮನಸ್ಸಿನ ಕಹಿಯನ್ನೆಲ್ಲಾ ಚೆಲ್ಲಿಬಿಟ್ಟ.

ದುರ್ಯೋಧನ ತಕ್ಷಣವೇ ಏನೂ ಹೇಳಲಿಲ್ಲ. ಸುಮ್ಮನೆ ಭೀಷ್ಮರ ಶಿಬಿರಕ್ಕೆ ಹೋದ. ಯುದ್ಧದ ಫಲಿತಾಂಶದ ಬಗ್ಗೆ ಕಳವಳ ವ್ಯಕ್ತಪಡಿಸಿದ. ದುರ್ಯೋಧನನ ನೋವು, ಆತಂಕಗಳನ್ನು ಕಳೆದು ಭರವಸೆಗಳನ್ನು ತುಂಬಿದರು. ನಾಳಿನ ಯುದ್ಧದಲ್ಲಿ ತಾನು ಹೇಗೆ ಹೋರಾಡುತ್ತೇನೆ ನೋಡುತ್ತಿರು ಎಂದು ಹೇಳಿ. ಶಾಂತಿಯಿಂದ ಹೋಗೆಂದು ಕಳಿಸಿಕೊಟ್ಟ. ಆದರೆ ಯಾವುದೇ ಕಾರಣಕ್ಕೂ ಶಿಖಂಡಿ ತನ್ನ ಮುಂದೆ ಕಾಣಿಸಿಕೊಳ್ಳದಂತೆ ನೋಡಿಕೊಳ್ಳಲು ಎಚ್ಚರಿಕೆ ಕೊಟ್ಟ.



## ಯುದ್ಧದ ಒಂಭತ್ತನೇ ದಿನ

ಒಂಬತ್ತನೇ ದಿನ ಕುರುಕ್ಷೇತ್ರದ ಬೇರೆ ಬೇರೆ ಭಾಗಗಳಲ್ಲಿ ಯುದ್ಧ ನಡೆಯಿತು. ಸಾತ್ಯಕಿ, ಅಶ್ವತ್ಥಾಮ ಒಂದು ಕಡೆ, ಅಲಂಬಾಸುರ, ಅಭಿಮನ್ಯು ಮತ್ತೊಂದು ಕಡೆ ಎದುರಾದರು. ಅಭಿಮನ್ಯುವಿನ ಹೊಡೆತಗಳನ್ನು ಸಹಿಸಿಕೊಳ್ಳಲಾರದೆ ಅಲಂಬಾಸುರ ಪ್ರಾಣರಕ್ಷಣೆಗೆಂದು ಓಡಿದ.

ಮತ್ತೊಂದು ಕಡೆ ಅರ್ಜುನ ಭೀಷ್ಮರ ನಡುವೆ ಶಸ್ತ್ರಾಸ್ತ್ರ ಪ್ರಯೋಗ ನಡೆಯುತ್ತಿತ್ತು. ಭೀಷ್ಮರು ಎಂದಿಗಿಂತಲೂ ಭಯಂಕರವಾಗಿ ಹೋರಾಡಿದರು. ಭೀಷ್ಮರ ಬಾಣ ವರ್ಷವನ್ನು ಎದುರಿಸುವುದು ಅರ್ಜುನನಿಗೂ ಕಷ್ಟವೆನಿಸಿತು. ಆದರೂ ಹೇಗೋ ನಿಭಾಯಿಸಿದ. ಬಹಳ ಜಾಣ್ಮೆಯಿಂದ ಆ ಬಾಣಗಳನ್ನು ಮಧ್ಯದಲ್ಲಿಯೇ ಕತ್ತರಿಸಿದ. ಅರ್ಜುನನ ಶರಕೌಶಲ್ಯವನ್ನು ನೋಡಿ ಭೀಷ್ಮರು ಮೆಚ್ಚುಗೆ ಸೂಚಿಸಿದರು. ಶತ್ರುವೆಂಬುದನ್ನು ಮರೆತು ಶಹಬಾಷ್ ಎಂದರು. ಆದರೆ ಬಾಣಗಳ ವಿನಿಮಯ ನಿಲ್ಲುವ ಹಾಗೆ ಕಾಣಲಿಲ್ಲ. ಅರ್ಜುನನಿಗೆ ಸೂಚನೆ ನೀಡುತ್ತಿದ್ದರೂ, ಭೀಷ್ಮರನ್ನು ಕೊಲ್ಲುವ ಮನಸ್ಸು ಇಲ್ಲದಂತೆ ಕಾಣಿಸಿದ. ಇನ್ನು ತಾನೇ ಆಯುಧ ಹಿಡಿಯಬೇಕೆಂದು ಪ್ರತಿಜ್ಞೆಯನ್ನು ಮರೆತು ಕೃಷ್ಣ ಚಕ್ರವನ್ನು ಕೈಗೆ ತೆಗೆದುಕೊಂಡ. ಮೊದಲ ಸಲದಂತೆ ಈ ಸಲವೂ ಭೀಷ್ಮ ಕೃಷ್ಣನ ಕೈಯಲ್ಲಿ ಸಾಯುವಂತಾದರೆ ಅದೇ ತನ್ನ ಪುಣ್ಯ; ತನಗೆ ಮೋಕ್ಷ ಎಂದು ತಿಳಿದು ಕೃಷ್ಣನನ್ನು ಕೊಲ್ಲಲು ಪ್ರಾರ್ಥಿಸಿದ. ಕೃಷ್ಣನ ಕೈಯಲ್ಲಿ ಸಾಯುವ ಪುಣ್ಯ ಯಾರಿಗೆ ತಾನೇ ಲಭ್ಯ? ಎಂದು ಭಾವಿಸಿದ್ದರಿಂದ ಸಂತೋಷವಾಗಿ ಕೃಷ್ಣನನ್ನು ಕೊಲ್ಲಲು ಆಹ್ವಾನಿಸಿದ.

ಅರ್ಜುನ ಕೃಷ್ಣನು ಎಲ್ಲಿ ಭೀಷ್ಮರನ್ನು ಮುಗಿಸಿ ಬಿಡುತ್ತಾನೋ ಎಂದು ಹೆದರಿ ಓಡಿ ಹೋಗಿ, ಕೃಷ್ಣನಿಗೆ ಸಮಾಧಾನ ಹೇಳಿ ಕರೆತಂದ. ತಾನೇ ಭೀಷ್ಮರನ್ನು ಎದುರಿಸುವುದಾಗಿ ತಿಳಿಸಿದ. ಮುಂದೆ ಸ್ವಲ್ಪವೂ

ಸಂಕೋಚವಿಲ್ಲದೆ, ಹಿಂಜರಿಕೆಯಿಲ್ಲದೆ ಭೀಷ್ಮರನ್ನು ಮುಗಿಸುವುದಾಗಿ ಭರವಸೆ ಕೊಟ್ಟ ಅರ್ಜುನನ ಮಾತಿಗೆ ಕಿವಿಕೊಟ್ಟು ಮತ್ತೆ ರಥಕ್ಕೆ ಮರಳಿದ.

ಭೀಷ್ಮರನ್ನು ಗೆಲ್ಲಲು ಯಾವುದಾದರೂ ದಾರಿಯನ್ನು ಹುಡುಕಬೇಕೆಂದು ಕೃಷ್ಣನೂ ಸೇರಿದಂತೆ ಎಲ್ಲ ಪಾಂಡವ ಸೋದರರು ಯೋಚಿಸತೊಡಗಿದರು. ಭೀಷ್ಮರನ್ನು ಗೆಲ್ಲದೆ ಪಾಂಡವರಿಗೆ ಯುದ್ಧದಲ್ಲಿ ಗೆಲುವು ಸಿಗಲಾರದು. ಆದರೆ ಗೆಲ್ಲುವುದು ಹೇಗೆಂದೇ ತಿಳಿಯದೆ ಚಡಪಡಿಸಿದರು. ಅದನ್ನು ನೋಡಿದ ಕೃಷ್ಣ, ಪಾಂಡವರನ್ನು ನೇರವಾಗಿ ಭೀಷ್ಮರಲ್ಲಿಗೆ ಹೋಗಿ ಅವರನ್ನೇ ಯಾವುದಾದರೂ ಉಪಾಯ ಸೂಚಿಸಲು ಕೇಳಬೇಕೆಂದ.

ಅವರು ಭೀಷ್ಮರ ಶಿಬಿರಕ್ಕೆ ಹೋದರು. ಭೀಷ್ಮರಿಗೆ ಗೌರವವನ್ನು ಸಲ್ಲಿಸಿದರು. ಆಶೀರ್ವಾದ ಪಡೆದರು. ಯುಧಿಷ್ಠಿರ ವಿನಯದಿಂದ ಹೇಳಿದ. “ಅಜ್ಜ ಯುದ್ಧ ಮುಗಿಯುವ ಹಾಗೆ ಕಾಣುತ್ತಿಲ್ಲ. ನಾವು ಎಷ್ಟೇ ಧೈರ್ಯ, ಸಾಹಸಗಳಿಂದ ಯುದ್ಧ ಮಾಡಿದರೂ ಜಯವೆನ್ನುವುದು ಬರೀ ಕನಸಾಗಿದೆ. ಆದ್ದರಿಂದ ಅಜ್ಜ, ನೀವೇ ನಮಗೆ ಯಾವುದಾದರೂ ದಾರಿ ತೋರಿಸಬೇಕು. ತಾವು ಕೌರವ ಸೇನೆಯ ಮುಂಚೂಣಿಯಲ್ಲಿರುವವರೆಗೂ, ತಮ್ಮ ಜೀವವಿರುವವರೆಗೂ ನಮಗೆ ಗೆಲುವಿನ ಭರವಸೆ ಇಲ್ಲ. ನಮಗೇನಾದರೂ ಉಪಾಯ ಸೂಚಿಸಿ ಅಜ್ಜ” ಎಂದು.

ಭೀಷ್ಮರು ಮುಗುಳ್ನಕ್ಕು ಹೇಳಿದರು. “ಹೌದು ಯುಧಿಷ್ಠಿರ, ನೀನು ಹೇಳಿದ್ದು ಸರಿಯಾಗಿದೆ. ನಾನಿರುವವರೆಗೂ ನಿಮಗೆ ಜಯ ಸಾಧ್ಯವಿಲ್ಲ. ಅದಕ್ಕಾಗಿ ನಾನೊಂದು ಸಲಹೆ ನೀಡುತ್ತೇನೆ. ನಿಮಗೆಲ್ಲರಿಗೂ ತಿಳಿದಿರುವಂತೆ ನಾನು ಶಿಖಂಡಿಯ ಎದುರು ಯುದ್ಧ ಮಾಡುವುದಿಲ್ಲ. ಆದ್ದರಿಂದ ಹೇಗಾದರೂ ಶಿಖಂಡಿಯನ್ನು ಮುಂದಿಟ್ಟುಕೊಂಡು ಯುದ್ಧಕ್ಕೆ ಬನ್ನಿ. ಅವಳನ್ನು ನೋಡಿದ ಕೂಡಲೇ ನಾನು ಶಸ್ತ್ರಗಳನ್ನು ಬಿಟ್ಟುಬಿಡುತ್ತೇನೆ. ಆಗ ನೀವು ಸುಲಭವಾಗಿ ನನ್ನನ್ನು ಕೊಲ್ಲಬಹುದು. ಈಗಿರುವುದು ನಿಮಗೆ ಅದೊಂದೇ ದಾರಿ” ಎಂದು.

ಮತ್ತೊಮ್ಮೆ ಪಾಂಡವರು ಭೀಷ್ಮರಿಗೆ ಗೌರವ ಸೂಚಿಸಿ, ಧನ್ಯವಾದಗಳನ್ನು ಅರ್ಪಿಸಿ, ತಮ್ಮ ಶಿಬಿರದ ಕಡೆಗೆ ಹೆಜ್ಜೆ ಹಾಕಿದರು.



# ಯುದ್ಧದ ಹತ್ತನೇ ದಿನ

ಮೊದಲೇ ನಿರ್ಧರಿಸಿದಂತೆ ಶಿಖಂಡಿಯನ್ನು ಮುಂದಿರಿಸಿಕೊಂಡು ಯುಧಿಷ್ಠಿರ ಭೀಷ್ಮರ ಜೊತೆಗೆ ಯುದ್ಧಕ್ಕೆ ನಿಂತ. ಅರ್ಜುನ ಭೀಷ್ಮರನ್ನು ಎದುರಿಸಿದ. ಶಿಖಂಡಿಯೂ ಭೀಷ್ಮರ ಮೇಲೆ ಬಾಣ ಪ್ರಯೋಗ ಮಾಡಿದ. ಭೀಷ್ಮರು ಶಿಖಂಡಿಯನ್ನು ನೋಡುತ್ತಿದ್ದಂತೆ ಶಸ್ತ್ರ ಸಂನ್ಯಾಸ ಮಾಡಿದರು. ಅದು ಅವರ ಪ್ರತಿಜ್ಞೆಯಾಗಿತ್ತು. ಶಿಖಂಡಿ, ಭೀಷ್ಮರ ಮೇಲೆ ನಿರಂತರವಾಗಿ ಬಾಣ ಪ್ರಯೋಗ ಮಾಡಿದ. ಅರ್ಜುನನೂ ಜೊತೆಯಾದ. ಅವನಿಗೆ ಭೀಷ್ಮರನ್ನು ಕೊಲ್ಲುವುದು ನೋವಿನ ವಿಷಯವಾಗಿತ್ತು. ಆದರೂ ಮನಸ್ಸನ್ನು ಗಟ್ಟಿ ಮಾಡಿಕೊಂಡ. ಪರಿಸ್ಥಿತಿಯ ಪ್ರಯೋಜನ ಪಡೆದು, ಒಂದೇ ಸಮನೆ ಭೀಷ್ಮರ ಮೇಲೆ ಬಾಣ ಪ್ರಯೋ ಗ ಮಾಡಿದ. ಭೀಷ್ಮರು ಎಷ್ಟೇ ಪ್ರಯತ್ನಿಸಿದರೂ ಅರ್ಜುನನ ಬಾಣಗಳಿಂದ ತಪ್ಪಿಸಿಕೊಳ್ಳಲು ಗಾಗಲಿಲ್ಲ. ಅವರ ದೇಹದಲ್ಲೆಲ್ಲ ಬಾಣಗಳು ನಾಟಿದವು.

ಭೀಷ್ಮರು ತಮ್ಮನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ದೇಹದಲ್ಲೆಲ್ಲ ಬಾಣಗಳು ಚುಚ್ಚಿಕೊಂಡಿದ್ದವು. ರಥದಿಂದ ಕೆಳಗೆ ಉರುಳಿದರಾದರೂ ಬೆನ್ನಿಗೆ ಚುಚ್ಚಿದ್ದ ಬಾಣಗಳು ಅವರ ದೇಹ ನೆಲಕ್ಕೆ ಸೋಕದಂತೆ ಮಂಚವಾಗಿ ಪರಿಣಮಿಸಿದವು. ಅಷ್ಟೊಂದು ಬಾಣಗಳು ದೇಹದಲ್ಲಿ ನಾಟಿದರೂ ಮುಖದಲ್ಲಿ ಒಂದು ಚೂರಾದರೂ ನೋವು ಕಾಣಿಸಿಕೊಳ್ಳಲಿಲ್ಲ. ಅವರ ದೇಹ ಕಾಂತಿಯುಕ್ತವಾಗಿತ್ತು. ಅರ್ಜುನ ಮತ್ತಷ್ಟು ಬಾಣಗಳನ್ನು ತಲೆಯೆಡೆಗೆ ಬಿಟ್ಟು ತಲೆ ಜೋತಾಡದಂತೆ ತಡೆದ. ಭೀಷ್ಮರ ಸೋಲು ಎಲ್ಲರಿಗೂ ತಿಳಿದು ಯುದ್ಧವನ್ನು ನಿಲ್ಲಿಸಿದರು. ಭೀಷ್ಮರ ಸ್ಥಿತಿಯ ಬಗ್ಗೆ ಕಳವಳಗೊಂಡು, ಭೀಷ್ಮರಿದ್ದಲ್ಲಿಗೆ ಎಲ್ಲರೂ ಬಂದರು. ಮರಣಾವಸ್ಥೆಯಲ್ಲಿ ಅವರಿದ್ದುದನ್ನು ನೋಡಿ ದುಃಖಿಸಿದರು. ಪಾಂಡವರು, ಕೌರವರು ಅವರ ಸುತ್ತಲೂ



ದುಃಖಿತರಾಗಿ ನಿಂತಿದ್ದರು. ಭೀಷ್ಮರು ಅರ್ಜುನನಿಗೆ 'ಅರ್ಜುನ ನನಗೆ ಬಾಯಾರಿಕೆಯಾಗಿದೆ. ಸ್ವಲ್ಪ ನೀರನ್ನು ಕೊಡಬಲ್ಲೆಯಾ?' ಎಂದು ಕೇಳಿದರು. ಕೂಡಲೇ ಅರ್ಜುನ ಬಾಣ ಪ್ರಯೋಗ ಮಾಡಿ ನೀರಿನ ಬುಗ್ಗೆಯನ್ನು ಹೊಮ್ಮಿಸಿ ನೇರವಾಗಿ ಭೀಷ್ಮರ ಬಾಯಿಗೇ ನೀರು ಬೀಳುವಂತೆ ಮಾಡಿದ. ಭೀಷ್ಮರು ಬಾಯಾರಿಕೆಯನ್ನು ನೀಗಿಸಿಕೊಂಡು ತೃಪ್ತಿಯ ಉಸಿರೆಳೆದರು. ನಂತರ ಅವರೆಲ್ಲರನ್ನೂ ಕುರಿತು, "ಮಕ್ಕಳೇ ನನ್ನ ಮರಣ ಹತ್ತಿರವಾಗಿದೆ. ನಾನು ಸಾಯಲು ಇಷ್ಟ ಪಡುವವರೆಗೆ ಸಾವು ಬರುವುದಿಲ್ಲವಾದರೂ ಉತ್ತರಾಯಣದವರೆಗೆ ಕಾಯುತ್ತೇನೆ" ಎಂದನು.

ಮತ್ತೆ ದುರ್ಯೋಧನನ ಕಡೆ ತಿರುಗಿ ಪ್ರಾರ್ಥಿಸುವ ದನಿಯಲ್ಲಿ, "ದುರ್ಯೋಧನ ಈಗಲಾದರೂ ಪಾಂಡವರೊಂದಿಗೆ ಸಂಧಿ ಮಾಡಿಕೊ. ಇನ್ನು ಎಷ್ಟು ಕಾಲ ಹೋರಾಡಿದರೂ ಪಾಂಡವರನ್ನೂ ಗೆಲ್ಲಲಾರೆ. ಹೀಗಿರುವಾಗ ವೃಥಾ ಯುದ್ಧವನ್ನೇಕೆ ಮುಂದುವರಿಸುತ್ತೀ? ನಿನ್ನ

ಹಠದಿಂದಾಗಿ ಕುರುವಂಶವೇ ನಾಶವಾಗುತ್ತದೆ. ಪರಿಸ್ಥಿತಿಯನ್ನು ಅರ್ಥ ಮಾಡಿಕೋ, ಎಚ್ಚರಗೊಳ್ಳು, ಪಾಂಡವರಿಗೆ ಕೊಡಬೇಕಾದ್ದನ್ನು ಕೊಟ್ಟುಬಿಡು" ಎಂದು ಕೇಳಿಕೊಂಡರು.

ದುರ್ಯೋಧನನಿಗೆ ಈ ಬುದ್ಧಿವಾದದ ಮಾತುಗಳು ಹಿಡಿಸಲಿಲ್ಲ. ಮುಂದೆ ಕೇಳುವುದಕ್ಕೂ ಇಷ್ಟವಾಗಲಿಲ್ಲ. ಆದ್ದರಿಂದ ಮೆಲ್ಲನೆ ಅಲ್ಲಿಂದ ಕಾಲ್ತೆಗೆದ.

ದುರ್ಯೋಧನ ಅಲ್ಲಿಂದ ಹೋದ ಮೇಲೆ ಕರ್ಣನಿಗೆ ವಿಷಯ ತಿಳಿದು ಭೀಷ್ಮರಿದ್ದಲ್ಲಿಗೆ ಬಂದ. ಅವರಿಗೆ ಗೌರವ ಸಲ್ಲಿಸಿದ. ಅವರೊಂದಿಗೆ ತಾನು ಉದ್ಧಟನಂತೆ ನಡೆದುಕೊಂಡು ತಪ್ಪು ಮಾಡಿದೆನೆಂದು ಪಶ್ಚಾತ್ತಾಪ ಪಟ್ಟ. ತನ್ನ ಅಪರಾಧವನ್ನು ಕ್ಷಮಿಸುವಂತೆ ಕೇಳಿಕೊಂಡ. "ಅಜ್ಜ ನಾನು ಬಹಳ ತಪ್ಪು ಮಾಡಿದೆ. ನೀವಿರುವವರೆಗೆ ಯುದ್ಧ ಮಾಡುವುದಿಲ್ಲವೆಂದು ನುಡಿದದ್ದು ದೊಡ್ಡ ಅಪರಾಧವಾಯಿತು. ಹಾಗೆ ಮಾಡದಿದ್ದರೆ ಇಂದು ನಿಮಗೆ ಈ ಸ್ಥಿತಿ ಬರುತ್ತಿರಲಿಲ್ಲ" ಎಂದು ನಿಜವಾದ ಮನಸ್ಸಿನಿಂದ ಗೋಳಾಡಿದ.

ಕರ್ಣ ಪ್ರಾಮಾಣಿಕವಾಗಿ ಪಶ್ಚಾತ್ತಾಪಗೊಂಡಿದ್ದಾನೆ ಎಂದು ಭೀಷ್ಮರು ಗ್ರಹಿಸಿದರು. ಅವನನ್ನು ಸಮಾಧಾನ ಪಡಿಸಬೇಕೆಂದು ಬಳಿಗೆ ಕರೆದು, "ಕರ್ಣ, ನಿನ್ನ ವಿಚಾರದಲ್ಲಿ ನನಗೇನೂ ಅಸಮಾಧಾನವಿಲ್ಲ. ಆದರೆ ಪಾಂಡವರ ಬಗ್ಗೆ ನೀನು ಬೆಳೆಸಿಕೊಂಡ ದ್ವೇಷ ಸರಿಯಲ್ಲ. ಅಲ್ಲದೆ ಅದಕ್ಕೆ ಕಾರಣವೂ ಇಲ್ಲ. ಕರ್ಣ ನಿನಗೆ ಗೊತ್ತಿಲ್ಲದಿರಬಹುದು; ನೀನು ಸೂತಪುತ್ರನಲ್ಲ. ಪಾಂಡವ ಹಿರಿಯ, ಸ್ವತಃ ಕುಂತೀ ಗರ್ಭದಿಂದ ಹುಟ್ಟಿದವನು. ಸೂರ್ಯನ ವರ ಪಡೆದು, ಜನ್ಮ ನೀಡಿದಳು. ಆದ್ದರಿಂದ ಪಾಂಡವರ ಬಗ್ಗೆ ದ್ವೇಷಬಿಡು. ಅಷ್ಟೇ ನಾನು ನಿನ್ನಿಂದ ಕೇಳಿಕೊಳ್ಳುವುದು" ಎಂದು ವಾತ್ಸಲ್ಯದಿಂದ ಮಾತಾಡಿದರು.

"ಅಜ್ಜ, ನಾನು ಕುಂತೀ ಪುತ್ರನೆಂಬುದು ನನಗೂ ತಿಳಿದಿದೆ. ಪಾಂಡವರು ನನ್ನ ಸೋದರರು ನಿಜ. ಆದರೆ ನಾನು ದುರ್ಯೋಧನನ ಉಪ್ಪುಂಡವನು. ಆದ್ದರಿಂದ ನನ್ನ ಪ್ರಾಣ, ಮಾನಗಳು ಅವನವು. ಅವನು ಕಷ್ಟದಲ್ಲಿರುವಾಗ

ಅವನನ್ನು ತೊರೆದು ಬರುವುದು ಹೇಗೆ? ನನ್ನ ಮೇಲಿಟ್ಟಿರುವ ಪ್ರೀತಿ, ವಿಶ್ವಾಸಗಳಿಗೆ ದ್ರೋಹ ಮಾಡಲೇ? ನೀವು ನನ್ನ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಿ. ನನಗೆ ನಿಮ್ಮ ಮಾರ್ಗದರ್ಶನ, ಆಶೀರ್ವಾದಗಳು ಬೇಕಿವೆ" ಎಂದು ವಿನಯಪೂರ್ವಕವಾಗಿ ಕೇಳಿಕೊಂಡ. ಭೀಷ್ಮರಿಗೆ ಬೇಸರವಾಗಲಿಲ್ಲ. ಹಾಗೆ ನೋಡಿದರೆ ಕರ್ಣನ ಬಗ್ಗೆ ಸಹಾನುಭೂತಿ ಮೂಡಿತು. ಅವನ ಮಾತು ನಡತೆಯಿಂದ ಸಂತಸಗೊಂಡರು. ಸ್ವಲ್ಪ ಹೊತ್ತು ಸುಮ್ಮನಿದ್ದು, "ಕರ್ಣ, ನೀನು ಹೇಗೆ ಮಾಡಬೇಕೆಂದು ನಿರ್ಣಯಿಸಿರುವೆಯೋ ಹಾಗೆಯೇ ಮಾಡು. ಆದರೆ ಒಂದು ಮಾತ್ರ ನೆನಪಿರಲಿ, ಜಯವು ಯಾವಾಗಲೂ ಧರ್ಮಿಷ್ಠರ ಪರವಾಗಿರುತ್ತದೆ. ದುರ್ಯೋಧನ ತಪ್ಪು ದಾರಿ ಹಿಡಿದು ನಡೆದಿದ್ದಾನೆ. ಅವನನ್ನು ಸರಿಯಾದ ರೀತಿಯಲ್ಲಿ ನಡೆಸುವವರು ಇಲ್ಲವಾಗಿದ್ದಾರೆ. ಯಾರ ಯಾರ ಮಾತೋ ಕೇಳಿ ತನ್ನ ವಿನಾಶವನ್ನೇ ತಂದುಕೊಳ್ಳುತ್ತಿದ್ದಾನೆ. ಕೌರವರ ಪಾಲಿಗೆ ಯುದ್ಧ ಮಾಡುವ ಅವಕಾಶ ಮಾತ್ರವೇ ಸಿಗುತ್ತದೆ. ಜಯವಂತೂ ಖಂಡಿತ ಸಾಧ್ಯವಿಲ್ಲ. ಗೆಲುವು ಏನಿದ್ದರೂ ಪಾಂಡವರದೇ" ಎಂದು ಪರಿಸ್ಥಿತಿಯನ್ನು ವಿವರಿಸಿ ತಿಳಿಸಿದರು.

ಈಗ ಕೌರವರ ಪಾಲಿಗೆ ಕರ್ಣನೊಬ್ಬನೇ ಭರವಸೆಯಾಗಿದ್ದ. ಕರ್ಣನೇ ಸೇನಾಪತಿಯಾಗಲೆಂಬುದು ಎಲ್ಲರ ಇಚ್ಛೆಯಾಗಿತ್ತು. ಅಂತೆಯೇ ದುರ್ಯೋಧನ ಕರ್ಣನನ್ನು ಸೇನಾಪತಿಯಾಗೆಂದು ಕೇಳಿಕೊಂಡ. ಆದರೆ ಕರ್ಣ ಮತ್ತೊಮ್ಮೆ ಭೀಷ್ಮರ ಜೊತೆ ಮಾಡಿದ ತಪ್ಪನ್ನು ಮಾಡಬಾರದೆಂದು ಕೊಂಡ. ಭೀಷ್ಮ, ದ್ರೋಣರಂಥಹವರ ಸಾಮರ್ಥ್ಯ ಈಗ ಅವನಿಗೆ ತಿಳಿದಿತ್ತು. ಆದ್ದರಿಂದ ಭೀಷ್ಮರ ಜಾಗದಲ್ಲಿ ನಾಯಕತ್ವಕ್ಕೆ ದ್ರೋಣರೇ ಅರ್ಹರಾದ್ದರಿಂದ ಅವರನ್ನೇ ಸೇನಾಪತಿ ಮಾಡಲು ಸೂಚಿಸಿದ. ಇದರಿಂದ ದುರ್ಯೋಧನನಿಗೂ ಸಂತೋಷವಾಯಿತು. ದ್ರೋಣರ ಸರ್ವಶ್ರೇಷ್ಠ ಸೇನಾಪತಿ ಸ್ಥಾನ ಎಲ್ಲರಿಗೂ ಸಮಾಧಾನ ತಂದಿತು.

ಸೇನಾಪತಿಯಾಗುತ್ತಿದ್ದಂತೆ ದ್ರೋಣರು ಸೇನೆಯ ವ್ಯೂಹ ರಚನೆಯ ಕೆಲಸದಲ್ಲಿ ತೊಡಗಿದರು. ಕರ್ಣನೂ ಬಹಳ ಉತ್ಸಾಹದಿಂದ ಓಡಾಡಿದ.

ಐದು ದಿನಗಳ ಕಾಲ ದ್ರೋಣರು ಹೋರಾಡಿ ಅದ್ಭುತ ಪರಾಕ್ರಮ ಶಕ್ತಿ, ಸಾಮರ್ಥ್ಯಗಳನ್ನು ಪ್ರದರ್ಶಿಸಿದರು. ಪಾದರಸದಂತೆ, ಮಿಂಚಿನಂತೆ ಎಲ್ಲೆಲ್ಲೂ ಕಾಣಿಸಿಕೊಳ್ಳುತ್ತಾ ಯುದ್ಧ ಮಾಡುತ್ತಿದ್ದರು. ಯುವಕರನ್ನೂ ನಾಚಿಸುವ ಚುರುಕುತನವಿತ್ತು.

ಸಾತ್ಯಕಿ, ಭೀಮ, ಅರ್ಜುನ, ದೃಷ್ಟದ್ಯುಮ್ನ, ಅಭಿಮನ್ಯು, ದ್ರುಪದ ಮೊದಲಾದ ಅತಿರಥ, ಮಹಾರಥರನ್ನು ಎದುರಿಸಿ, ದ್ರೋಣರು ಹೋರಾಡಿ ಅವರಿಗೆ ಸೋಲನ್ನು ಕಾಣಿಸಿದರು.



## ಯುದ್ಧದ ಹನ್ನೊಂದನೇ ದಿನ

ದ್ರೋಣಾಚಾರ್ಯರು ಸೇನಾಪತಿಗಳಾದ ದಿನದಿಂದ ಕೌರವಸೇನೆ ದಣಿವಿಲ್ಲದೆ ಯುದ್ಧ ಮಾಡಿ ಪಾಂಡವರ ಕಡೆ ಸಾಕಷ್ಟು ನಷ್ಟವನ್ನು ಉಂಟು ಮಾಡಿತು.

ದುರ್ಯೋಧನನ ಮನಸ್ಸಿನಲ್ಲಿ ಇದ್ದಕ್ಕಿದ್ದಂತೆ ಒಂದು ಉಪಾಯ ಹೊಳೆಯಿತು. ಯುಧಿಷ್ಠಿರನನ್ನು ಜೀವಂತವಾಗಿ ಸೆರೆ ಹಿಡಿದರೆ ಗೆಲುವು ತಮ್ಮದಾಗುತ್ತದೆ ಎಂದೆನಿಸಿದಾಗ, ದ್ರೋಣರನ್ನು ಕಂಡು ತನ್ನ ಆಲೋಚನೆಯನ್ನು ವಿವರಿಸಿದ.

ದ್ರೋಣರಿಗೆ ದುರ್ಯೋಧನನ ಒಳಗಿನ ಲೆಕ್ಕಚಾರ ತಿಳಿದಿರಲಿಲ್ಲ. ಸದ್ಯ ಪಾಂಡವರ ಕೊಲೆ ತನ್ನಿಂದಾಗುವುದು ತಪ್ಪಿತಲ್ಲ ಎಂಬುದೆ ಅವರಿಗೆ ಸಂತಸ ತಂದಿತ್ತು. ಯುಧಿಷ್ಠಿರನಂತೂ ಅವನ ಧರ್ಮಬುದ್ಧಿಯಿಂದಾಗಿ ಶತ್ರುಗಳೂ ಸೇರಿದಂತೆ ಎಲ್ಲರಿಗೂ ಬೇಕಾದವನಾಗಿದ್ದ. ಬಹುಶಃ ಅದರಿಂದಲೇ ದುರ್ಯೋಧನನೂ ಯುಧಿಷ್ಠಿರನ ಪ್ರಾಣ ಉಳಿಸಬೇಕು ಎಂದುಕೊಂಡಿರಬಹುದೆಂದು ಯೋಚಿಸಿ ಈ ಆಲೋಚನೆ ತಂದು ಕೊಂಡುದಕ್ಕೆ ಅವನನ್ನು ಮೆಚ್ಚಿಕೊಂಡರು ಮತ್ತು ಅವನು ಬಯಸಿದಂತೆ ಯುಧಿಷ್ಠಿರನನ್ನು ಹಿಡಿದುಕೊಡುತ್ತೇನೆ" ಎಂದು ಭರವಸೆ ನೀಡಿದರು.

ದುರ್ಯೋಧನನ ವಿಚಾರಗಳೇ ಬೇರೆ ಇದ್ದವು. ಯುಧಿಷ್ಠಿರ ಸಾಯುವುದರಿಂದ ತನಗೆ ಯಾವ ಪ್ರಯೋಜನವೂ ಇಲ್ಲ. ಅಲ್ಲದೆ ಅಣ್ಣನ ಸಾವಿನಿಂದ ಮತ್ತಷ್ಟು ಕೋಪಗೊಂಡು ಸೇಡು ತೀರಿಸಿಕೊಳ್ಳಲು ಮತ್ತೂ ಜೋರಾಗಿ ಪ್ರಯತ್ನಿಸುತ್ತಾರೆ. ಇದರಿಂದ ಇನ್ನಷ್ಟು ಸಾವು ನೋವುಗಳು ಉಂಟಾಗುತ್ತವೆ. ಆದ್ದರಿಂದ ಯುಧಿಷ್ಠಿರನನ್ನು

ಸೆರೆಹಿಡಿಯುವುದೇ ಸುರಕ್ಷಿತವಾದ ದಾರಿ ಎಂದು ಭಾವಿಸಿದ್ದರಿಂದಲೇ ದ್ರೋಣರಿಗೆ ಸೆರೆ ಹಿಡಿಯಲು ಸೂಚಿಸಿದ್ದು. ಯುಧಿಷ್ಠಿರ ಸೆರೆಯಾದನೆಂದರೆ ಯುದ್ಧ ಕೊನೆಯಾದಂತೆ ಮತ್ತು ತಾವು ತಮ್ಮನ್ನು ವಿಜೇತರೆಂದು ಘೋಷಿಸಿಕೊಂಡು ಬಿಡಬಹುದು. ಎಲ್ಲವೂ ತಣ್ಣಗಾದ ಮೇಲೆ ಮತ್ತೆ ಯುಧಿಷ್ಠಿರನನ್ನು ಜೂಜಾಟಕ್ಕೆ ಕರೆದು ಸೋಲಿಸಿ ವನವಾಸ ಅಜ್ಞಾತವಾಸಕ್ಕೆ ಕಳಿಸುವುದು, ಇದು ಅವನ ಲೆಕ್ಕಾಚಾರವಾಗಿತ್ತು. ಸ್ವಲ್ಪ ಸಮಯದ ನಂತರ ದುರ್ಯೋಧನ ಇದೆಲ್ಲವನ್ನೂ ನಿಧಾನವಾಗಿ ದ್ರೋಣರಿಗೆ ವಿವರಿಸಿದ.

ದುರ್ಯೋಧನ ಹೇಳಿದ್ದೆಲ್ಲವನ್ನೂ ಕೇಳಿದ ಮೇಲೆ ದ್ರೋಣರಿಗೆ ಬಹಳ ಕೆಡುಕೆನಿಸಿತು. ಆದರೂ ಅವನು ಹೇಳಿದಂತೆ ಮಾಡುವುದಾಗಿ ಭರವಸೆ ಕೊಡಲೇ ಬೇಕಾಯಿತು.

ಯುಧಿಷ್ಠಿರನನ್ನು ಸೆರೆಹಿಡಿಯುವ, ದುರ್ಯೋಧನನ ದುರುದ್ದೇಶ ಮತ್ತು ದ್ರೋಣರು ಸೆರೆ ಹಿಡಿಯಲು ಒಪ್ಪಿರುವ ವಿಚಾರ ಪಾಂಡವರಿಗೆ ತಿಳಿಯಿತು. ಅದಕ್ಕಾಗಿ ಅವನು ಬೇರೆಯದೇ ರೀತಿಯಲ್ಲಿ ಯುದ್ಧ ತಂತ್ರವನ್ನು ರೂಪಿಸಬೇಕಾಯಿತು. ಯುಧಿಷ್ಠಿರನಿಗೆ ಬಲವಾದ ರಕ್ಷಣೆ ಸಿಗುವಂತಹ ರೀತಿಯಲ್ಲಿ ಯೋಜಿಸಲಾಯಿತು.

ದ್ರೋಣರು ಈ ವ್ಯೂಹವನ್ನೆಲ್ಲಾ ಭೇದಿಸಿಕೊಂಡು ನೇರವಾಗಿ ಯುಧಿಷ್ಠಿರನನ್ನು ಸಮೀಪಿಸಿದರು. ಭಯಂಕರವಾಗಿ ಹೋರಾಡಿದರು.

ಶಕುನಿ–ಸಹದೇವ, ನಕುಲ–ಶಲ್ಯ, ಅಭಿಮನ್ಯು–ಪೌರವ, ಕರ್ಣ–ವಿರಾಟ, ಕೃತವರ್ಮ–ಸಾತ್ಯಕಿ, ದೃಷ್ಟದ್ಯುಮ್ನ–ಸುಶರ್ಮ ಹೀಗೆ ಇವರ ನಡುವೆ ದ್ವಂದ್ವ ಯುದ್ಧ ನಡೆಯಿತು. ಅಭಿಮನ್ಯು ಪೌರವನನ್ನು ಇನ್ನೇನು ಸೋಲಿಸುವುದರಲ್ಲಿದ್ದ. ಅಷ್ಟರಲ್ಲಿ ಪೌರವನ ಸಹಾಯಕ್ಕೆ ಅಧಿಕ ಸೈನ್ಯಬಲ ದೊರೆಯಿತು. ಶಲ್ಯ ಅಭಿಮನ್ಯುವನ್ನು ಬೆನ್ನಟ್ಟಿದ. ಭೀಮ ಅಭಿಮನ್ಯುವಿನ ಸಹಾಯಕ್ಕೆ ಬಂದ. ಶಲ್ಯನನ್ನು ತನ್ನ ಗದೆಯಿಂದ ಹೊಡೆದು ಕೆಳಕ್ಕೆ ಬೀಳಿಸಿದ. ಶಲ್ಯ ಪ್ರಜ್ಞೆ ತಪ್ಪಿ ಕೆಳಗೆ ಬಿದ್ದ.

ಕೌರವ ಸೈನಿಕರು ಶಲ್ಯನ ಸ್ಥಿತಿ ಕಂಡು ಭಯಭೀತರಾಗಿ ಪ್ರಾಣರಕ್ಷಣೆಗೆ ಓಡಿದರು. ದ್ರೋಣರಿಗೆ ನಿರಾಸೆಯಾಯಿತು. ಆದರೂ ಯುಧಿಷ್ಠಿರನನ್ನು ಸೆರೆಹಿಡಿಯಲು ಮತ್ತೆ ಉತ್ಸಾಹವನ್ನು ತುಂಬಿಕೊಂಡು ಪ್ರಯತ್ನಿಸಿದರು. ಪಾಂಡವರ ಕಡೆಯ ಸಾತ್ಯಕಿ, ದೃಷ್ಟದ್ಯುಮ್ನ, ವಿರಾಟ ಮೊದಲಾದವರು ಮೈಯೆಲ್ಲಾ ಕಣ್ಣಾಗಿ ಯುಧಿಷ್ಠಿರನಿಗೆ ಕಾವಲಿದ್ದರು. ಅನೇಕ ಬಾರಿ ಸೆರೆಯಾಗುವ ಅಪಾಯದಿಂದ ಪಾರು ಮಾಡಿದರು. ಅರ್ಜುನನಂತೂ ಎಲ್ಲಿರುತ್ತಿದ್ದನೋ ಅಪಾಯದ ವಾಸನೆ ಹತ್ತಿದ ಕೂಡಲೇ ಮಿಂಚಿನಂತೆ ಬಂದು ಸಿಡಿಲಿನಂತೆ ಎರಗಿ ಅಣ್ಣನನ್ನು ರಕ್ಷಿಸುತ್ತಿದ್ದ.

ಕೌರವರಿಗೆ, ಅರ್ಜುನನ ಬೆಂಬಲ ತಪ್ಪಿಸಿದರೆ ಮಾತ್ರ ಯುಧಿಷ್ಠಿರನನ್ನು ಸೆರೆ ಹಿಡಿಯಲು ಸಾಧ್ಯ. ಅಲ್ಲಿಯವರೆಗೆ ತಮ್ಮ ಪ್ರಯತ್ನ ಫಲಿಸುವುದಿಲ್ಲ. ಆದ್ದರಿಂದ ಅರ್ಜುನನನ್ನು ಹೇಗಾದರೂ ಮಾಡಿ ಅಲ್ಲಿಂದ ದೂರ ಕಳಿಸಬೇಕು ಎಂದು ಯೋಚಿಸಿದರು.



## ಯುದ್ಧದ ಹನ್ನೆರಡನೇ ದಿನ

ಅರ್ಜುನನನ್ನು ಅಲ್ಲಿಂದ ತಪ್ಪಿಸಲು ದುರ್ಯೋಧನ ಯೋಚಿಸುವಾಗ ತ್ರಿಗರ್ತದ ದೊರೆ ಸುಶರ್ಮ ತಾನು ಮತ್ತು ತನ್ನವರು ಅವನಿಗೆ ಸಹಾಯ ಮಾಡಲು ಮುಂದಾದರು. ಅವನು ಒಂದು ಆತ್ಮಾಹುತಿ ದಳವನ್ನು ಕಟ್ಟಿದ. ಈ ದಳದ ಸದಸ್ಯರು ತಮ್ಮ ತಮ್ಮ ಅಂತ್ಯ ಸಂಸ್ಕಾರ ವಿಧಿಗಳನ್ನು (ಘಟಶ್ರಾದ್ಧ) ತಾವೇ ಮಾಡಿಕೊಂಡರು. ಹುಲ್ಲಿನ ಉಡುಪುಗಳನ್ನು ಧರಿಸಿಕೊಂಡರು. ತಾವು ಕೊನೆಯುಸಿರು ಇರುವವರೆಗೂ ಹೋರಾಡುವುದಾಗಿ ಪ್ರತಿಜ್ಞೆ ಮಾಡಿದರು. ಅರ್ಜುನನನ್ನು ಸಾಯಿಸದೆ ಹಿಂತಿರುಗುವುದಿಲ್ಲ "ಮಾಡು ಅಥವಾ ಮಡಿ" ಎಂಬುದೇ ನಮ್ಮ ಧ್ಯೇಯ ಎಂದು ಘೋಷಿಸಿಕೊಂಡರು.

ಪ್ರತಿಜ್ಞೆಕೈಗೊಂಡ ಮೇಲೆ ದಕ್ಷಿಣಾಭಿಮುಖವಾಗಿ ನಡೆದರು. ಅರ್ಜುನ ಇವರ ಬಗ್ಗೆ ಕೇಳಿದ. ಯುಧಿಷ್ಠಿರನನ್ನು ಕಾಪಾಡುವ ಜವಾಬ್ದಾರಿಯನ್ನು ಸತ್ಯಜಿತನಿಗೆ ಒಪ್ಪಿಸಿ ಸಂಶಪ್ತಕರು (ಆತ್ಮಾಹುತಿ ದಳ) ಇದ್ದ ದಿಕ್ಕಿಗೆ ಹೋದ.

ಅರ್ಜುನ ದೂರದಿಂದಲೇ ಅವರನ್ನೂ ನೋಡಿದ. ಪಾನಮತ್ತರಾಗಿ ತೂರಾಡುತ್ತ, ಅರ್ಜುನ ಸತ್ತೇ ಹೋದನೆಂಬಂತೆ ಭಾವಿಸಿ ಸಂಭ್ರಮ ಆಚರಿಸುತ್ತಿದ್ದರು. ಅದನ್ನು ಕೃಷ್ಣನಿಗೆ ತೋರಿಸಿದ.

ಅರ್ಜುನ ಅವರ ಮೇಲೆ ಹಸಿದ ಹುಲಿಯಂತೆ ಎರಗಿ ಒಬ್ಬೊಬ್ಬರನ್ನೇ ಬಲಿ ತೆಗೆದುಕೊಂಡ. ಉಳಿದವರು ಹೆದರಿ ಓಡಲು ನಾಯಕ ಅವರನ್ನು ಹಿಂದಕ್ಕೆ ಕರೆದು ಅವರ ಪ್ರತಿಜ್ಞೆಯನ್ನು ನೆನಪಿಸಿದ.

ಅರ್ಜುನ ಕಿಂಚಿತ್ತೂ ಹೆದರದೆ ತನ್ನ ಗಾಂಡೀವದಿಂದ ತ್ರಿಗರ್ತದ ಸೈನ್ಯದ ಮೇಲೆ ಬಣಗಳ ಮಳೆಗಾರೆದ. ಸೈನ್ಯ ರಕ್ತದ ಮಡುವಿನಲ್ಲಿ ಮುಳುಗಿತು.

ಈ ಕಡೆ ದ್ರೋಣರು ಪಾಂಡವ ಸೈನ್ಯದ ಮೇಲೆ ಬಿದ್ದು ಯುಧಿಷ್ಠಿರನನ್ನು ಹಿಡಿಯಲು ಪ್ರಯತ್ನ ನಡೆಸುತ್ತಲೇ ಇದ್ದ. ದ್ರೋಣರಿಂದಾಗಿ ದ್ರುಪದನ ಸೈನ್ಯ ಅಪಾರ ನಷ್ಟವನ್ನು ಅನುಭವಿಸಿತು. ರಕ್ತದ ಹೊನಲುಗಳು ಹರಿದವು. ದ್ರೋಣರು ಮುತ್ತಿಗೆಯನ್ನು ಮುಂದುವರೆಸಿದರು. ಶತಾನೀಕ. ವಸುಧಾನ ಮತ್ತಿತರರು ದ್ರೋಣರನ್ನು ಎದುರಿಸಿದರೂ ಗೆಲ್ಲಲಾಗಲಿಲ್ಲ.

ಇನ್ನೂ ದ್ರೋಣರಿಗೆ ಯುಧಿಷ್ಠಿರನನ್ನು ಸೆರೆ ಹಿಡಿಯಲು ಆಗಿರಲಿಲ್ಲ. ಕರ್ಣ ದುರ್ಯೋಧನರು, ದ್ರೋಣರು ವಿಫಲವಾಗುತ್ತಿದ್ದುದನ್ನು ನೋಡಿ ಇನ್ನೊಂದು ಬಗೆಯ ಯೋಜನೆಯನ್ನು ಚಿಂತಿಸಿದರು.

ಸಂಶಪ್ತಕರನ್ನು ಸೋಲಿಸಿ ಅರ್ಜುನ ಹಿಂತಿರುಗುವಾಗ ದಾರಿಯಲ್ಲಿ ದುರ್ಯೋಧನ ಭಗದತ್ತನ ನೇತೃತ್ವದಲ್ಲಿ ಕಳಿಸಿದ್ದ ಆನೆ ಸೈನ್ಯ ಎದುರಾಯಿತು.

ಅರ್ಜುನ ಹಿಂತಿರುಗಿದ್ದನ್ನು ನೋಡಿ ಪಾಂಡವ ಸೈನಿಕರಲ್ಲಿ ಉತ್ಸಾಹ ಮರುಕಳಿಸಿತು. ಹೊಸ ಹುರುಪಿನಿಂದ ಪಾಂಡವ ಸೈನ್ಯ ಭಗದತ್ತನ ಸೈನ್ಯದ ಮೇಲೆ ಬಿತ್ತು. ಭಗದತ್ತನಿಗೆ ಈ ಆಕ್ರಮಣವನ್ನು ಎದುರಿಸಲು ಆಗಲಿಲ್ಲ. ಅವನು ಕೆಳಗೆ ಬಿದ್ದ. ಇದರಿಂದ ಕೋಲಾಹಲ ಉಂಟಾಯಿತು. ಆನೆಗಳೂ ಹೆದರಿ ಚಲ್ಲಾಪಿಲ್ಲಿಯಾಗಿ ಓಡಿದವು. ಕೌರವ ಸೈನಿಕರು ಆನೆಗಳ ಕಾಲಡಿಯಲ್ಲಿ ಸಿಕ್ಕಿ ನಜ್ಜು ಗುಜ್ಜಾದರು. ಕುದುರೆಗಳೂ ಪ್ರಾಣ ಕಳೆದುಕೊಂಡವು.

ಭಗದತ್ತ ಹೆದರಲಿಲ್ಲ. ಯುದ್ಧಕ್ಕೆ ಹಿಂತಿರುಗಿದ. ಸುಪ್ರತೀಕ ಎಂಬ ಆನೆಯನ್ನೇರಿ ಬಂದು ಭೀಮನ ಜೊತೆ ಭಯಂಕರವಾಗಿ ಹೋರಾಡಿದ ಭೀಮನಿಗೇ ಸ್ವಲ್ಪ ಕಷ್ಟವೆನಿಸಿತು. ಭಗದತ್ತನಿಂದ ತಪ್ಪಿಸಿಕೊಳ್ಳಲು ಅದೃಶ್ಯನಾದ. ಪಾಂಡವ ಸೈನಿಕರು, ಭೀಮ ಭಗದತ್ತನಿಂದ ಹತನಾದನೆಂದು ಭಾವಿಸಿ. ಭಗದತ್ತನ ಆನೆ ಭೀಮನನ್ನು ಕೊಂದು ಹಾಕಿತು ಎಂದು ಕೂಗಿಕೊಂಡರು. ಕುರುಕ್ಷೇತ್ರದಲ್ಲೆಲ್ಲ ಈ ಕೂಗು ಪ್ರತಿಧ್ವನಿಸಿತು. ಯುಧಿಷ್ಠಿರ ಇದನ್ನು ಕೇಳಿಸಿಕೊಂಡು, ತನ್ನ ಸೈನ್ಯವನ್ನು ಭಗದತ್ತನ ಕಡೆಗೆ ಹೊರಳಿಸಿದ. ಭಗದತ್ತ ಅದನ್ನೂ ಎದುರಿಸಿದ. ಅವನ ಆನೆ ಸಾತ್ಯಕಿಯ ರಥವನ್ನು ತುಳಿದು ಹಾಕಿತು. ಪಾಂಡವ ಸೈನಿಕರಲ್ಲಿ ಗೊಂದಲ ಉಂಟಾಯಿತು.

ಅರ್ಜುನ ಕೃಷ್ಣರು ಕೂಡಲೇ ಅಲ್ಲಿಗೆ ಧಾವಿಸಿ ಭಗದತ್ತನ ಆನೆಗೆ, ಅರ್ಜುನ ಗುರಿಯಿಟ್ಟು ಹೊಡೆದ. ಆನೆಗೆ ತೀವ್ರವಾಗಿ ಬಾಣ ತಗುಲಿ ಅದು ಕುಸಿದು ಕುಳಿತಿತ್ತು. ಭಗದತ್ತ ಎಷ್ಟು ಪ್ರಯತ್ನಿಸಿದರೂ ಮೇಲೇಳಲಿಲ್ಲ. ಆ ಪ್ರಯತ್ನದಲ್ಲಿ ಅರ್ಜುನನ ಬಾಣ ಭಗದತ್ತನನ್ನೂ ಬಲಿ ತೆಗೆದುಕೊಂಡಿತು. ಕೌರವ ಸೈನಿಕರು ಇದರಿಂದ ಚೆಲ್ಲಾಪಿಲ್ಲಿಯಾಗಿ ದಿಕ್ಕು ದಿಕ್ಕಿಗೆ ಓಡಿ ಹೋದರು.



# ಯುದ್ಧದ ಹದಿಮೂರನೇ ದಿನ

ದ್ರೋಣರು ತಮ್ಮ ಮಾತನ್ನು ಉಳಿಸಿಕೊಳ್ಳಲಿಲ್ಲವೆಂದು ದುರ್ಯೋಧನನಿಗೆ ಅಸಮಾಧಾನವಾಯಿತು. ದ್ರೋಣರು ಬೇಕೆಂದೇ ಯುಧಿಷ್ಠಿರನನ್ನು ಹಿಡಿಯುತ್ತಿಲ್ಲವೆಂದು ಭಾವಿಸಿದ. ಬೇಕಂತಲೇ ಸೆರೆ ಹಿಡಿಯುವುದನ್ನು ಮುಂದೂಡುತ್ತಿದ್ದಾನೆಂದು ಊಹಿಸಿದ. ದ್ರೋಣರನ್ನು ಆಕ್ಷೇಪಿಸಿ ಮಾತನಾಡಿದ.

ದ್ರೋಣರಿಗೆ ಇದರಿಂದ ಅವಮಾನವಾಯಿತು. ಅವರು ದುರ್ಯೋಧನನಿಗೆ ಹೀಗೆಂದರು. "ದುರ್ಯೋಧನ ಯಾವಾಗಲೂ ಆಡಿಕೊಳ್ಳುವುದೇ ನಿನ್ನ ಕೆಲಸವಾಯಿತು. ಎಷ್ಟೇ ಪ್ರಾಮಾಣಿಕವಾಗಿ ನಿನಗಾಗಿ ದುಡಿದರೂ ನಿನಗೆ ನಂಬಿಕೆ ಬರುವುದಿಲ್ಲ. ಅರ್ಜುನನ ರಕ್ಷಣೆ ದೊರೆಯುವವರೆಗೆ ಯುಧಿಷ್ಠಿರನನ್ನು ಸೆರೆ ಹಿಡಿಯಲು ಸಾಧ್ಯವಿಲ್ಲ. ಆದರೂ ಮತ್ತೊಮ್ಮೆ ಪ್ರಯತ್ನಿಸೋಣ. ಈಗ ನೀನು ಸುಮ್ಮನೆ ಹೋಗು" ಎಂದು.

ಹದಿಮೂರನೇ ದಿನ ಮತ್ತೆ ಅರ್ಜುನನಿಗೆ ಸಂಶಪಕ್ತರನ್ನು ಎದುರಿಸಬೇಕಾಯಿತು. ದ್ರೋಣರು ಈ ಅವಕಾಶವನ್ನು ಉಪಯೋಗಿಸಿಕೊಂಡು ಪದ್ಮವ್ಯೂಹವನ್ನು ರಚಿಸಿದರು. ಪಾಂಡವರ ಕಡೆ ಯಾರಿಗೂ ತಿಳಿದಿರಲಿಲ್ಲ. ಅವರೆಲ್ಲ ಚಿಂತಿತರಾದರು. ಪಾಂಡವರ ಮೇಲೆ ಸೇಡು ತೀರಿಸಿಕೊಳ್ಳುವಂತೆನಿಸಿತು. ಭೀಮ, ದ್ರುಪದ, ವಿರಾಟ, ಘಟೋತ್ಕಚ ಮತ್ತು ಇನ್ನೂ ಇತರರು ಯುಧಿಷ್ಠಿರನ ರಕ್ಷಣೆಗೆ ಇದ್ದರಾದರೂ ದ್ರೋಣರ ಆಘಾತವನ್ನು ತಡೆದುಕೊಳ್ಳಲು ಆಗಲಿಲ್ಲ.

ಅಭಿಮನ್ಯುವಂತು ಹುಲಿಮರಿಯಂತೆ ಸಣ್ಣವನಾದರೂ ಬಹಳ ಪೌರುಷದಿಂದ ಹೋರಾಡಿದ. ದೊಡ್ಡಪ್ಪ, ಚಿಕ್ಕಪ್ಪಂದಿರ ಚಿಂತೆಯನ್ನು

ಗಮನಿಸಿದ. ತಾನಾಗಿ ಅವರ ಬಳಿಗೆ ಹೋಗಿ ಪದ್ಮವ್ಯೂಹವನ್ನು ತಾನು ಭೇದಿಸಿ ಒಳಗೆ ಹೋಗುತ್ತೇನೆಂದ. ತಂದೆಯಿಂದ ಇದು ತನಗೆ ತಿಳಿದಿದೆ. ಆದರೆ ಅದರಿಂದ ಹೊರ ಬರುವುದು ಮಾತ್ರ ತಿಳಿದಿಲ್ಲವೆಂದ. ಯುಧಿಷ್ಠಿರನಿಗೆ ಇದರಿಂದ ಸಂತೋಷವೂ ಆಯಿತು. ಭಯವೂ ಆಯಿತು. ತಂದೆಯಿಲ್ಲದ ಸಮಯದಲ್ಲಿ ಅವನು ವ್ಯೂಹ ಪ್ರವೇಶಿಸಿ ಏನಾದರೂ ದುರಂತ ಸಂಭವಿಸಿದರೆ! ಎಂದು ಹೆದರಿಸಿದರು. ಅಭಿಮನ್ಯು ಭೇದಿಸಿ ಒಳಹೊಕ್ಕು ತಾವೂ ಹಿಂಬಾಲಿಸಿ ಬರಲು ದಾರಿ ಮಾಡಿಕೊಡುವಂತೆ ಹೇಳಿದರು. ಅಭಿಮನ್ಯು ಅವರೆಲ್ಲರ ಆಶೀರ್ವಾದದಿಂದ ರಥವೇರಿ ವ್ಯೂಹದ ಕಡೆಗೆ ನಡೆದ. ಅವನ ರೂಪ, ರೀತಿ ಥೇಟ್ ಅರ್ಜುನನನ್ನೇ ಹೋಲುತ್ತಿದ್ದವು.

ವ್ಯೂಹದ ಕಡೆಗೆ ನಡೆದು ಬಾಣಗಳಿಂದ ಅದನ್ನು ಭೇದಿಸುತ್ತ, ಶತ್ರುಗಳನ್ನು ಬಲಿ ತೆಗೆದುಕೊಳ್ಳುತ್ತ ಮುನ್ನುಗ್ಗಿದ. ಭಯದಿಂದ ಸೈನಿಕರು ದೂರ ದೂರವೇ ನಿಂತರು.

ಜಯದ್ರಥ, ಧೃತರಾಷ್ಟ್ರನ ಅಳಿಯ ಅನಿರೀಕ್ಷಿತವಾಗಿ ಧಾವಿಸಿ ತೆರೆದಿದ್ದ ದಾರಿಯನ್ನು ಮುಚ್ಚಿ ಬಿಟ್ಟ. ಇದರಿಂದ ಪಾಂಡವರ ಕಡೆಯವರು ಯಾರೂ ಬರಲಾಗಲಿಲ್ಲ. ಅಭಿಮನ್ಯು ಸಾಹಸದಿಂದಲೇ ಹೋರಾಡುತ್ತಿದ್ದರೂ ಏಕಾಂಗಿಯಾಗಿದ್ದ. ವ್ಯೂಹದ ಬಲೆಯಲ್ಲಿ ಸಿಕ್ಕಿ ಬಿದ್ದಿದ್ದ, ನೇರಾಗಿ ವೀರರನ್ನೆಲ್ಲಾ ಭೇದಿಸಿ, ಕೊಲ್ಲುತ್ತಿದ್ದ. ಕೌರವ ಸೇನೆಗೆ ಅಪಾರ ನಷ್ಟವನ್ನು ಉಂಟು ಮಾಡಿದ. ಸೈನ್ಯಕ್ಕಾಗುತ್ತಿದ್ದ ನಷ್ಟವನ್ನು ನೋಡಿ ಕೃಪ, ದ್ರೋಣ, ಅಶ್ವತ್ಥಾಮ, ಕರ್ಣ, ಶಕುನಿ, ಶಲ್ಯ ಎಲ್ಲರೂ ಒಟ್ಟಾಗಿ ಅವನನ್ನು ಮುತ್ತಿದರು. ಅಭಿಮನ್ಯು ಏಕಾಂಗಿಯಾಗಿ ಬಹಳ ಹೊತ್ತು ಹೋರಾಡಿದ. ತನ್ನ ಅಸಾಧಾರಣ ಸಾಮರ್ಥ್ಯವನ್ನು ಪ್ರದರ್ಶಿಸಿದ. ಶತ್ರುಗಳು ಅವನ ಪೌರುಷವನ್ನು ಮೆಚ್ಚಿದರು. ಆದರೆ ಎಳೆಯನೂ ಏಕಾಂಗಿಯೂ ಆದ ಅವನನ್ನು ದ್ರೋಣ, ಕೃಪರಂಥ ಮಹಾ ಸಾಹಸಿಗಳು ಅನ್ಯಾಯವಾಗಿ ಅವನ ಅಸಹಾಯಕತೆಯ ಪ್ರಯೋಜನ ಪಡೆದು ಹಿಂದಿನಿಂದ ಆಕ್ರಮಣ ಮಾಡಿ ಕೊಂದೇ ಬಿಟ್ಟರು. ಶಸ್ತ್ರ ಸಹಾಯ, ಮನುಷ್ಯ ಸಹಾಯ ಯಾವುದೂ ದೊರೆಯದೆ ಸತ್ತು ಬಿದ್ದ. ಅವನನ್ನು ಸಾಯಿಸುವಲ್ಲಿ ಜಯದ್ರಥನದೇ ಮುಖ್ಯ ಕೈವಾಡವಾಗಿತ್ತು.

ಅಭಿಮನ್ಯುವಿನ ಸಾವು ಕೌರವ ಸೈನ್ಯದಲ್ಲಿ ಸಂತೋಷೋತ್ಸಾಹಗಳನ್ನು ತುಂಬಿತು. ಕೌರವ ಶಿಬಿರಗಳಲ್ಲಿ ಹಬ್ಬವನ್ನು ಆಚರಿಸಿದರು.

ಅರ್ಜುನ ತ್ರಿಗರ್ತದ ಸೈನ್ಯವನ್ನು ನಾಶ ಮಾಡಿ ಸಂಜೆಗೆ ಶಿಬಿರಕ್ಕೆ



ಹಿಂತಿರುಗಿದ. ಬರುತ್ತಿದ್ದಂತೆ ಅಭಿಮನ್ಯುವಿನ ಸಾವು ಅವನನ್ನು ಆಘಾತಗೊಳ್ಳುವಂತೆ ಮಾಡಿತು. ಅವನ ಕೋಪಕ್ಕೆ ಮಿತಿಯಿಲ್ಲವಾಯಿತು. ಮಗನ ಸಾವಿನ ದುಃಖಾತಿರೇಕದಿಂದ ಹುಚ್ಚನಂತಾಗಿದ್ದ. ಯಾರು ತನ್ನ ಮಗನ ಸಾವಿಗೆ ಕಾರಣರೋ ಅವರನ್ನು ನಾಳೆ ಸೂರ್ಯಾಸ್ತವಾಗುವುದರೊಳಗೆ ಕೊಲ್ಲುತ್ತೇನೆ. ಇಲ್ಲವಾದಲ್ಲಿ ಅಗ್ನಿ ಪ್ರವೇಶ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿದ.

ಜಯದ್ರಥ ಪ್ರತಿಜ್ಞೆಯನ್ನು ಕೇಳಿಸಿಕೊಂಡು ಹೆದರಿದ. ದುರ್ಯೋಧನನ ಬಳಿಗೆ ಓಡಿ ತನ್ನನ್ನು ರಕ್ಷಿಸಬೇಕೆಂದು ಕೇಳಿಕೊಂಡ. ದುರ್ಯೋಧನ ಅವನಿಗೆ ಸಮಾಧಾನ ಹೇಳಿ, ಅವನ ರಕ್ಷಣೆ ಮಾಡುವುದಾಗಿ ಭರವಸೆ ಕೊಟ್ಟ.



# ಯುದ್ಧದ ಹದಿನಾಲ್ಕನೇ ದಿನ

ಮಾತಿನಂತೆ ಜಯದ್ರಥನನ್ನು ಸುರಕ್ಷಿತ ಸ್ಥಳದಲ್ಲಿ ಇರಿಸಲಾಗಿತ್ತು. ಅವನ ರಥದ ಸುತ್ತ ಮಹಾಪರಾಕ್ರಮಶಾಲಿ ಯೋಧರು ಕಾವಲಿದ್ದರು. ಯಾರಿಗೂ ಪ್ರವೇಶಿಸುವುದು ಸುಲಭವಿರಲಿಲ್ಲ. ಸ್ವತಃ ದ್ರೋಣರೇ ಅವನ ರಕ್ಷಣೆಗೆ ನಿಂತರು. ಅರ್ಜುನ ದ್ರೋಣರ ಬಳಿಗೆ ಹೋಗಿ ಜಯದ್ರಥನಿರುವ ಸ್ಥಳವನ್ನು ವಿಚಾರಿಸಿದ ದ್ರೋಣರು ಸ್ವಲ್ಪವೂ ಪಾಪಪ್ರಜ್ಞೆಯಿಲ್ಲದೆ, "ಅರ್ಜುನಾ ನಾನಿರುವವರೆಗೂ ಜಯದ್ರಥನ ಕೂದಲು ಕೊಂಕಲು ಬಿಡುವುದಿಲ್ಲ. ಅವನು ನನ್ನ ರಕ್ಷಣೆಯಲ್ಲಿದ್ದಾನೆ. ನೀನು ಹೋಗಲೇಬೇಕೆಂದರೆ ಮೊದಲು ನನ್ನನ್ನು ಗೆಲ್ಲು" ಎಂದರು.

ತನ್ನ ಗುರುಗಳೊಂದಿಗೆ ವಾದಕ್ಕೆ, ಯುದ್ಧಕ್ಕೆ ನಿಲ್ಲಲು ಇಷ್ಟಪಡಲಿಲ್ಲ. ಆದರೆ ಕೆಲ ಕ್ಷಣಗಳ ನಂತರ ಕ್ಷಾತ್ರಧರ್ಮದ ನೆನಪಾಯಿತು. ಕೂಡಲೇ ಯುದ್ಧ ಮಾಡಲು ಸಿದ್ಧನಾದ.

ದ್ರೋಣ, ಅರ್ಜುನರು ವೀರಾವೇಶದಿಂದ ಹೋರಾಡಿದರು. ಅಷ್ಟರಲ್ಲಿ ಸಂಜೆಯಾಗುತ್ತಿರುವ ಸೂಚನೆಗಳು ಕಾಣಿಸಿದವು. ಕೃಷ್ಣ, ಅರ್ಜುನನನ್ನು ಎಚ್ಚರಿಸಿದ. ಗುರುಗಳ ಮುಂದೆ ಶಕ್ತಿ ಪ್ರದರ್ಶನಕ್ಕೆ ಇದು ಸಮಯವಲ್ಲ ಎಂದು ಹೇಳಿ ರಥವನ್ನು ಬೇರೆಡೆಗೆ ತಿರಿಗಿಸಿದ. ಭದ್ರವಾದ ರಕ್ಷಣೆಯಲ್ಲಿದ್ದ ಜಯದ್ರಥನನ್ನು ಹೇಗಾದರೂ ತಲುಪಿ ಕೊಲ್ಲಲೇಬೇಕಿತ್ತು. ಆದ್ದರಿಂದ ಅವನ ಕಾವಲಿನ ಯೋಧರನ್ನು ಒಬ್ಬೊಬ್ಬರನ್ನಾಗಿ ಕೊಲ್ಲುತ್ತಾ ಹೋದ. ಆದರೆ ಜಯದ್ರಥ ಕೈಗೆ ಸಿಗಲಿಲ್ಲ. ಅವನನ್ನು ಹೇಗಾದರೂ ಕೊಲ್ಲಲೇಬೇಕೆಂದು ಮುಂದಕ್ಕೆ ಸಾಗುತ್ತಿರುವಷ್ಟರಲ್ಲಿ ದ್ರೋಣರು ಮತ್ತೆ ಬಂದು ಅವನ ದಾರಿಗೆ ಅಡ್ಡವಾದರು. ಸೂರ್ಯಾಸ್ತದವರೆಗೆ ಜಯದ್ರಥನನ್ನು ರಕ್ಷಿಸಿದರೆ ಸಾಕೆಂದು ಸೂರ್ಯಾಸ್ತಕ್ಕೆ ಕಾಯುತ್ತಿದ್ದರು.

ಕೃಷ್ಣನಿಗೆ ಚಿಂತೆಯಾಯಿತು. ಸೂರ್ಯಾಸ್ತವಾಗಿ ಬಿಟ್ಟರೆ ಅರ್ಜುನ ಪ್ರಾಣದಿಂದ ಇರುವುದಿಲ್ಲ. ಅದಕ್ಕಾಗಿ ಏನಾದರೂ ಉಪಾಯ ಮಾಡಬೇಕೆಂದು ಯೋಚಿಸಿದ.

ಅಷ್ಟರಲ್ಲೇ ಮೋಡ ಕವಿಯಿತು. ಕತ್ತಲಾಯಿತು. ಸಂಜೆಯಾಯಿತೆಂಬ ಸೂಚನೆ ದೊರೆತದ್ದೇ ಕೌರವ ಸೈನ್ಯದಲ್ಲಿ ಸಂತಸ ಗೆಲುವುಗಳು ಕಾಣಿಸಿಕೊಂಡವು. ಇನ್ನೇನು ಅರ್ಜುನ ಅಗ್ನಿ ಪ್ರವೇಶ ಮಾಡಿ ಪ್ರಾಣ ಕಳೆದುಕೊಂಡರೆ ಪಾಂಡವರನ್ನು ಗೆಲ್ಲುವುದು ಯಾವ ಲೆಕ್ಕ ಎಂದುಕೊಂಡು ಆಗಲೇ ಗೆದ್ದವರಂತೆ ಕಾಣಿಸಿಕೊಂಡರು.

ಜಯದ್ರಥ ಹೊರಗೆ ಬಂದು ನಿರ್ಭಯವಾಗಿ ಓಡಾಡಿದ. ಕೃಷ್ಣ ಅರ್ಜುನನಿಗೆ ಅವನನ್ನು ತೋರಿಸಿ ಹೊಡೆ ಎಂದ. ಅರ್ಜುನ ಒಪ್ಪಲಿಲ್ಲ. ಮಾತಿನಂತೆ ಸೂರ್ಯಾಸ್ತವಾಗಿರುವುದರಿಂದ ತನಗೆ ಸಾವೇ ಶರಣು ಎಂದ. ಕೃಷ್ಣ ಒತ್ತಾಯ ಮಾಡಿದ. ಅರ್ಜುನ ಬಿಲ್ಲಿಗೆ ಬಾಣವೇರಿಸುತ್ತಿದ್ದಂತೆಯೇ ಕತ್ತಲು ಸರಿದು ಇನ್ನೂ ಬೆಳಕಿದ್ದುದು ಸ್ಪಷ್ಟವಾಗಿತ್ತು.

ಜಯದ್ರಥನ ಮೇಲೆ ಬಾಣ ಪ್ರಯೋಗ ಮಾಡಿ ಅವನ ತಲೆ ಹಾರಿಸಿದ. ಕೌರವನ ಸೈನ್ಯ ಈ ವಿಚಿತ್ರವನ್ನು ನೋಡಿ ಹೌಹಾರಿದರು.

ಕೃಷ್ಣ ಜಯ ಕಹಳೆ ಮೊಳಗಿಸಿದ. ಪಾಂಡವರು ಮತ್ತವನ ಸೈನಿಕರು ಈ ಮೊಳಗನ್ನು ಕೇಳಿಸಿಕೊಂಡು ಗೆಲುವಾದರು.

ನಂತರ ಅರ್ಜುನನಿಗೆ, ಕೃಷ್ಣ ಎಲ್ಲವನ್ನೂ ವಿವರಿಸಿ, ತಾನೇ ಸೂರ್ಯಾಸ್ತದ ಭ್ರಮೆಯನ್ನು ಉಂಟು ಮಾಡಿದ ವಿಷಯ ತಿಳಿಸಿದ.

ಘಟೋತ್ಕಚ ತನ್ನ ಸೈನ್ಯದೊಂದಿಗೆ ಯುದ್ಧವನ್ನು ಆರಂಭಿಸಿದ. ಅವರು ರಾಕ್ಷಸರಾಗಿದ್ದುದರಿಂದ ರಾತ್ರಿಯ ಸಮಯದಲ್ಲಿ ಅವರಿಗೆ ಹೆಚ್ಚಿನ ಬಲವಿರುತ್ತಿತ್ತು. ಕೌರವ ಸೇನೆಯ ಮೇಲೆ ತಮ್ಮ ಮಾಯಾ ವಿದ್ಯೆಯನ್ನು ಪ್ರಯೋಗಿಸಿದರು. ಇದರಿಂದ ಅವರಿಗೆ ಇದನ್ನು ಹೇಗೆ ಪ್ರತಿರೋಧಿಸಬೇಕೋ ತಿಳಿಯದೆ ಗೊಂದಲಗೊಂಡಿದ್ದರು. ಯುದ್ಧ ತಂತ್ರಗಳು ಸೋಲುತ್ತಿದ್ದವು.

ಅವರ ಮಾಯಾ ವಿದ್ಯೆಯನ್ನು ಪ್ರತಿಬಂಧಿಸಲು ಕರ್ಣನೇ ಯುದ್ಧ ಭೂಮಿಗೆ ಬಂದ. ದುರ್ಯೋಧನ ಮತ್ತು ಇತರ ಕೌರವ ಸೇನಾನಾಯಕರ ವಿನಂತಿಯ ಮೇರೆಗೆ ಘಟೋತ್ಕಚನನ್ನು ಎದುರಿಸಲು ನಿಂತ. ಅವನೊಡನೆ ಸಾಕಷ್ಟು ಸಮಯ ಭಯಂಕರವಾಗಿ ಹೋರಾಡಿದ. ಯುದ್ಧ ಕೌಶಲ್ಯಗಳನ್ನೆಲ್ಲ ಉಪಯೋಗಿಸಿದ. ಆದರೂ ಘಟೋತ್ಕಚನದೇ ಮೇಲುಗೈಯಾಗಿತ್ತು. ಕರ್ಣನಿಗೆ ಬೇರೆ ದಾರಿ ಇಲ್ಲದೆ ದಿವ್ಯಾಸ್ತ್ರವನ್ನು ಪ್ರಯೋಗಿಸಲು ನಿರ್ಧರಿಸಿದ. ಸಮಯ ನೋಡಿ ಆ ಅಸ್ತ್ರದಿಂದ ಘಟೋತ್ಕಚನನ್ನು ಹೊಡೆದು ಉರುಳಿಸಿದ. ದೈತ್ಯಾಕಾರದ ಘಟೋತ್ಕಚನ ದೇಹ ಬೀಳುತ್ತಿದ್ದಂತೆ ಅನೇಕ ಮಂದಿ ಅದರ ಕೆಳಗೆ ಸಿಕ್ಕು ಜಜ್ಜಿ ಹೋದರು. ದೇಹಗಳನ್ನು ಗುರುತಿಸಲೂ ಸಾಧ್ಯವಾಗದಷ್ಟು ನುಜ್ಜುಗುಜ್ಜಾಗಿದ್ದವು.

ಘಟೋತ್ಕಚನ ಸಾವಿನಿಂದ ಅರ್ಜುನನಿಗೆ ದುಃಖವಾಯಿತು. ಆದರೆ ಕೃಷ್ಣನಿಗೆ ಸಂತೋಷವಾಯಿತು. ಘಟೋತ್ಕಚನನ್ನು ಸಾಯಿಸಲು ಕರ್ಣ ತನ್ನಲ್ಲಿದ್ದ ದಿವ್ಯಾಸ್ತ್ರವನ್ನು ಉಪಯೋಗಿಸಿ ಬಿಟ್ಟಿದ್ದರಿಂದ ಅರ್ಜುನ ಸುರಕ್ಷಿತನಾದ ಎಂಬುದೇ ಕೃಷ್ಣನ ಸಂತೋಷಕ್ಕೆ ಕಾರಣವಾಗಿತ್ತು.

ಯುಧಿಷ್ಠಿರನನ್ನು ಸೆರೆಹಿಡಿಯಲು ಆಗದಿದ್ದುದಕ್ಕಾಗಿ ದ್ರೋಣರಿಗೆ ತಮ್ಮ ಮೇಲೇ ಸಿಟ್ಟು ಬರುತ್ತಿತ್ತು. ಜೊತೆಗೆ ಮಾತು ಮಾತಿಗೂ ದುರ್ಯೋಧನ ತಮ್ಮ ಅಸಮರ್ಥತೆಯನ್ನು ಎತ್ತಿ ತೋರಿಸಿ ಹಂಗಿಸುತ್ತಿದ್ದ. ಪ್ರತಿ ಸಲದ ಸೋಲಿಗೂ ಭೀಷ್ಮರನ್ನು ಮತ್ತು ತಮ್ಮನ್ನು ಪಾಂಡವ ಪಕ್ಷಪಾತಿಯೆಂಬ ಕಾರಣವನ್ನೇ ಮುಂದಿಡುತ್ತಿದ್ದ.

ಈ ಸಲವೂ ಅದೇ ಆಯಿತು. ದುರ್ಯೋಧನ ದ್ರೋಣರಿಗೆ ಹೇಳಿದ. "ಗುರುಗಳೇ ನೀವು ಎಷ್ಟು ದೊಡ್ಡ ಯೋಧರೆಂಬುದನ್ನು ನಾನು ಗಮನಿಸುತ್ತಿದ್ದೇನೆ. ಜಯದ್ರಥನನ್ನೇ ನಿಮ್ಮಂಥವರಿಗೆ ಕಾಪಾಡಲು ಸಾಧ್ಯವಾಗಲಿಲ್ಲ. ಕಾರಣ ನನಗೆ ತಿಳಿದದ್ದೇ! ನೀವು ಪಾಂಡವರ ವಿಚಾರದಲ್ಲಿ ಬಹಳ ಮೆದು ಮನಸ್ಸುಳ್ಳವರು.

ಈ ಹಿರಿಯ ವಯಸ್ಸಿನಲ್ಲಿಯೂ ದುರ್ಯೋಧನನ ನಿಂದೆಯನ್ನು ಸಹಿಸಿಕೊಳ್ಳಬೇಕಾಯಿತು. ದುರ್ಯೋಧನನಿಗಾಗಿ ಎಷ್ಟು ದಿನದಿಂದ ಯುದ್ಧ

ಮಾಡುತ್ತಲೇ ಇದ್ದರು. ಇಷ್ಟಾದರೂ ಅವನಿಗೆ ಕೃತಜ್ಞತೆ ಇಲ್ಲವಲ್ಲ! ಎಂದು ಬೇಸರಪಟ್ಟುಕೊಂಡರು. ಮತ್ತು ಅವನಿಗೆ ಹೇಳಿದರೂ ಕೂಡ, "ದುರ್ಯೋಧನ ನನ್ನನ್ನು ದೂರುವುದರಲ್ಲಿ ಅರ್ಥವಿಲ್ಲ. ಪಾಂಡವರ ಬಗ್ಗೆ ಪ್ರೀತಿ ಇರುವುದರಿಂದ ನಾನು ಯುದ್ಧ ಮಾಡುತ್ತಿಲ್ಲವೆಂಬುದು ನಿನ್ನ ಅಭಿಪ್ರಾಯವೇ? ನಿನ್ನ ಆಲೋಚನೆಗಳಿಗೆ ಆಧಾರವೇ ಇಲ್ಲ. ನೀನು ಯಾರೊಂದಿಗೆ ಯುದ್ಧ ಮಾಡುತ್ತಿದ್ದೀಯೆಂಬುದನ್ನು ಮರೆತಿರುವೆ. ಕೃಷ್ಣನ ಸಹಾಯದಲ್ಲಿರುವ ಅರ್ಜುನನನ್ನು ಗೆಲ್ಲಲು ಸಾಧ್ಯವೇ ಇಲ್ಲ. ಇದನ್ನು ನಾನು ನಿನಗೆ ಹೇಳಬೇಕಾಗಿಲ್ಲ. ಅನೇಕ ಸಂದರ್ಭಗಳಲ್ಲಿ ನಿನಗೇ ಅನುಭವವಾಗಿದೆ" ಎಂದು ಹೇಳಿ ಅಲ್ಲಿಂದ ಹೊರಟು ಸೈನ್ಯವಿದ್ದಡೆ ಸೇರಿದರು.

ದ್ರೋಣರು ಬದುಕಿದ್ದು ಹೋರಾಟ ಮುಂದುವರೆಸುತ್ತಿರುವವರೆಗೆ ಪಾಂಡವರಿಗೆ ಜಯವು ಸಾಧ್ಯವಿಲ್ಲ. ಬೇರೆ ಏನಾದರೂ ಉಪಾಯವನ್ನು ಆಲೋಚಿಸಬೇಕು. ದ್ರೋಣರಿಗೆ ದುಃಖಾತಿರೇಕದಿಂದ ಚೇತರಿಸಿಕೊಳ್ಳಲಾಗದ ಸ್ಥಿತಿಯನ್ನು ಉಂಟು ಮಾಡಬೇಕು. ಅಂತಹ ಸುದ್ದಿ ಅಶ್ವತ್ಥಾಮನ ಸಾವೊಂದೇ ತೀರ ಸಂದಿಗ್ಧ ಸಮಯದಲ್ಲಿ ಅಶ್ವತ್ಥಾಮನ ಸಾವಿನ ಸುದ್ದಿಯನ್ನು ದ್ರೋಣರಿಗೆ ಕೇಳಿಸಬೇಕು. ಅದೂ ಧರ್ಮರಾಯ ಅಥವಾ ಯುಧಿಷ್ಠಿರನಿಂದಲೇ ಆಗಬೇಕು ಎನಿಸಿ ಯುಧಿಷ್ಠಿರನಿಗೆ ಕೃಷ್ಣ ಎಲ್ಲವನ್ನು ವಿವರಿಸಿ ತಿಳಿಸಿದ. "ಯುಧಿಷ್ಠಿರ ನನಗೆ ಗೊತ್ತು ನೀನು ಎಂದಿಗೂ ಸುಳ್ಳು ಹೇಳಲಾರೆ. ಅದಕ್ಕೆಂದೇ ನೀನು ಅಶ್ವತ್ಥಾಮ ಎಂಬ ಆನೆ ಸತ್ತು ಹೋಯಿತು ಎಂದಷ್ಟೇ ಹೇಳು. ನಾನು ಉಳಿದದ್ದನ್ನು ನೋಡಿಕೊಳ್ಳುತ್ತೇವೆ" ಎಂದು ಉಪಾಯವನ್ನು ಸೂಚಿಸಿದ.

ಕೃಷ್ಣನ ಸಲಹೆಯಂತೆ ಭೀಮ ಅಶ್ವತ್ಥಾಮ ಎಂಬ ಆನೆಯನ್ನು ಕೊಂದು, "ಅಶ್ವತ್ತಾಮ ಸತ್ತ.... ಅಶ್ವತ್ಥಾಮ ಸತ್ತ" ಎಂದು ಕಿರುಚುತ್ತಾ ಓಡಿಬಂದ.

ಯುಧಿಷ್ಠಿರನೂ ಇದನ್ನು ಪುನರುಚ್ಚರಿಸಿದ. ಆದರೆ ಜೊತೆಗೆ ಆನೆ ಎಂಬ ಪದವನ್ನು ಸೇರಿಸಿ ಹೇಳಿದಾಗ, ಜೋರಾಗಿ ಕಹಳೆ ಸದ್ದಾಗಿ ಆನೆ ಎಂಬ ಪದ ಕೇಳಿಸಲಿಲ್ಲ.

ದ್ರೋಣರು ಭೀಮನು ಕೂಗಿ ಹೇಳಿದಾಗ ನಂಬಿದಂತೆ ಕಾಣಲಿಲ್ಲ. ಆದರೆ ಯಾವಾಗ ಯುಧಿಷ್ಠಿರನೂ ಅದೇ ಮಾತನ್ನು ಉಚ್ಚರಿಸಿದನೋ, ದ್ರೋಣರಿಗೆ ನಂಬದೆ ಇರಲು ಸಾಧ್ಯವಾಗಲಿಲ್ಲ. ಅಯ್ಯೋ ಅಶ್ವತ್ಥಾಮ ಎಂದು ದುಃಖದಿಂದ ಹೇಳುತ್ತಾ ಕೆಳಗೆ ಬಿದ್ದರು. ಅವರ ಶಕ್ತಿಯೆಲ್ಲ ಕರಗಿ ಹೋದಂತೆ ಭಾಸವಾಯಿತು. ಈ ಅವಕಾಶವನ್ನು ಉಪಯೋಗಿಸಿಕೊಂಡು ದೃಷ್ಟದ್ಯುಮ್ನ ಬಾಣದ ಮಳೆಗೆರೆದ. ದ್ರೋಣರ ದೇಹವೆಲ್ಲಾ ಬಾಣಗಳಿಂದ ತುಂಬಿ ಹೋಯಿತು. ದೃಷ್ಟದ್ಯುಮ್ನ ಇದಿಷ್ಟೇ ಸಾಲದೆಂಬಂತೆ ತನ್ನ ಖಡ್ಗದಿಂದ ದ್ರೋಣರ ತಲೆಹಾರಿಸಿ, ಸೇಡು ತೀರಿಸಿಕೊಂಡ.

ದ್ರೋಣರ ಸಾವಿನ ಸುದ್ಧಿ ಕೌರವ ಸೈನ್ಯದಲ್ಲಿ ಭಯಂಕರ ಕಂಪನವನ್ನುಂಟು ಮಾಡಿತು. ಪಾಂಡವ ಸೈನ್ಯ ಕೌರವ ಸೈನ್ಯದ ಮೇಲೆ ಮಾರಣ ಹೋಮ ನಡೆಸಿತು. ರಣಕ್ಷೇತ್ರದಲ್ಲಿ ಭಯಂಕರ ವಾತಾವರಣ ಕವಿಯಿತು. ಎಲ್ಲಿ ನೋಡಿದರೂ ಹೆಣಗಳ ರಾಶಿ. ಮುರಿದು ಬಿದ್ದ ರಥಗಳು, ಶಸ್ತ್ರಾಸ್ತ್ರಗಳು! ರಕ್ತದ ಹೊನಲುಗಳು. ಹಾಹಾಕಾರ, ಚೀತ್ಕಾರಗಳು! ನೋಡುವವರಿಗೆ ತಲ್ಲಣವುಂಟಾಗುತ್ತಿತ್ತು.



## ಯುದ್ಧದ ಹದಿನೈದನೇ ದಿನ

ದ್ರೋಣರ ಸಾವಿನ ನಂತರ ಕರ್ಣನನ್ನು ಸೇನಾಪತಿಯಾಗಿ ನೇಮಿಸಲಾಯಿತು. ಶಲ್ಯ ಕರ್ಣನ ಸಾರಥ್ಯವನ್ನು ವಹಿಸಿಕೊಂಡ. ಕರ್ಣ ಸೈನ್ಯವನ್ನು ನಡೆಸಿಕೊಂಡು ರಣಭೂಮಿ ಪ್ರವೇಶಿಸಿದ.

ಕರ್ಣ ಬರುವುದನ್ನು ಅರ್ಜುನ ನೋಡಿದ. ಇದು ಬಹಳ ಒಳ್ಳೆ ಅವಕಾಶ ಎನಿಸಿತು. ಕರ್ಣನನ್ನು ದ್ವಂದ್ವಯುದ್ಧಕ್ಕೆ ಆಹ್ವಾನಿಸಬಹುದು ಎಂದುಕೊಂಡ.

ಭೀಮ, ದುಶ್ಯಾಸನರು ಯುದ್ಧ ಭೂಮಿಯ ಮತ್ತೊಂದು ಕಡೆ ಸೆಣಸಾಟಕ್ಕೆ ಇಳಿದಿದ್ದರು. ಹಸಿದ ಹುಲಿಗಳಂತೆ ಒಬರ್ಬ ಮೇಲೊಬ್ಬರು ಬಿದ್ದರು. ಜಿದ್ದಿನಿಂದ ಹೋರಾಡಿದರು. ಒಬ್ಬರನ್ನೊಬ್ಬರು ಮುಗಿಸಿಯೇ ಬಿಡಬೇಕೆಂದು ತೀರ್ಮಾನಿಸಿದಂತಿತ್ತು. ಭೀಮ ಅಬ್ಬರಿಸಿ, "ನೀಚ ದುಶ್ಯಾಸನ ನಿನ್ನನ್ನು ಮುಗಿಸಿ ಬಿಡುವ ಸಮಯ ಬಂದಿದೆ. ನಿನ್ನ ಪಾಪದ ಕೊಡ ತುಂಬಿತು. ನಿನಗೊಂದು ಪಾಠವನ್ನು ಕಲಿಸದೆ ಬಿಡುವುದಿಲ್ಲ. ದ್ರೌಪದಿಯ ಸೀರೆಗೆ ಹಾಕಿದ ಕೈಗಳು ಇವೇ ತಾನೇ?" ಎಂದು ಹೇಳುತ್ತಾ ದುಶ್ಯಾಸನನ ಕೈಗಳ ಮೇಲೆ ಬಲವಾಗಿ ಹೊಡೆದು ಮುರಿದು ಕಳಚಿ ಬಿಸಾಡಿದ. ದುಶ್ಯಾಸನನ ಮುರಿದ ಕೈಗಳ ಎಡೆಯಿಂದ ಒಂದೇ ಸಮನೆ ರಕ್ತ ಉಕ್ಕುಕ್ಕಿ ಹರಿಯಿತು. ಭೀಮ ಇಲ್ಲಿಗೇ ನಿಲ್ಲಿಸಲಿಲ್ಲ. ಅವನನ್ನು ಕೆಳಕ್ಕೆ ಕೆಡವಿ ಬೀಳಿಸಿ ಅವನ ಎದೆ ಮೇಲೆ ಕುಳಿತು ತನ್ನೆರಡೂ ಕೈಗಳಿಂದ ಎದೆ ಬಗೆದು ಸೀಳಿ, ತನ್ನ ಬೊಗಸೆಯಿಂದ ಮೊಗೆ ಮೊಗೆದು ರಕ್ತವನ್ನು ಕುಡಿದ. ಪಿಶಾಚಿಯಂತೆ ಕಾಣಿಸಿದ. ವಿಕಟಾಟ್ಟಹಾಸದಿಂದ. "ನಾನು ಸಾಧಿಸಿದೆ! ನಾನು ಸಾಧಿಸಿದೆ!' ಎಂದು ಹುಚ್ಚನಂತೆ ಕಿರುಚಿದ. ತನ್ನ ಪ್ರತಿಜ್ಞೆಯನ್ನು ಮುಗಿಸಿದೆ ಎಂದು ಗಟ್ಟಿಯಾಗಿ ಘೋಷಿಸಿದ.

ದ್ರೌಪದಿಗಾಗಿ ಹೇಳಿ ಕಳಿಸಿದ. ಅವಳು ಬಂದು ದುಶ್ಯಾಸನನ ಬದಿಯಲ್ಲಿ ನಿಂತಳು. ಮುಗುಳ್ನಕ್ಕು ಒಂದು ದೀರ್ಘ ನಿಟ್ಟುಸಿರು ಎಳೆದಳು. ಅವಳು

ಅವನ ಎದೆಯಿಂದ ರಕ್ತವನ್ನು ಮೊಗೆದು ತಲೆಗೆ ಸವರಿಕೊಂಡು ಬಿಚ್ಚಿದ ಮುಡಿಯನ್ನು ಕಟ್ಟಿದಳು. ಕರುಳನ್ನು ಹೊರತೆಗೆದು ಸುತ್ತಿ ಮಲ್ಲಿಗೆ ದಂಡೆಯಂತೆ ಮುಡಿದುಕೊಂಡಳು.

ಆ ದೃಶ್ಯ ನೋಡಲು ಭಯಾನಕವೂ ಭೀಭತ್ಸವೂ ಆಗಿತ್ತು. ಆದರೆ ಭೀಮ ಮತ್ತು ದ್ರೌಪದಿಗೆ ಅದೊಂದು ಸಾಧನೆಯ ಪ್ರತೀಕವಾಗಿತ್ತು. ಬಿಡುಗಡೆಯಾಗಿತ್ತು.

ಮತ್ತೊಂದು ಕಡೆ ಅರ್ಜುನ ಮತ್ತು ಕರ್ಣರ ನಡುವೆ ಯುದ್ಧ ನಡೆಯುತ್ತಿತ್ತು. ಬಹಳ ಹೊತ್ತು ಅವರಿಬ್ಬರ ನಡುವೆ ಬಾಣ ಪ್ರಯೋಗ ನಡೆಯಿತು. ಯಾರೊಬ್ಬರೂ ಸೋಲುವಂತಿರಲಿಲ್ಲ. ಅರ್ಜುನನನ್ನು ಕೊಲ್ಲಲೇಬೇಕೆಂದು ಅರ್ಜುನನ ಕುತ್ತಿಗೆಗೆ ಗುರಿಯಿಟ್ಟು ಮಹಾಸ್ತ್ರವೊಂದನ್ನು ಬಿಟ್ಟ. ಬೆಂಕಿಕಿಡಿಗಳನ್ನು ಉಗುಳುತ್ತ ವೇಗವಾಗಿ ಅರ್ಜುನನತ್ತ ಬರುತ್ತಿದ್ದ ಬಾಣವನ್ನು ನೋಡಿ ಕೃಷ್ಣ ಸಮಯ ಸ್ಫೂರ್ತಿಯಿಂದ ರಥವನ್ನು ಕೆಳಕ್ಕೆ ಒತ್ತಿದ. ಇದರಿಂದ ಗುರಿತಪ್ಪಿ, ಅರ್ಜುನನ ಕಿರೀಟ ಹಾರಿತೇ ಹೊರತಾಗಿ ತಲೆ ಸುರಕ್ಷಿತವಾಗಿತ್ತು.

ಕೈಯಿಂದ ತಪ್ಪಿದ ಗುರಿಯಿಂದ ಕರ್ಣನಿಗೆ ಖೇದ ಮತ್ತು ಅವಮಾನವಾಯಿತು. ಕೃಷ್ಣನು ಬೇರೆ, ಅವನಿಂದ ಆದ ಅಪರಾಧಗಳನ್ನು ನೆನಪಿಸಿದ್ದರಿಂದ ಮತ್ತಷ್ಟು ನಾಚಿಕೆಯಿಂದ ಕುಗ್ಗಿ ಹೋದ. ಅದಕ್ಕೂ ಮೊದಲೇ ಕರ್ಣ ಮತ್ತು ಶಲ್ಯರ ನಡುವೆ ಏನೋ ಮಾತುಕತೆಯಾಗಿ ಶಲ್ಯನೂ ಸಾರಥ್ಯವನ್ನು ಬಿಟ್ಟು ಕೋಪದಿಂದ ಹೊರಟು ಹೋದ. ಸಾಲದ್ದಕ್ಕೆ ರಥದ ಚಕ್ರ ಬೇರೆ ಮಣ್ಣಿನಲ್ಲಿ ಹೂತು ಹೋಗಿತ್ತು. ಶಲ್ಯನನ್ನು ಕೇಳಿಕೊಂಡರೂ ಸಹಾಯಕ್ಕೆ ಬರಲಿಲ್ಲ. ಆದ್ದರಿಂದ ಕರ್ಣನೇ ಸ್ವತಃ ಇಳಿದು ರಥದ ಚಕ್ರವನ್ನು ಮಣ್ಣಿಂದ ಹೊರತೆಗೆಯಲು ಪ್ರಯತ್ನಿಸುತ್ತಿದ್ದ. ಕೃಷ್ಣ ಅರ್ಜುನನಿಗೆ ಈ ಅವಕಾಶ ಉಪಯೋಗಿಸಿಕೊಂಡು ಬಾಣ ಬಿಡಲು ಸಲಹೆ ನೀಡಿದ. ಆದರೆ ಅರ್ಜುನನಿಗೆ ಹಾಗೆ ಮಾಡಲು ಸಂಕಟವಾಯಿತು. ಅಪರಾಧಿಭಾವ ಕಾಡಿತು. ಕೃಷ್ಣ ನೋಡಿದ, ಮತ್ತೊಮ್ಮೆ ಅರ್ಜುನನನ್ನು ಎಚ್ಚರಿಸಿದ. ವಿಧಿಯಿಲ್ಲದೆ ಅರ್ಜುನನಿಗೆ ಕರ್ಣನೆಡೆಗೆ ಬಾಣ ಬಿಡಲೇಬೇಕಾಯಿತು. ಸಮಯ ಹಾಳು ಮಾಡುವುದು ಬೇಡವೆಂದು ಕೃಷ್ಣನಿಂದ ಮೇಲಿಂದ ಮೇಲೆ ಪ್ರಚೋದನೆ ಬೇರೆ ಇತ್ತು.

ಅರ್ಜುನ ಕೃಷ್ಣನ ಆದೇಶದಂತೆ ಬಾಣ ಬಿಟ್ಟಿದ್ದೇ ಅದು ನೇರವಾಗಿ ಪ್ರಚಂಡ ಶಕ್ತಿಯೊಂದಿಗೆ ಹೊರಟು ಕರ್ಣನ ತಲೆ ಹಾರಿಸಿತು.

ದುರ್ಯೋಧನ ಸುದ್ದಿ ತಿಳಿದು ಎದೆ ಹೊಡೆದುಕೊಂಡ. ಕರ್ಣ ತನ್ನ ಬಲಭುಜದಂತಿದ್ದ. ಅವನು ಅವನ ಭರವಸೆಯಾಗಿದ್ದ; ಆತ್ಮವಾಗಿದ್ದ; ಆಪ್ತನಾಗಿದ್ದ. ಕರ್ಣನ ಸಾವಿನಿಂದ ತನ್ನ ಸರ್ವಸ್ವವೂ ಹೊರಟು ಹೋಯಿತೆಂದು ಹಲುಬಿದ. ಆದರೂ ಯುದ್ಧವನ್ನು ಮುಂದುವರಿಸಲೇಬೇಕಾಗಿತ್ತು.

ದುರ್ಯೋಧನ ಅದಕ್ಕೆಂದೇ ಕೃಪಾಚಾರ್ಯರ ಬಳಿಗೆ ಬಂದ. ಮುಂದೇನು ಮಾಡಬೇಕೆಂದು ಕೇಳಿದ. ಕೃಪಾಚಾರ್ಯರು ಸ್ವಲ್ಪ ಹೊತ್ತು ಯೋಚಿಸಿ ಹೇಳಿದರು. "ದುರ್ಯೋಧನ, ನಾವು ಏನೇನು ನಷ್ಟವನ್ನು ಅನುಭವಿಸಿದ್ದೇವೆಂಬುದನ್ನು ಈವರೆಗೆ ನೋಡಿದ್ದೀಯ. ನಮ್ಮ ಯೋಧರನ್ನು, ಬಂಧುಗಳನ್ನು ಕಳೆದುಕೊಂಡಿದ್ದೇವೆ. ಉಳಿದಿರುವವರು ಕೇವಲ ಬೆರಳೆಣಿಕೆಯಷ್ಟು ಮಾತ್ರ. ಆದ್ದರಿಂದ ನಾವು ಇನ್ನಾದರೂ ಯೋಚನೆ ಮಾಡಿ ಸರಿಯಾದ ನಿರ್ಧಾರ ತೆಗೆದುಕೊಳ್ಳಬೇಕಾಗುತ್ತದೆ. ಕಡೆ ಪಕ್ಷ ನಿನ್ನ ಕಡೆ ಉಳಿದಿರುವವರನ್ನಾದರೂ ಉಳಿಸಿಕೋ. ಪಾಂಡವರ ಜೊತೆ ಸಂಧಿ ಮಾಡಿಕೋ. ಯುಧಿಷ್ಠಿರ ಒಪ್ಪುತ್ತಾನೆ. ಅವನು ಧರ್ಮಿಷ್ಠ, ಯೋಗ್ಯವಂತ" ಎಂದೆಲ್ಲಾ ಹೇಳಿ ಅವನ ಮನಸ್ಸನ್ನು ಬದಲಾಯಿಸುವ ಪ್ರಯತ್ನ ಮಾಡಿದರು. ದುರ್ಯೋಧನನಿಗೆ ಸಂಧಿಯ ಮಾತೇ ಬೇಡವಾಗಿತ್ತು. ತನ್ನವರ, ತನ್ನ ಸೋದರರ ಸಾವಿಗೆ ಪಾಂಡವರ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದಿದ್ದ. ಅದಕ್ಕೆಂದೇ, "ಆಚಾರ್ಯ, ನನ್ನವರನ್ನೆಲ್ಲಾ ಕಳೆದುಕೊಂಡು ನಾನು ಹೇಗೆ ತಾನೇ ಸಂತೋಷದಿಂದ ಇರಲಿ? ನಾನು ಸಾಯುವ ಕ್ಷಣದವರೆಗೂ ನಾನು ಕಳೆದುಕೊಂಡವರ ಆತ್ಮಶಾಂತಿಗಾಗಿ ಹೋರಾಡುತ್ತೇನೆ" ಎಂದು ತನ್ನ ನಿರ್ಧಾರವನ್ನು ಸ್ಪಷ್ಟಪಡಿಸಿದ.

ಕೃಪಾಚಾರ್ಯರಿಗೆ ಮುಂದೇನು ಹೇಳುವುದಕ್ಕೂ ಅವಕಾಶ ಇಲ್ಲದಾಯಿತು. ದುರ್ಯೋಧನ ಹೇಳಿದ್ದನ್ನು ಮೌನವಾಗಿ ಸ್ವೀಕರಿಸಿದರು. ಶಲ್ಯನೇ ಮುಂದಿನ ಸೇನಾಪತಿಯಾದ.



## ಯುದ್ಧದ ಹದಿನಾರನೇ ದಿನ

ಹದಿನಾರನೇ ದಿನದ ಯುದ್ಧದಲ್ಲಿ ಶಲ್ಯ ಮತ್ತು ಯುಧಿಷ್ಠಿರನ ನಡುವೆ ಯುದ್ಧ ನಡೆಯಿತು. ನೋಡಲು ಮೃದುವಾಗಿ ಸೌಮ್ಯವಾಗಿ ಕಾಣುತ್ತಿದ್ದ. ಯುಧಿಷ್ಠರ ಯುದ್ಧ ಮಾಡಲು ನಿಂತರೆ ಮಹಾಯೋಧನಂತಿದ್ದ. ಅವನು ಯುದ್ಧ ಮಾಡುವುದನ್ನು ನೋಡಿದವರು ಸ್ತಂಭಿತರಾದರು. ಶಲ್ಯನನ್ನು ಕೆಡವಿ ಬೀಳಿಸುವ ಯಾವ ಅವಕಾಶವನ್ನೂ ಹೋಗಗೊಡಲಿಲ್ಲ. ಕಟ್ಟ ಕಡೆಗೆ ಯುಧಿಷ್ಠಿರ ಶಲ್ಯನೆಡೆಗೆ ಭರ್ಜಿಯೊಂದನ್ನು ಬಲವಾಗಿ ಬೀಸಿದ ಅದು ವೇಗವಾಗಿ ಬಂದು ಶಲ್ಯನ ಎದೆಗೆ ನಾಟಿತು. ರಕ್ತವು ಚಿಲುಮೆಯಂತೆ ಚಿಮ್ಮಿತು.

ಶಲ್ಯನೂ ಹತನಾದ ಮೇಲೆ ಧೃತರಾಷ್ಟ್ರನ ಉಳಿದ ಮಕ್ಕಳು ಭೀಮನೊಂದಿಗೆ ಹೋರಾಟಕ್ಕೆ ನಿಂತರು. ಶಕುನಿ ಸಹದೇವನ ವಿರುದ್ಧ ಹೋರಾಡಿದ. ಸಹದೇವನಿಗೆ ಶಕುನಿಯನ್ನು ಕೊಲ್ಲಲು ಹೆಚ್ಚು ಸಮಯ ಹಿಡಿಸಲಿಲ್ಲ. ತೀಕ್ಷ್ಣವಾದ ಖಡ್ಗದಿಂದ ಶಕುನಿಯನ್ನು ಮುಗಿಸಿದ.

ನಾಯಕರಿಲ್ಲದೆ ಕೌರವಸೇನೆ ಚಲ್ಲಾಪಿಲ್ಲಿಯಾಯಿತು. ಪಾಂಡವರಿಗೆ ಮುಂದಿನ ಯುದ್ಧ ಕಷ್ಟವೆನಿಸಲಿಲ್ಲ. ಪಾಂಡವ ಸೈನ್ಯ ಕೌರವಸೈನ್ಯವನ್ನು ಬೆನ್ನಟ್ಟಿ ತುಂಡುತುಂಡು ಮಾಡಿತು. ಕುರಿಕೋಳಿಗಳಂತೆ ಮುರಿದು ಬಿದ್ದರು.



## ಹದಿನೇಳನೇ ದಿನ ಭೀಮ – ದುರ್ಯೋಧನರ ಯುದ್ಧ

ದುರ್ಯೋಧನ ಈಗ ಒಬ್ಬೊಂಟಿಯಾಗಿದ್ದ; ಅಸಹಾಯಕನಾಗಿದ್ದ. ಸಂಪೂರ್ಣವಾಗಿ ಸೋತು ಹೋಗಿದ್ದ. ಅವನಿಗೆ ತಾನು ಒಂಟಿಯಾಗಿ ಹೋರಾಟ ಮಾಡಲು ಸಾಧ್ಯವಿಲ್ಲ ಎನಿಸಿತು. ಚೇತರಿಸಿಕೊಳ್ಳಲು ಸ್ವಲ್ಪ ಕಾಲಾವಕಾಶಬೇಕೆನಿಸಿ. ಪಾಂಡವರ ಕಣ್ಣಿಗೆ ಬೀಳದಂತಹ ಜಾಗಕ್ಕಾಗಿ ಹುಡುಕುತ್ತಿದ್ದ. ಅಲ್ಲಿ ಅವಿತುಕೊಳ್ಳುವುದು? ಪಾಂಡವರು ಹೇಗಾದರೂ ಪತ್ತೆ ಮಾಡಿಬಿಡುವರು. ಆದ್ದರಿಂದ, ಪಾಂಡವರಿಗೆ ಊಹಿಸಲೂ ಆಗದಂತಹ ಒಂದು ರಹಸ್ಯ ಸ್ಥಳ ಅವನಿಗೆ ಹೊಳೆಯಿತು.

ಕೊಳದಲ್ಲಿ ಜಲಸ್ಥಂಭನ ವಿದ್ಯೆಯಿಂದ ಅಡಗಿ ಕುಳಿತುಕೊಳ್ಳುವುದೆಂದು ತೀರ್ಮಾನಿಸಿ ಕೊಳವನ್ನು ಪ್ರವೇಶಿಸಿದ. ಅದರಲ್ಲಿ ಅವನ ಪ್ರತಿಬಿಂಬ ಅವನನ್ನೇ ಅಣಕಿಸುವಂತೆ ಕಾಣಿಸಿತು.

ಅಷ್ಟರಲ್ಲಿ ಪಾಂಡವ ಸೋದರರು ದುರ್ಯೋಧನನನ್ನು ಹುಡುಕಿಕೊಂಡು ಬಂದರು. ಒಂದು ಕಡೆ ಹೆಜ್ಜೆ ಗುರುತುಗಳು ಜಾಡನ್ನು ಹಿಡಿದು ನಡೆದು ಕೊಳವನ್ನು ಸಮೀಪಿಸಿದರು. ಅವನನ್ನು ಹೇಗಾದರೂ ಹೊರಗೆ ಬರುವಂತೆ ಪ್ರಚೋದಿಸಬೇಕಿತ್ತು. ಅದಕ್ಕಾಗಿ, "ದುರ್ಯೋಧನ ನಿನಗೆ ನಾಚಿಕೆಯಿಲ್ಲವೇ, ನಿನ್ನವರನ್ನು, ನಿನ್ನ ವಂಶದವರನ್ನು ಬಲಿಗೊಟ್ಟು ನೀನೊಬ್ಬನೇ ಪ್ರಾಣ ಉಳಿಸಿಕೊಳ್ಳಲು ಇಲ್ಲಿ ಅವಿತುಕೊಂಡಿರುವೆಯಾ? ಪ್ರಾಣದ ಮೇಲೆ ಅಷ್ಟೊಂದು ಆಸೆಯೇ? ಬದುಕುವುದಕ್ಕೆ ನಿನಗೆ ಪ್ರೇರಣೆಯಾದರೂ ಏನು? ನೀನು ನಿಜವಾದ ಕ್ಷತ್ರಿಯನಾದಲ್ಲಿ ಹೊರಗೆ ಬಂದು ನಮ್ಮೊಂದಿಗೆ ಯುದ್ಧ ಮಾಡು" ಎಂದು ಹಲವು ರೀತಿಯಲ್ಲಿ ಮೂದಲಿಕೆಯ ಮಾತುಗಳನ್ನಾಡಿದರು.

ದುರ್ಯೋಧನನಿಗೆ ಅವರ ಮೂದಲಿಕೆಯ ಮಾತುಗಳು ಬಾಣಗಳಿಗಿಂತ ತೀಕ್ಷ್ಣವಾಗಿ ಚುಚ್ಚಿದವು. ಅವನಿಗೆ ಮುಂದೆ ಸಹಿಸಿಕೊಳ್ಳಲಾಗಲಿಲ್ಲ. ನೀರೊಳಗಿಂದ ಹೊರಕ್ಕೆ ಜಿಗಿದ. ಯುಧಿಷ್ಠಿರನಿಗೆ, 'ಯುಧಿಷ್ಠಿರ ನೀವು ನನ್ನನ್ನು ಯುದ್ಧ ಮಾಡಲು ಕರೆಯುತ್ತಿದ್ದೀರಿ. ಆದರೆ ನಾನಿರುವವನು ಒಬ್ಬನೇ. ನೀವು ಐದು ಮಂದಿ ಇದ್ದೀರಿ. ಅದು ಹೇಗೆ ಸಾಧ್ಯ? ಆದ್ದರಿಂದ ನೀವೆಲ್ಲರೂ ಒಟ್ಟಾಗಿ ನನ್ನ ಮೇಲೆ ಬೀಳಬಾರದು. ಯಾರಾದರೂ ಒಬ್ಬರು ಬನ್ನಿ. ನಾನು ಯುದ್ಧಕ್ಕೆ ಹೆದರುವುದಿಲ್ಲ" ಎಂದು ಸವಾಲನ್ನು ಒಪ್ಪಿಕೊಂಡಂತೆ ಹೇಳಿದ.

ಯುಧಿಷ್ಠಿರ ನಕ್ಕು, "ದುರ್ಯೋಧನ, ಸಣ್ಣ ಹುಡುಗನಾಗಿದ್ದ ಅಭಿಮನ್ಯುವನ್ನು ಏಳು ಮಂದಿ ಮಹಾಯೋಧರು ಸೇರಿ ಕೊಂದರಲ್ಲ! ಆಗ ಒಂಟಿ, ಅಸಹಾಯಕ ಎಂಬುದೆಲ್ಲ ನೆನಪಾಗಲಿಲ್ಲವೇ? ಇರಲಿ ಈಗ ನೀನೇ ನಿನಗೆ ಯಾರು ಬೇಕೋ ಆರಿಸಿಕೋ" ಎಂದು ಹೇಳಿದ.

ಎಲ್ಲರೂ ಊಹಿಸಿದಂತೆ, ದುರ್ಯೋಧನ ಭೀಮನನ್ನು ಆರಿಸಿಕೊಂಡ. ಭೀಮನಿಗೂ ತನನ್ನು ಆರಿಸಿಕೊಂಡಿದು ಸಂತೋಷವನ್ನೇ ತಂದಿತು.



ದುರ್ಯೋಧನನ ಜೊತೆ ಹೋರಾಡಿ ಅವನ ತೊಡೆಗಳನ್ನು ಮುರಿದು ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಳ್ಳಬೇಕಿತ್ತು.

ಅವರಿಬ್ಬರೂ ದ್ವಂದ್ವಯುದ್ಧವನ್ನು ಆಯ್ಕೆ ಮಾಡಿಕೊಂಡಿದ್ದರು. ಇಬ್ಬರೂ ಗದೆಗಳನ್ನೇ ಆಯುಧಗಳನ್ನಾಗಿ ಬಳಸಿ, ಅದ್ಭುತ, ಭಯಂಕರ, ರೋಮಾಂಚಕಾರಿ ಯುದ್ಧವನ್ನು ಮಾಡಿದರು. ಅವರಿಬ್ಬರ ಗದಾಯುದ್ಧ ಅಪರೂಪದ ದೃಶ್ಯವಾಗಿತ್ತು. ಗದೆಗಳ ಘರ್ಷಣೆಯಿಂದ ಕಿಡಿಗಳು ಎಲ್ಲೆಡೆ ಚಿಮ್ಮಿದವು. ಯಾರೊಬ್ಬರೂ ಸೋಲುವಂತೆ ಕಾಣಲಿಲ್ಲ. ಆದರೆ ಒಮ್ಮೆ ದುರ್ಯೋಧನ ಗದೆಯಿಂದ ಭೀಮನ ಎದೆಗೆ ಹೊಡೆದ. ಬಲವಾದ ಪೆಟ್ಟು ಬಿತ್ತು. ಆದರೂ ಭೀಮ ಸಹಿಸಿಕೊಂಡ. ದುರ್ಯೋಧನನನ್ನು ಹೇಗೆ ಸೋಲಿಸುವುದೆಂದು ತೋಚದೆ ಅಸಹಾಯಕನಾಗಿ ಕೃಷ್ಣನ ಕಡೆ ನೋಡಿದ. ಕೃಷ್ಣ ಸನ್ನೆಯಿಂದ ತೊಡೆಗಳನ್ನು ತೋರಿಸಿದ. ಭೀಮ ಸೂಚನೆ ಪಡೆದು ಗದೆಯನ್ನು ತೊಡೆಗಳೆಡೆಗೆ ಬಲವಾಗಿ ಬೀಸಿದ. ದುರ್ಯೋಧನ ಚೀರುತ್ತ ಮಾರಣಾಂತಿಕ ಬಾಧೆಯಿಂದ ಕೆಳಗೆ ಬಿದ್ದ. "ಭೀಮ ಇದು ಅನ್ಯಾಯ, ಯುದ್ಧದ ನಿಯಮಗಳನ್ನು ಮೀರಿದ್ದೀಯ" ಎಂದು ಚೀರಿದ.

ಕೃಷ್ಣ ಮಧ್ಯೆ ಪ್ರವೇಶಿಸಿ, "ದುರ್ಯೋಧನ ಈಗ ನೀನು ಯುದ್ಧ ನೀತಿಗಳ ಬಗ್ಗೆ ಮಾತಾಡುತ್ತಿರುವೆಯಾ? ಎಷ್ಟು ಸಂದರ್ಭಗಳಲ್ಲಿ ನೀನು ನ್ಯಾಯ, ನೀತಿ ನಿಯಮಗಳನ್ನು ಮೀರಿಲ್ಲ? ಇವುಗಳ ಬಗ್ಗೆ ನಿನಗೆ ಮಾತಾಡುವ ಹಕ್ಕೂ ಇಲ್ಲ; ಯೋಗ್ಯತೆಯೂ ಇಲ್ಲ. ನಿನ್ನ ಸ್ವಾರ್ಥ, ಅಹಂಕಾರಗಳೇ ಕೊನೆಗೆ ನಿನ್ನನ್ನು ಈ ಸ್ಥಿತಿಗೆ ತಂದಿರುವುದು" ಎಂದು ಅವನು ಮಾಡಿದ್ದನ್ನು ಅವನಿಗೆ ಮತ್ತೊಮ್ಮೆ ನೆನಪಿಸಿ, ದುರ್ಯೋಧನನನ್ನು ಅಸಹಾಯಕ ಸ್ಥಿತಿಯಲ್ಲಿ ಅಲ್ಲಿಯೇ ಬಿಟ್ಟು ಹೋದರು.

ಸ್ವಲ್ಪ ಸಮಯದ ನಂತರ ಅಲ್ಲಿಗೆ ಬಂದ ಬಲರಾಮ, ದುರ್ಯೋಧನ ಅಸಹಾಯಕನಾಗಿ, ಅನಾಥನಾಗಿ ಬಿದ್ದಿರುವುದನ್ನು ನೋಡಿದ. ಅವನಿಗೆ ಸಂಕಟವಾಯಿತು. ದುರ್ಯೋಧನನನ್ನು ಆ ಸ್ಥಿತಿಗೆ ತಂದ ಭೀಮನ ಮೇಲೆ ಸಿಟ್ಟಿನಿಂದ ಕೂಗಾಡಿದ. ಯುದ್ಧ ನಿಯಮಗಳನ್ನು ಮೀರಿ ಹೀಗೆ ಮಾಡಿದವನನ್ನು ಆಕ್ಷೇಪಿಸಿದ. ಹೊರಬಿದ್ದ ಅವರನ್ನು ತಡೆದು ಕೃಷ್ಣನಿಗೆ,

"ಕೃಷ್ಣ. ನೀತಿ ಬಾಹಿರವಾದ ಈ ಯುದ್ಧವನ್ನು ನೀನು ಒಪ್ಪಿದರೂ, ನಾನು ಒಪ್ಪಲಾರೆ" ಎಂದು ವೇಗವಾಗಿ ಭೀಮನತ್ತ ಧಾವಿಸಿದ. ತನ್ನ ಹಲಾಯುಧ(ನೇಗಿಲು)ವನ್ನು ಎತ್ತಿ ಅವನ ಮೇಲೆ ಬೀಸಲಿದ್ದ. ಕೃಷ್ಣ ಎಚ್ಚೆತ್ತುಕೊಂಡು ಅಣ್ಣನೆಡೆಗೆ ಓಡಿ ಅವನನ್ನು ತಡೆದ. ಪಾಂಡವರಿಗೆ ದುರ್ಯೋಧನನಿಂದ ಆದ ಅನ್ಯಾಯ, ಹಿಂಸೆ ಮುಂತಾದವುಗಳನ್ನು ನೆನಪಿಸಿ ತಿಳಿಸಿದ. ಒಂದೇ ಸಮನೆ ಪಾಂಡವರು ಅನುಭವಿಸಿದ ಕಷ್ಟ ಪರಂಪರೆಗಳ ಬಗ್ಗೆ ವಿವರ ನೀಡಿದ. ಅಲ್ಲದೆ ಸಭೆಯಲ್ಲಿಯೇ ದ್ರೌಪದಿಗೆ ದುರ್ಯೋಧನನಿಂದ ಅವಮಾನ ಆದಾಗಲೇ ಭೀಮ ಅವನ ತೊಡೆ ಮುರಿಯುವುದಾಗಿ ಮಾಡಿದ ಪ್ರತಿಜ್ಞೆಯನ್ನು ನೆನಪು ಮಾಡಿದ. ಇದೆಲ್ಲ ಕೇಳಿದ ಮೇಲೆ ಬಲರಾಮ ತಣ್ಣಗಾದ.

ಅಶ್ವತ್ಥಾಮ, ಮತ್ತೊಂದು ಬಗೆಯಲ್ಲಿ ತನ್ನ ತಂದೆಯ ಸಾವಿಗೆ ಕಾರಣರಾದ ಪಾಂಡವರ ಮೇಲೆ ಸೇಡು ತೀರಿಸಿಕೊಳ್ಳಲು ಅವಕಾಶಕ್ಕಾಗಿ ಕಾಯುತ್ತಿದ್ದ. ಕೌರವರ ಕಡೆ ಈಗ ಕೃಪ, ಕೃತವರ್ಮ, ಅಶ್ವತ್ಥಾಮ ಮೂವರು ಮಾತ್ರವೇ ಉಳಿದಿದ್ದರು. ಇವರಿಗೆ ದುರ್ಯೋಧನನಿಗೆ ಒದಗಿದ ದುಃಸ್ಥಿತಿಯ ಸುದ್ದಿ ತಲುಪಿ ಅವನಿದ್ದಲ್ಲಿಗೆ ಹೋದರು. ಅವನ ಸ್ಥಿತಿಗೆ ಅತಿಯಾಗಿ ದುಃಖಿಸಿದರು. ಅಶ್ವತ್ಥಾಮನಿಗಂತೂ ಗೆಳೆಯನ ಸ್ಥಿತಿ ಕರುಳಿರಿದಂತೆನಿಸಿತು. 'ಕೌರವೇಂದ್ರ, ಕೌರವ ಸಾಮ್ರಾಜ್ಯ ಚಕ್ರವರ್ತಿಗೆ ಇಂತಹ ಗತಿಯೇ' ಎಂದು ಮನನೊಂದ. ಈ ಸ್ಥಿತಿಗೆ ತಂದವರ ಹುಟ್ಟು ಅಳಿಸಿ ಬಿಡಬೇಕೆಂದು ಕೊಂಡ. ಅವನು ಗೆಳೆಯನನ್ನು ಸಮೀಪಿಸಿ, "ಗೆಳೆಯಾ, ನೀನು ಚಿಂತೆ ಮಾಡಬೇಡ. ನಿನ್ನೀ ಸ್ಥಿತಿಗೆ ಕಾರಣರಾದ ಪಾಂಡವರು ಇನ್ನಿಲ್ಲದಂತೆ ನಾಶ ಮಾಡಿ ಬಿಡುತ್ತೇನೆ" ಎಂದು ಸಮಾಧಾನ ಹೇಳಿದ.

ಅಶ್ವತ್ಥಾಮನ ವೀರಾವೇಶದ ಪ್ರತಿಜ್ಞೆಯನ್ನು ಕೇಳಿ ಸ್ವಲ್ಪ ಮನಸ್ಸಿಗೆ ನೆಮ್ಮದಿ ಎನಿಸಿತು. ಆದಷ್ಟು ಬೇಗ ಪ್ರತಿಜ್ಞೆಯನ್ನು ಪೂರೈಸುವಂತೆ ಕೇಳಿಕೊಂಡ, ನೋವಿನಿಂದ ಕಣ್ಣು ಮುಚ್ಚಿದ.

ಅಶ್ವತ್ಥಾಮನಿಗೆ ಶಾಂತಿ ಇಲ್ಲವಾಯಿತು. ಕೃತವರ್ಮ, ಕೃಪಾಚಾರ್ಯ ರೊಂದಿಗೆ ಪಾಂಡವ ಶಿಬಿರದ ಕಡೆ ಹೆಜ್ಜೆ ಹಾಕಿದ. ಮೊದಲು ದೃಷ್ಟದ್ಯುಮ್ನನ ಶಿಬಿರಕ್ಕೆ ಹೋಗಿ ಅವನನ್ನು ಕೊಂದ. ನಂತರ ಪಾಂಡವರ ಶಿಬಿರದೊಳಗೆ ಪ್ರವೇಶಿಸಿ, ಐದು ಮಂದಿ ಮಲಗಿರುವುದನ್ನು ನೋಡಿ ಒಟ್ಟಿಗೆ ಐದೂ ಜನ ಸಿಕ್ಕಿದರಲ್ಲ ಎಂದು ಸಂತಸಪಟ್ಟು ಕತ್ತಿಯ ಬೀಸಿನಿಂದ ಒಮ್ಮೆಲೇ ಐವರನ್ನೂ ಮುಗಿಸಿದ. ವಾಸ್ತವವಾಗಿ ಆ ಐವರು ಪಾಂಡವರಾಗಿರದೆ ಅವರ ಮಕ್ಕಳಾಗಿದ್ದರು. ಕತ್ತಲು ಮತ್ತು ಆವೇಶದ ಅವಿವೇಕದಿಂದ ಅವನು ಅವರು ಯಾರೆಂದು ಗಮನಿಸುವ ಗೋಜಿಗೆ ಹೋಗಿರಲಿಲ್ಲ.

ತಾನು ಮಹತ್ತಾದ್ದನ್ನು ಸಾಧಿಸಿದೆನೆಂದೂ ಗೆಳೆಯನು ಮನಸ್ಸಿಗೆ ನೆಮ್ಮದಿ ತಂದೆನೆಂದೂ ಸಂಭ್ರಮಿಸಿ ದುರ್ಯೋಧನನಿದ್ದೆಡೆಗೆ ಬಂದು ನಡೆದದ್ದನ್ನು ವಿವರಿಸಿದ. ಇನ್ನು ತನಗೆ ಶತ್ರು ಶೇಷವಿಲ್ಲವೆಂದು ಭಾವಿಸಿದ. ತಾನು ಮಾಡದ್ದನ್ನು ಅಶ್ವತ್ಥಾಮ ಮಾಡಿದನಲ್ಲಾ ಎಂದು ಸಂತೋಷಪಟ್ಟ. ಕೊನೆ ಗಳಿಗೆಯಲ್ಲಿ ನೆಮ್ಮದಿ ಎನಿಸಿತು. ಇದರೊಂದಿಗೆ ಅವನ ಪಾಂಡವ ದ್ವೇಷ ಮುಗಿಯಿತು.

ನಂತರ ಪಾಂಡವರಿಗೆ ಮತ್ತು ದ್ರೌಪದಿಗೆ ಈ ಕಗ್ಗೊಲೆ ವಿಷಯ ತಿಳಿಯಿತು. ಐವರು ಮಕ್ಕಳನ್ನು ಕಳೆದುಕೊಂಡ ಅವಳ ಸಂಕಟಕ್ಕೆ ಮಿತಿಯಿಲ್ಲವಾಯಿತು. ಅವಳನ್ನು ಸಮಾಧಾನಪಡಿಸುವುದು ಸುಲಭವಾಗಿರಲಿಲ್ಲ. ಪಾಂಡವರು, ತಮ್ಮ ನಿರಪರಾಧಿ ಮಕ್ಕಳನ್ನು ಕೊಂದವನನ್ನು ಹುಡುಕಿ ತೆಗೆದು ಚೂರು ಚೂರು ಮಾಡಬೇಕೆಂದೆನಿಸಿ ಅವನನ್ನು ಹುಡುಕಲು ಹೊರಟರು.



## ಯುದ್ಧದ ಹದಿನೆಂಟನೇ (ಕೊನೆಯ) ದಿನ

ಅಶ್ವತ್ಥಾಮನನ್ನು ಹುಡುಕುತ್ತಾ ಅಲೆಯುತ್ತಿದ್ದ ಪಾಂಡವರಿಗೆ ಅಶ್ವತ್ಥಾಮ ವ್ಯಾಸರ ಆಶ್ರಮದಲ್ಲಿ ಕಾಣಿಸಿಕೊಂಡ. ಅಶ್ವತ್ಥಾಮನನ್ನು ಮುಗಿಸಲೆಂದೇ ಬಂದಿರುವುದನ್ನು ಅರ್ಥಮಾಡಿಕೊಂಡರು. ಅಶ್ವತ್ಥಾಮ ಅವರು ತನ್ನನ್ನು ಕೊಲ್ಲುವುದಕ್ಕೆ ಮುಂಚೆ ತಾನೇ ಅವರನ್ನು ಕೊಲ್ಲಬೇಕೆಂದು ಬ್ರಹ್ಮಾಸ್ತ್ರವನ್ನು ಹೂಡಿದ. ಅರ್ಜುನನೂ ಸುಮ್ಮನಿರಲಿಲ್ಲ. ಅವನೂ ತನ್ನ ಬ್ರಹ್ಮಾಸ್ತ್ರವನ್ನು ಹೊರತೆಗೆದ.

ಕೃಷ್ಣ, ಇಬ್ಬರೂ ಬ್ರಹ್ಮಾಸ್ತ್ರಗಳೊಂದಿಗೆ ನಿಂತುದನ್ನು ನೋಡಿ ಗಾಭರಿಯಾದ. ಎರಡೂ ಒಂದಕ್ಕೊಂದು ತಾಗಿದರೆ ಪ್ರಪಂಚವೇ ನಾಶವಾಗುತ್ತದೆ. ಆದ್ದರಿಂದ ಅರ್ಜುನನಿಗೆ ಅಸ್ತ್ರವನ್ನು ಹಿಂದಕ್ಕೆ ಪಡೆಯುವಂತೆ ಹೇಳಿದ. ಅರ್ಜುನ ಕೃಷ್ಣನ ಮಾತಿನಂತೆ ಹಿಂದಕ್ಕೆ ತೆಗೆದುಕೊಂಡು ಬಿಟ್ಟ. ಆದರೆ ಅಶ್ವತ್ಥಾಮ ಅಸ್ತ್ರವನ್ನು ಹೂಡಿ ಬಿಡುವುದರಲ್ಲಿದ್ದ. ಅವನಿಗೆ ಅಸ್ತ್ರವನ್ನು ಹಿಂದಕ್ಕೆ ಮರಳಿಸುವುದು ತಿಳಿದಿರಲಿಲ್ಲ. ಅಸ್ತ್ರವನ್ನು ಪ್ರಯೋಗಿಸಲೇಬೇಕಿತ್ತು. ದಿಕ್ಕನ್ನು ಬದಲಿಸಿ ಉತ್ತರೆಯ ಗರ್ಭಕ್ಕೆ ಗುರಿಯಿಟ್ಟ. ಕೃಷ್ಣ ಅಪಾಯ ಅರಿತು ತಪ್ಪಿಸಿದ. ಉತ್ತರೆಯ ಗರ್ಭ ಉಳಿಯಿತು. ಕೃಷ್ಣನು ಅಡ್ಡ ಬಂದು ಅಪಾಯ ತಪ್ಪಿಸದಿದ್ದರೆ ಪಾಂಡವರ ವಂಶವೇ ಉಳಿಯುತ್ತಿರಲಿಲ್ಲ. ಅದೃಷ್ಟವಶಾತ್ ಉತ್ತರೆಯ ಗರ್ಭಕ್ಕೆ ಏನೂ ಆಗಲಿಲ್ಲ.

ಅಶ್ವತ್ಥಾಮನಿಗೆ ಇಷ್ಟು ಹೊತ್ತಿಗೆ ಎಲ್ಲ ಜ್ಞಾನೋದಯವಾಗಿ ಪಶ್ಚಾತ್ತಾಪ ಪಡುತ್ತಿದ್ದ. ತಾನು ಮಾಡಿದ ಅಪರಾಧಗಳಿಗೆ ಶಿಕ್ಷೆಯನ್ನು ವಿಧಿಸಿಕೊಳ್ಳಬೇಕೆಂದು ಯೋಚಿಸುತ್ತಿದ್ದ. ಅದಕ್ಕೆಂದೇ ತಪಸ್ಸಿಗೆ ತೆರಳಲು ನಿರ್ಧರಿಸಿದ. ಹೋಗುವ ಮೊದಲು ತನ್ನ ಸೋಲಿನ ಕುರುಹಾಗಿ, ತನ್ನ ತಲೆಯ ಮೇಲಿನ ಅಮೂಲ್ಯವಾದ ಮಣಿಯನ್ನು ಪಾಂಡವರಿಗೆ ಕಿತ್ತುಕೊಟ್ಟುಬಿಟ್ಟ. ನಂತರ ಎಲ್ಲರಿಂದ ಬೀಳ್ಕೊಂಡು ತಪಸ್ಸಿಗೆ ತೆರಳಿದ.



## ಪಾಂಡವರು ವಿಜಯಿಗಳಾದರು

ಹದಿನೆಂಟು ದಿನಗಳ ಕುರುಕ್ಷೇತ್ರ ಕಡೆಗೂ ಕೊನೆಯಾಯಿತು. ಪಾಂಡವರು ಗೆದ್ದರಾದರೂ ಗೆಲುವಿರಲಿಲ್ಲ. ಬಂಧುಬಾಂಧವರ, ಒಡಹುಟ್ಟಿದವರ, ಸ್ನೇಹಿತರ, ಪ್ರಿಯರ, ನಿರಪರಾಧಿ ಸೈನಿಕರ ಮಾರಣಹೋಮದಿಂದ ಗಳಿಸಿದ ಗೆಲುವು ಯುಧಿಷ್ಠಿರನಿಗೆ ಪ್ರಿಯವಾಗಲಿಲ್ಲ. ಅವನು ಶೋಕ ಸಾಗರದಲ್ಲಿ ಮುಳುಗಿದ.

ಸಂಜಯನ ಮೂಲಕ ಧೃತರಾಷ್ಟ್ರ ಯುದ್ಧದ ಎಲ್ಲ ವಿವರಗಳನ್ನು, ಅನುಭವಿಸಿದ ನಷ್ಟವನ್ನು, ಕುರುವಂಶದ ನಾಶವನ್ನು ಕೇಳಿ ತಿಳಿದುಕೊಂಡ. ಕಳೆದುಕೊಂಡ ನೂರು ಮಕ್ಕಳಿಗಾಗಿ ಧೃತರಾಷ್ಟ್ರ, ಗಾಂಧಾರಿಯರು ದುಃಖಿಸಿದರು. ಪಾಂಡವರ ಮೇಲೆ ಕೋಪ ಬಂತಾದರೂ ತಮ್ಮ ಮಕ್ಕಳ ತಪ್ಪು ಇದೆಯೆಂದರಿತು ಸುಮ್ಮನಾದರು.

ಯುಧಿಷ್ಠಿರ ತನ್ನ ತಮ್ಮಂದಿರೊಡಗೂಡಿ ದೊಡ್ಡಪ್ಪ, ದೊಡ್ಡಮ್ಮನನ್ನು ನೋಡಿ ಮಾತಾಡಿಸಲು ಹಸ್ತಿನಾಪುರಕ್ಕೆ ಬಂದ.

ಧೃತರಾಷ್ಟ್ರ ಅವರು ಬರುವ ಉದ್ದೇಶವನ್ನು ತಿಳಿದು ಅವರಿಗಾಗಿ ಎದುರು ನೋಡಿದ. ಅವನಿಗೆ ಗೊತ್ತು ಪಾಂಡವರು ತಮ್ಮ ಒಳ್ಳೆತನ, ಧರ್ಮದಿಂದಲೇ ಗೆದ್ದಿರುವುದು ಎಂಬುದು. ಆದರೂ ಮಕ್ಕಳ ಸಾವಿಗಾಗಿ ಗಂಡ ಹೆಂಡತಿ ಇಬ್ಬರು ಬಹಳವಾಗಿ ಶೋಕಿಸಿದರು.

ಪಾಂಡವರೊಂದಿಗೆ ವ್ಯಾಸರೂ ಕೃಷ್ಣನು ಬಂದಿದ್ದರು. ವ್ಯಾಸರು ಬದುಕು ಸಾವುಗಳ ಬಗ್ಗೆ ಒಂದೆರಡು ಮಾತುಗಳನ್ನಾಡಿ ಸಮಾಧಾನ ಪಡಿಸಿದರು. "ಮಗು ಧೃತರಾಷ್ಟ್ರ, ನೋಡಿಲ್ಲಿ ಯುಧಿಷ್ಠಿರ ನಿನಗೆ ನಮಸ್ಕರಿಸುತ್ತಿದ್ದಾನೆ. ಮನಸ್ಸಿನ ನೋವು, ಅಶಾಂತಿಯನ್ನು ಮರೆತು ಅವನನ್ನು ಆಶೀರ್ವದಿಸು" ಎಂದರು.

ಧೃತರಾಷ್ಟ್ರ, ಯುಧಿಷ್ಠಿರನನ್ನು ಹತ್ತಿರಕ್ಕೆ ಕರೆದು ಅಪ್ಪಿಕೊಂಡ. ಅವನು ಭೀಮನ ಬಗ್ಗೆ ವಿಚಾರಿಸಿದ. ಕೃಷ್ಣನಿಗೆ ಅಪಾಯ ತಿಳಿಯಿತು. ಭೀಮನ

ಒಂದು ಮೂರ್ತಿಯನ್ನು ತರಿಸಿ, ಧೃತರಾಷ್ಟ್ರನ ಮುಂದಿಟ್ಟ. ಧೃತರಾಷ್ಟ್ರ ನಿಜವಾದ ಭೀಮನೆಂದು ಭಾವಿಸಿ ತನ್ನ ಮನಸ್ಸಿನ ಸಿಟ್ಟನ್ನೆಲ್ಲ ಅಪ್ಪುಗೆಯಲ್ಲಿ ತಂದ. ಆ ಪ್ರತಿಮೆ ಪುಡಿಯಾಯಿತು. ಕೂಡಲೇ ಧೃತರಾಷ್ಟ್ರನಿಗೆ ಭಯವಾಯಿತು. "ಅಯ್ಯೋ ಇದೇನು ಮಾಡಿಬಿಟ್ಟೆ. ಭೀಮನನ್ನು ಸಾಯಿಸಿಬಿಟ್ಟೆನಲ್ಲ!" ಎಂದು ಹಲುಬಿದ. ಕೃಷ್ಣ ಆಗ ಮುಂದೆ ಬಂದು ಧೃತರಾಷ್ಟ್ರನಿಗೆ ಸಮಾಧಾನ ಮಾಡಿ, ಅವನು ಬದುಕಿದ್ದಾನೆಂಬುದನ್ನು ತಿಳಿಸಿ, ಆಶೀರ್ವಾದ ಮಾಡುವಂತೆ ಕೇಳಿದ. ಒಬ್ಬರಾದ ಮೇಲೊಬ್ಬರು ಧೃತರಾಷ್ಟ್ರನಿಗೆ ನಮಸ್ಕರಿಸಿ ಆಶೀರ್ವಾದ ಪಡೆದು ಮತ್ತು ಗಾಂಧಾರಿಯಿದ್ದಲ್ಲಿಗೆ ಹೋದರು. ವ್ಯಾಸರು ಗಾಂಧಾರಿಗೆ "ಮಗಳೆ, ಕೋಪ ಮಾಡಿಕೊಳ್ಳಬೇಡ, ಇವರು ನಿನ್ನ ಮಕ್ಕಳೆ. ಇದು ಯುದ್ಧ, ಸಾವು, ಬದುಕುಗಳು ನಮ್ಮ ಕೈಲಿಲ್ಲ. ನಿನ್ನ ಮಕ್ಕಳ ಮೂರ್ಖತನ, ಹಠಮಾರಿತನವೇ ಇಷ್ಟೆಲ್ಲಾ ಸಾವು ನೋವಿಗೆ ಕಾರಣವಾಯಿತು. ಆದದ್ದಾಯಿತು ಎಲ್ಲವನ್ನು ಮರೆತುಬಿಡು. ಶಾಂತಳಾಗು" ಎಂದರು.

ಯುಧಿಷ್ಠಿರ ಗಾಂಧಾರಿಯ ಬಳಿಗೆ ಬಂದು ನಮಸ್ಕಾರ ಮಾಡಿದ. ಗಾಂಧಾರಿಯ ದೃಷ್ಟಿ ಅವನ ಕೈಬೆರಳಿನ ಉಗುರುಗಳ ಮೇಲೆ ಬಿತ್ತು. ತಕ್ಷಣವೇ ಅವು ಸೀದಂತೆ ಕಪ್ಪಗಾದವು. ಉಳಿದ ಸೋದರರು ಇದನ್ನು ನೋಡಿ ಗಾಬರಿಯಿಂದ ಹಿಂಜರಿದರು. ಯಾಕೆ ಅವರು ಹಾಗೆ ಹೆದರಿ ದೂರ ನಿಂತಿದ್ದಾರೆಂದು ಗಾಂಧಾರಿ ಕೇಳಲು, ಯುಧಿಷ್ಠಿರನು ಆದದ್ದನ್ನು ವಿವರಿಸಿದನು. "ಮಕ್ಕಳೇ ಕ್ಷಮಿಸಿ. ನಿಮಗೆ ಹೀಗಾಗುವುದಿಲ್ಲ. ಯುಧಿಷ್ಠಿರನು ಹತ್ತಿರ ಬಂದ ಕ್ಷಣದಲ್ಲಿ ನನ್ನ ಮನಸ್ಸಿನಲ್ಲಿ ಕ್ರೋಧ ತುಂಬಿತ್ತು. ಕಣ್ಣಿನ ಬಟ್ಟೆ ಸ್ವಲ್ಪ ಸರಿದಿತ್ತು. ಈಗ ನಾನು ಶಾಂತವಾಗಿದ್ದೇನೆ" ಎಂದು ತಿಳಿಸಿದಳು.

ಆಮೇಲೆ ಒಬ್ಬೊಬ್ಬರೂ ಅವಳಿಂದ ಆಶೀರ್ವಾದ ಪಡೆದರು. ಗಾಂಧಾರಿ ಎಲ್ಲರನ್ನೂ ಕ್ಷಮಿಸಿದಳು. ಆದರೆ ಕೃಷ್ಣನನ್ನು ಮಾತ್ರ ಕ್ಷಮಿಸಲಿಲ್ಲ. ಅವನೇ ಈ ಅನಾಹುತಗಳಿಗೇ ಕಾರಣ ಎಂದು ಬಲವಾಗಿ ನಂಬಿದ್ದಳು.

"ಕೃಷ್ಣ ಎಲ್ಲರನ್ನೂ ಕ್ಷಮಿಸಿರುವೆನಾದರೂ ನಿನ್ನನ್ನು ಮಾತ್ರ ಕ್ಷಮಿಸುವುದಿಲ್ಲ. ನನ್ನಂತೆ ನೀನೂ ಅನುಭವಿಸಬೇಕು. ನಿನ್ನ ವಂಶವೂ ನಾಶವಾಗಬೇಕು. ಆಗ ಮಾತ್ರವೇ ನನ್ನ ಮನಸ್ಸಿಗೆ ಸಮಾಧಾನ. ಇದು ನನ್ನ ಶಾಪವೆಂದು ತಿಳಿ" ಎಂದು ಉಕ್ಕಿ ಬಂದ ದುಃಖದಲ್ಲಿ ಹೇಳಿದಳು. ❖

## ಭೀಷ್ಮರನ್ನು ಕಂಡದ್ದು

ಯುಧಿಷ್ಠಿರನಿಗೆ, ತನ್ನವರನ್ನು ಕಳೆದುಕೊಂಡ ದುಃಖದಿಂದ ಯಾವುದರಲ್ಲಿಯೂ ಆಸಕ್ತಿ ಇಲ್ಲದಂತಾಗಿತ್ತು. ಎಷ್ಟೊಂದು ಮಂದಿಯ ಸಾವಿನಿಂದ ಗಳಿಸಿದ ಹಣ, ರಾಜ್ಯ ಅಧಿಕಾರ ಯಾವುದರಲ್ಲಿಯೂ ಅರ್ಥವಿಲ್ಲವೆನಿಸಿತು. ಂಬಾರ ಸಾವು ನೋವಿಗೂ ತಾನು ಜವಾಬ್ದಾರನಲ್ಲವಾದರೂ ತನ್ನನ್ನು ಅಪರಾಧಿಯೆಂದೇ ಭಾವಿಸಿದ್ದ. ಪರಿಹಾರಕ್ಕೆ ರಾಜ್ಯಕೋಶಗಳನ್ನು ಬಿಟ್ಟು ಕಾಡಿಗೆ ತೆರಳಿ ತಪಸ್ಸು ಮಾಡಬೇಕೆಂದು ಬಯಸಿದ. ಆದರೆ ವ್ಯಾಸರು ಸಮಾಧಾನ ಹೇಳಿದರು. ಕೃಷ್ಣನೂ ಒಂದೆರಡು ಮಾತಾಡಿ ಮನವೊಲಿಸಲು ಪ್ರಯತ್ನಿಸಿದ. ವಿಧಿಯೇ ಎಲ್ಲವನ್ನೂ ಮಾಡಿಸಿದೆ ಎಂದರು.

"ಯುಧಿಷ್ಠರ ಈಗ ನಿನ್ನ ಜವಾಬ್ದಾರಿ ಹೆಚ್ಚಿದೆ. ನಿನ್ನ ದೊಡ್ಡಪ್ಪ, ದೊಡ್ಡಮ್ಮ, ಅಮ್ಮ, ಸೋದರರು, ಮಡದಿ ಎಲ್ಲರನ್ನೂ ನೋಡಿಕೊಳ್ಳಬೇಕಾದ ಹೊಣೆ ನಿನ್ನ ಮೇಲಿದೆ. ಆದ್ದರಿಂದ ನೀನು ರಾಜ್ಯವನ್ನು ವಹಿಸಿಕೊಳ್ಳಲೇಬೇಕೆಂದರು.

ಯುಧಿಷ್ಠಿರನಿಗೆ ಅವರ ಮಾತನ್ನು ಗೌರವಿಸದೆ ಬೇರೆ ದಾರಿ ಇರಲಿಲ್ಲ.

ರಾಜ್ಯಭಾರವನ್ನು ವಹಿಸಿಕೊಳ್ಳುವ ಮೊದಲು ಭೀಷ್ಮರನ್ನು ನೋಡಿ ಬರಲು ಹೊರಟರು. ಭೀಷ್ಮರು ಧರ್ಮಮಾರ್ಗವನ್ನು ಬೋಧಿಸಿದರು. ನ್ಯಾಯ, ನೀತಿ, ಪ್ರೀತಿ, ವಿಶ್ವಾಸಗಳನ್ನು ಎಂದಿಗೂ ಬಿಡದಿರು. ದೇವರು ನಿನಗೆ ಒಳ್ಳೆಯದು ಮಾಡಲಿ" ಎಂದು ಹೇಳುತ್ತಲೇ ಕಣ್ಣು ಮುಚ್ಚಿದರು.

ಭೀಷ್ಮರ ಸಾವಿನ ಸುದ್ದಿಯಿಂದ ಎಲ್ಲರೂ ದುಃಖಿತರಾದರು. ಪಾಂಡವರು, ಧೃತರಾಷ್ಟ್ರ ಮತ್ತು ಉಳಿದ ರಾಜರು ಭೀಷ್ಮರ ಅಂತಿಮ ಸಂಸ್ಕಾರವನ್ನು ರಾಜಯೋಗ್ಯವಾದ ರೀತಿಯಲ್ಲಿ ಮಾಡಿ ಮುಗಿಸಿದರು.

ರಾಜಧಾನಿಗೆ ಹಿಂತಿರುಗಿದ ಮೇಲೆ ಸೂತಕ ಕಳೆಯುತ್ತಿದ್ದಂತೆ, ಯುಧಿಷ್ಠಿರನಿಗೆ ರಾಜ್ಯಾಭಿಷೇಕ ಮಾಡಿದರು.

ಯುಧಿಷ್ಠಿರ, ಧೃತರಾಷ್ಟ್ರ, ಗಾಂಧಾರಿಯರನ್ನು ಕಣ್ಣಿನ ರೆಪ್ಪೆಗಳೊಳಗಿಟ್ಟು ಕೊಂಡು ಕಾಪಾಡಿದ. ಪ್ರಜೆಗಳಿಗೆ ಯಾವುದೇ ಕೊರತೆಯಿಲ್ಲದಂತೆ ನೋಡಿಕೊಂಡ.

ಯುದ್ಧದಲ್ಲಿ ಬಂಧುಬಾಂಧವರನ್ನು, ಗಂಡಂದಿರನ್ನು, ಸೋದರರರನ್ನು, ತಂದೆಯವರನ್ನು ಕಳೆದುಕೊಂಡವರ ಯೋಗಕ್ಷೇಮದ ಜವಾಬ್ದಾರಿಯನ್ನೂ ವಹಿಸಿಕೊಂಡ.

ಯುದ್ಧದಲ್ಲಿ ಬಂಧುಬಾಂಧವರನ್ನು, ಗಂಡಂದಿರನ್ನು, ಸೋದರರರನ್ನು, ತಂದೆಯವರನ್ನು ಕಳೆದುಕೊಂಡವರ ಯೋಗಕ್ಷೇಮದ ಜವಾಬ್ದಾರಿಯನ್ನೂ ವಹಿಸಿಕೊಂಡ.

ಕೆಲವೇ ವರ್ಷಗಳಲ್ಲಿ ರಾಜ್ಯದಲ್ಲಿ, ಶಾಂತಿ, ಸುಭಿಕ್ಷತೆಗಳು ನೆಲೆಸಿದವು. ತನ್ನ ಪ್ರೀತಿ, ಔದಾರ್ಯ ಸಹಾನುಭೂತಿಗಳಿಂದಾಗಿ ಪ್ರಜೆಗಳ ಮೆಚ್ಚುಗೆಯನ್ನು ಗಳಿಸಿದ. ರಾಜ್ಯವನ್ನು ಸಾಕಷ್ಟು ವಿಸ್ತರಿಸಿದ. ಅಶ್ವಮೇಧ ಯಾಗ ಮಾಡಿ ಸಾಧು, ಸಂತರು, ಬ್ರಾಹ್ಮಣರು, ಬಡವರು ಎಲ್ಲರಿಗೂ ತೃಪ್ತಿಯಾಗುವಷ್ಟು ದಾನಧರ್ಮ ಮಾಡಿದ, ಧೃತರಾಷ್ಟ್ರ. "ಮಗು ಯುಧಿಷ್ಠರ, ನನ್ನ ಮಗನಿಗಿಂತಲೂ ನನ್ನನ್ನು ನೀನು ಚೆನ್ನಾಗಿ ನೋಡಿಕೊಂಡಿರುವೆ. ನಮ್ಮಿಬ್ಬರಿಗೆ ಯಾವುದಕ್ಕೂ ಇಲ್ಲಿ ಕೊರತೆಯಿಲ್ಲ. ನೀವೂ ಕೂಡ ಒಂದು ನೆಲೆಗೆ ಬಂದಿದ್ದೀರಿ.... ಇನ್ನು ನಾವು ವಾನಪ್ರಸ್ಥಕ್ಕೆ ಹೋಗಬೇಕೆಂದಿದ್ದೇವೆ. ನಾವು ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಲ್ಲವೇ?"

ಎಂದು ಪ್ರೀತಿಯಿಂದಲೇ ಮಾತನಾಡಿಸಿ ಹೇಳಿದ. ಈ ಮಾತನ್ನು ಕೇಳಿ ಯುಧಿಷ್ಠಿರನಿಗೆ ದುಃಖವಾಯಿತು. ಹಿರಿಯರು ಯಾರೂ ಜೊತೆಗೆ ಇಲ್ಲದೆ ಇದ್ದರೆ ಹೇಗೆಂದು ಪ್ರಶ್ನಿಸಿದ. ಅಷ್ಟರಲ್ಲಿ ವ್ಯಾಸರು ಮಧ್ಯೆ ಪ್ರವೇಶಿಸಿ, ಧೃತರಾಷ್ಟ್ರನನ್ನು ಅವನ ಇಚ್ಛೆಯಂತೆ ಹೋಗಲಿ ಬಿಡು, ಕಡೆಗಾಲದಲ್ಲಿ ಪ್ರಶಾಂತ ಬದುಕು, ತಪಸ್ಸುಗಳು ಬೇಕಾಗುತ್ತವೆ ಎಂದರು.

ಯುಧಿಷ್ಠಿರ ವಿಧಿಯಿಲ್ಲದೆ ಒಪ್ಪಿಕೊಂಡ. ಧೃತರಾಷ್ಟ್ರ ಗಾಂಧಾರಿ ಹೊರಟು ನಿಲ್ಲಲು, ಸಂಜಯ, ಕುಂತಿ ಇವರಿಬ್ಬರೂ ಅವರ ಜೊತೆಗೆ ಸೇರಿಕೊಳ್ಳುವುದಕ್ಕಾಗಿ ಹಠ ಹಿಡಿದರು.

ರಾಜ್ಯವನ್ನು ತೊರೆದು ಎಲ್ಲರೂ ವನವಾಸಕ್ಕೆ ಹೊರಟರು. ಕಾಡಿನಲ್ಲಿ ಮೂರು ವರ್ಷ ಕಳೆದರು. ಸಂಜಯನೂ ಜೊತೆಗೇ ಉಳಿದಿದ್ದ. ಒಂದು ದಿನ ಇದ್ದಕ್ಕಿದ್ದಂತೆ ಕಾಡಿನಲ್ಲಿ ಬೆಂಕಿ ಕಾಣಿಸಿಕೊಂಡಿತು. ಪಶು ಪಕ್ಷಿಗಳು ಪ್ರಾಣ ರಕ್ಷಣೆಗಾಗಿ ಓಡಿದವು. ಬೆಂಕಿ ಭಯಂಕರವಾಗಿ ಎಲ್ಲೆಡೆ ಹಬ್ಬಿತು. ಧೃತರಾಷ್ಟ್ರ ಸಂಜಯನಿಗೆ ತಪ್ಪಿಸಿಕೊಂಡು ಓಡುವಂತೆ ಹೇಳಿದ. ಉಳಿದವರು ಮೂವರೂ ಯೋಗಮುದ್ರೆಯಲ್ಲಿ ಕುಳಿತು ಬೆಂಕಿಯನ್ನು ಆಹ್ವಾನಿಸಿಕೊಂಡು ಆತ್ಮಾಹುತಿ ಮಾಡಿಕೊಂಡರು.



# ಪಾಂಡವರ ಅಂತಿಮ (ಸ್ವರ್ಗಕ್ಕೆ) ಪ್ರಯಾಣ

ಕೃಷ್ಣನು ಪಾಂಡವರಿಗೆ ಮಾಡಬೇಕಾಗಿದ್ದ ಎಲ್ಲ ತನ್ನ ಕರ್ತವ್ಯಗಳನ್ನು ಮುಗಿಸಿ ಅವರಿಂದ ಬೀಳ್ಕೊಂಡು ದ್ವಾರಕೆಗೆ ಹೋದ. ದ್ವಾರಕೆಗೆ ಹೋದ ಮೇಲೆ ಮೂವತ್ತು ವರ್ಷಗಳು ದ್ವಾರಕೆಯನ್ನು ಆಳಿದ.

ಕೃಷ್ಣನ ವಂಶದವರು ಸ್ವಲ್ಪ ವಿಲಾಸಿಗಳಾಗಿ, ಬೇಜವಾಬ್ದಾರಿಗಳಾಗಿ ಯಾವಾಗಲೂ ಕುಡಿತ, ಕುಣಿತಗಳಲ್ಲಿ, ಜೂಜಾಟಗಳಲ್ಲಿ ಮುಳುಗಿರುತ್ತಿದ್ದರು. ಎಲ್ಲರನ್ನೂ ಕೀಟಲೆ ಮಾಡುವುದು, ದೊಡ್ಡವರು ಚಿಕ್ಕವರು ಸಾಧು ಸಂತರು ಎನ್ನುವ ಪ್ರಜ್ಞೆಯೇ ಇರಲಿಲ್ಲ. ವಿನೋದಕ್ಕಾಗಿ ಹಾಸ್ಯಕ್ಕಾಗಿ ಅವರಿವರೆನ್ನದೆ ಎಲ್ಲರನ್ನೂ ಕೀಟಲೆ ಮಾಡುತ್ತಿದ್ದರು. ಅವರ ಕೋಪಕ್ಕೆ ಗುರಿಯಾಗುತ್ತಿದ್ದರು.

ಒಮ್ಮೆ ಈ ಯಾದವರೊಂದಷ್ಟು ಮಂದಿ ಋಷಿಯೊಬ್ಬನನ್ನು ನೋಡಿ, ಅವನಿಗೆ ತಮಾಷೆ ಮಾಡಲು ಯೋಚಿಸಿ, ಒಬ್ಬನಿಗೆ ಬಸುರಿವೇಷ ಹಾಕಿ, ಅವರ ಬಳಿಗೆ ಕರೆದೊಯ್ದು, "ಋಷಿಗಳೇ ಇವಳಿಗೆ ಹೆಣ್ಣಾಗುವುದೋ, ಗಂಡಾಗುವುದೋ ಹೇಳಬಲ್ಲಿರಾ?" ಎಂದು ಗೇಲಿ ಮಾಡುವ ದನಿಯಲ್ಲಿ ಕೇಳಿದರು.

ಋಷಿಗೆ ಸಿಟ್ಟು ಬಂದಿತ್ತು. ಅವರಿಗೆ ಇವರು ಆಡಿದ ನಾಟಕ ತಿಳಿಯಿತು. ಅವರೆಂದರು. "ಹೆಣ್ಣು ಅಲ್ಲ; ಗಂಡೂ ಅಲ್ಲ; ಒನಕೆಯೊಂದು ಹುಟ್ಟುವುದು. ಅದರಿಂದಲೇ ನೀವು ಹೊಡೆದಾಡಿಕೊಂಡು ನಾಶವಾಗುವಿರಿ" ಎಂದು ಶಾಪವನ್ನು ಉಚ್ಚರಿಸಿದರು.

ಮುಂದೆ ಹಾಗೆಯೇ ಆಯಿತು. ಪಾನೋನ್ಮತ್ತರಾಗಿ ಒಬ್ಬರನ್ನೊಬ್ಬರು ಬಡಿದಾಡಿಕೊಂಡು ಸತ್ತು ಬಿದ್ದರು.

ತನ್ನ ಕಣ್ಣ ಮುಂದೆಯೇ ತನ್ನ ವಂಶನಾಶವಾದದ್ದನ್ನು ನೋಡಿ ಬಹಳವಾಗಿ ದುಃಖಿಸಿದ. ಅದರಲ್ಲಿಯೂ ಬಲರಾಮ ಇಲ್ಲವಾದ ಮೇಲೆ ಅವನ ಒಂಟಿತನ ಭಯಂಕರವೆನಿಸಿತು. ಇನ್ನು ತನ್ನ ಅವತಾರ ಸಾಕೆಂದೆನಿಸಿತು.

ಒಂದು ದಿನ ಒಂದು ಮರದ ಕೆಳಗೆ ಹಾಗೇ ಧ್ಯಾನಸ್ಥನಂತೆ ಮಲಗಿರಲು, ವ್ಯಾಧನೊಬ್ಬನ ಬಾಣ ಬಂದು ಅವನ ಪಾದಗಳಿಗೆ ತಾಕಿತು ಅಷ್ಟೇ! ಕೃಷ್ಣ ಕೊನೆಯುಸಿರೆಳೆದ.

ಕೃಷ್ಣನ ಸಾವಿನ ದುರಂತದ ಸುದ್ದಿ ಪಾಂಡವರನ್ನು ತಲುಪಿ ಅವರನ್ನು ಮತ್ತಷ್ಟು ಧೈರ್ಯ ಕಳೆದುಕೊಳ್ಳುವಂತೆ ಮಾಡಿತು. ಕೃಷ್ಣನಂತಹ ಮಹಾನುಭಾವನೇ ಸಾವಿಗೀಡಾದಾಗ ತಮ್ಮದು ಯಾವುದು ಶಾಶ್ವತ ಎನಿಸಿ, ಯುಧಿಷ್ಠಿರ ಸ್ವರ್ಗಾರೋಹಣಕ್ಕೆ ಸಿದ್ಧನಾಗಿ ಹೊರಟ. ಜೊತೆಯಲ್ಲಿ ಸಹೋದರರೂ, ದ್ರೌಪದಿಯೂ ಇದ್ದರು. ಮೊಮ್ಮಗ ಪರೀಕ್ಷಿತನಿಗೆ ರಾಜ್ಯವಹಿಸಿ ಬಿಟ್ಟಿದ್ದರು. ನಿರಾಳವಾಗಿ ಹಿಮಾಲಯದ ಕಡೆ ಹೊರಟು, ಪರ್ವತಾರೋಹಣ ಮಾಡತೊಡಗಿದರು.

ಅವರೆಲ್ಲರಿಗೂ ತಡೆಯಲಾಗದ ದಣಿವು ಮತ್ತು ಬಾಯಾರಿಕೆಗಳು ಉಂಟಾದವು. ಇನ್ನು ಒಂದು ಹೆಜ್ಜೆ ಹಾಕುವುದೂ ಸಾಧ್ಯವಾಗಲಿಲ್ಲ. ಒಬ್ಬರಾದ ಮೇಲೆ ಒಬ್ಬರೂ ಕುಸಿದು ಬಿದ್ದು ಪ್ರಾಣ ಕಳೆದುಕೊಂಡರು. ಅವರವರಲ್ಲಿದ್ದ ವೈಯಕ್ತಿಕ ದೌರ್ಬಲ್ಯಗಳೇ ಅವರನ್ನು ಸ್ವರ್ಗದವರೆಗೆ ಹೋಗಲು ಬಿಡಲಿಲ್ಲ. ಯುಧಿಷ್ಠಿರ ಇವುಗಳಿಂದ ಒಂದಿಷ್ಟು ವಿಚಲಿತನಾಗದೆ ತನ್ನ ಪ್ರಯಾಣ ಮುಂದುವರೆಸಿದ. ಅವನ ಜೊತೆಗೆ ಅವನ ಪ್ರೀತಿಯ ನಾಯಿಯೂ ಇತ್ತು. ತನ್ನವರೆಲ್ಲ ಪ್ರಾಣ ಕಳೆದುಕೊಂಡ ಮೇಲೆ ಅವನು ಹಿಂತಿರುಗಿಯೂ ನೋಡದೆ ಇನ್ನೊಂದಷ್ಟು ದೂರ ಹೋದ ಮೇಲೆ ಇಂದ್ರ ಕಾಣಿಸಿಕೊಂಡು, "ಯುಧಿಷ್ಠಿರ ನಡೆ, ನಿನಗಾಗಿ ರಥವನ್ನು ತಂದಿದ್ದೇನೆ. ನಿನ್ನವರೆಲ್ಲ ನಿನಗಾಗಿ ಕಾಯುತ್ತಿದ್ದಾರೆ. ನೀನು ಮಾಡಿದ ಪುಣ್ಯದಿಂದ ನಿನ್ನ ಧರ್ಮದಿಂದ ದೇಹದೊಂದಿಗೆ ಸ್ವರ್ಗ ಪ್ರವೇಶ ಮಾಡುವ ಅದೃಷ್ಟ ನಿನ್ನದಾಗಿದೆ" ಎಂದನು.




ಯುಧಿಷ್ಠಿರ ಇಂದ್ರನ ಮಾತನ್ನು ಗೌರವಿಸಿ ರಥವೇರಲು ಹೋದ. ಅವನ ಹಿಂದಿನಿಂದ ನಾಯಿಯೂ ಹತ್ತಿತು. ಇಂದ್ರ ಅದನ್ನು ತಡೆದ.

"ದೊರೆಯೇ ಕ್ಷಮಿಸು, ನಿನಗೆ ಮಾತ್ರ ಸ್ವರ್ಗದಲ್ಲಿ ಪ್ರವೇಶವಿದೆಯೇ ಹೊರತಾಗಿ ನಿನ್ನ ನಾಯಿಗಿಲ್ಲ" ಎಂ–+ದು ಹೇಳಿ ತಡೆದನು.

"ಸರಿ ಹಾಗಾದರೆ ಇದಕ್ಕೆ ಬರಲು ಅವಕಾಶವಿಲ್ಲದ ಮೇಲೆ ನನಗೂ ಸ್ವರ್ಗ ಬೇಡ. ಜೀವಮಾನವೆಲ್ಲ ಇದು ನನ್ನ ಸೇವೆ ಮಾಡಿದೆ. ಇದನ್ನು ಇದರ ಪಾಡಿಗೆ ಬಿಟ್ಟು ನಾನು ಮಾತ್ರ ಸ್ವರ್ಗಕ್ಕೆ ಬರಲು ಸಿದ್ಧನಿಲ್ಲ" ಎಂದು ಹೇಳಿಯೇ ಬಿಟ್ಟ.

ಅವನ ಮಾತಿನಿಂದ ಇಂದ್ರನಿಗೆ ಸಂತೋಷವಾಯಿತು. ಹೇಳಿದ,

"ಯುಧಿಷ್ಠಿರ ನೀನು ಪರೀಕ್ಷೆಯಲ್ಲಿ ಗೆದ್ದೆ. ಈ ನಾಯಿ ಬೇರೆ ಯಾರೂ ಅಲ್ಲ, ಸ್ವತಃ ಧರ್ಮರಾಯ, ಯಮಧರ್ಮ" ಎಂದ.

ಅಷ್ಟರಲ್ಲಿ ನಾಯಿ ರೂಪದಲ್ಲಿದ್ದ ಯಮಧರ್ಮ ತನ್ನ ನಿಜ ರೂಪವನ್ನು ತೋರಿದ. ತನ್ನ ಮಗನನ್ನು ಹರಸಿದ. ಅದೃಶ್ಯನಾದ.

ಯುಧಿಷ್ಠಿರ ಇಂದ್ರನೊಡನೆ ಸ್ವರ್ಗಕ್ಕೆ ಪ್ರಯಾಣ ಮಾಡಿದ.





ಈ ಕೃತಿಯನ್ನು ರಚಿಸಿದ ಡಾ. ವಿಜಯಾ ಸುಬ್ಬರಾಜ್ ಎಂ.ಇ.ಎಸ್. ಕಾಲೇಜಿನ ನಿವೃತ್ತ ಪ್ರಾಧ್ಯಾಪಕರಾಗಿರುವುದೇ ಅಲ್ಲದೆ ನಾಡಿನ ಖ್ಯಾತ ಲೇಖಕಿಯೂ ಆಗಿದ್ದಾರೆ. ಸಾಹಿತ್ಯ ಶಿಕ್ಷಣದಲ್ಲಿ ಅವರದೇ ಆದ ರೀತಿಯಲ್ಲಿ ಛಾಪು ಮೂಡಿಸಿದ್ದಾರೆ. ಮೂವತ್ನಾಲ್ಕು ವರ್ಷಕ್ಕೂ ಮೇಲ್ಪಟ್ಟು ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ ಇವರಿಗೆ 2002ರಲ್ಲಿ ಕರ್ನಾಟಕ ಸರಕಾರ ಕಾಲೇಜು ಶಿಕ್ಷಣ ಇಲಾಖೆ ವತಿಯಿಂದ 'ಆದರ್ಶ ಶಿಕ್ಷಕಿ' ಪ್ರಶಸ್ತಿ ಲಭಿಸಿದೆ.

ಕೇವಲ ಅಧ್ಯಾಪಕ ವೃತ್ತಿಗಷ್ಟೇ ಸೀಮಿತವಾಗದೆ ಕಾವ್ಯ, ನಾಟಕ, ವಿಮರ್ಶೆ, ಕತೆ, ಕಾದಂಬರಿ ಇತ್ಯಾದಿ ಹಲವಾರು ಸಾಹಿತ್ಯ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು, ತಮ್ಮ ಸಾಹಿತ್ಯ ಸಾಧನೆಗಾಗಿ ಹಲವಾರು ಪ್ರಶಸ್ತಿ, ಪುರಸ್ಕಾರಗಳನ್ನು ಪಡೆದಿದ್ದಾರೆ. ನಲವತ್ತಕ್ಕೂ ಹೆಚ್ಚು ಕೃತಿಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ತಮ್ಮ ಕೊಡುಗೆ ನೀಡಿದ್ದಾರೆ.

ಸಾಹಿತ್ಯ ಶಿಕ್ಷಣವಷ್ಟೇ ಅಲ್ಲದೆ ರಂಗಭೂಮಿ, ಸಂಗೀತಗಳು ಅವರ ಕಾರ್ಯಕ್ಷೇತ್ರಗಳಾಗಿವೆ. ನಾಟಕ ರಚನೆ, ನಿರ್ದೇಶನ, ಅಭಿನಯ ಇವು ಮೂರೂ ಅವರ ಆಸಕ್ತಿಯ ವಲಯಗಳಾಗಿವೆ.

ಅವರ ನಿರಂತರ ಕ್ರಿಯಾಶೀಲತೆ, ಸೃಜನಶೀಲತೆಗಳಿಗೆ ಗೌರವ, ಪ್ರಶಸ್ತಿಗಳು ಹಲವಾರು ಇದ್ದರೂ, ಗೊರೂರು ಪ್ರಶಸ್ತಿ, ಮಲ್ಲಿಕಾ ಪ್ರಶಸ್ತಿ, ಕಡಂಗೋಡ್ಲು ಪ್ರಶಸ್ತಿ, ಪರ್ಲ ಪ್ರಶಸ್ತಿ, ನೀಲ ಗಂಗಾ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಎಂ.ಇ.ಎಸ್. ಕಾಲೇಜಿನ ರಜತೋತ್ಸವ ಪ್ರಶಸ್ತಿ ಮುಂತಾದವುಗಳನ್ನು ಮುಖ್ಯವಾಗಿ ಹೆಸರಿಸಬಹುದು.

ಅವರ ವಿದ್ಯಾರ್ಹತೆಯೂ ಸಾಮಾನ್ಯವಾದುದಲ್ಲ. ಕನ್ನಡದಲ್ಲಿ ಎಂಎ, ಪಿಎಚ್‌ಡಿ, ಇಂಗ್ಲಿಷಿನಲ್ಲಿ ಎಂಎ, 'ಲಾ' ಪದವಿ, ಫ್ರೆಂಚ್‌ನಲ್ಲಿ ಡಿಪ್ಲೋಮಾ, ಹಿಂದಿಯಲ್ಲಿ ಸಾಹಿತ್ಯ ರತ್ನ- ಹೀಗೆ ಬೆಳೆಯುತ್ತದೆ ಅವರ ವಿದ್ಯಾರ್ಹತೆಗಳು.

ಇಂತಹ ಪ್ರತಿಭಾಶೀಲ ವ್ಯಕ್ತಿ ನಮ್ಮ ಪ್ರಾರ್ಥನೆಯನ್ನೂ ಮನ್ನಿಸಿ ನಮಗಾಗಿ, ಮಕ್ಕಳಿಗಾಗಿ ಹಿಂದೂಧರ್ಮದ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ ಕೃತಿಗಳನ್ನು ಕಥಾರೂಪದಲ್ಲಿ ಬರೆದುಕೊಟ್ಟಿದ್ದು ನಮ್ಮ ಅದೃಷ್ಟ. ಈ ಎರಡು ಕೃತಿಗಳಲ್ಲದೆ ನಮ್ಮ ಸಂಸ್ಕೃತಿ ಸಂಬಂಧವಾದ ಇನ್ನೂ ಹಲವಾರು ಕೃತಿಗಳನ್ನು ಬರೆದು ಕೊಡಲು ಒಪ್ಪಿದ್ದಾರೆ. ಅದಕ್ಕಾಗಿ ನಾವು ಅವರಿಗೆ ಎಂದೆಂದಿಗೂ ಋಣಿಯಾಗಿದ್ದೇವೆ. ನಮ್ಮ ಕೃತಿಮಾಲೆಯಲ್ಲಿ ಬಂದಿರುವ ಈ ರಾಮಾಯಣ ಕೃತಿ ಎಲ್ಲರಿಗೂ ಮೆಚ್ಚುಗೆಯಾಗುವುದೆಂಬ ಭರವಸೆ ಇದೆ.

ಬಿಡುವಿಲ್ಲದ ಅವರ ವೇಳೆಯನ್ನು ಈ ಕೃತಿ ರಚನೆಗೆ ಮತ್ತು ಇನ್ನೂ ಅನೇಕ ಕೃತಿಗಳಿಗೆ ಮೀಸಲು ಇಟ್ಟಿರುವುದಕ್ಕಾಗಿ ಅವರಿಗೆ ನಾನು ಹೃತ್ಪೂರ್ವಕವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

– ಪ್ರಕಾಶಕರು

₹150

